# ಮೋಕ್ಷಗುಂಡಂ ವಿಶ್ವೇಶ್ವರಯ್ಯ

**ವಿ. ಎಸ್. ನಾರಾಯಣರಾವ್**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

# ಲೇಖಕನ ನಿವೇದನೆ

"ಮೈಸೂರು ಸಂಸ್ಥಾನವು ಪ್ರಕೃತಿಯ ಕೃಪೆಯಿಂದ ಹಲವು ವೈಶಿಷ್ಟ್ಯಗಳಿಗೆ ತೌರುಮನೆಯಾಗಿದೆ—ಗೇರುಸೊಪ್ಪೆ ಮತ್ತು ಶಿವನಸಮುದ್ರ ಜಲಪಾತಗಳು, ಗೋಮಟೇಶ್ವರ ವಿಗ್ರಹ, ಬೇಲೂರು ಹಳೇಬೀಡು ದೇವಾಲಯಗಳು, ಕನ್ನಂಬಾಡಿ ಕಟ್ಟೆ, ಭದ್ರಾವತಿ ಕಬ್ಬಿಣ ಕಾರ್ಖಾನೆ ಮುಂತಾದುವು ಮೈಸೂರಿನ ವೈಶಿಷ್ಟ್ಯದ ಹೆಗ್ಗುರುತುಗಳಾಗಿವೆ. ಪ್ರಕೃತಿಯ ಕೃಪೆಯು ಮೈಸೂರಿನ ಮೇಲಿರುವಂತೆಯೇ, ದೈವಕೃಪೆಯೂ ಮೈಸೂರಿನ ಮೇಲಿದೆ. ಮೈಸೂರಿನ ಮಾನವ ವೈಶಿಷ್ಟ್ಯದ ಹಿರಿಮೆಯನ್ನು ದಿಗಂತದ ವರೆಗೂ ಹರಡುವಂತೆ ಮಾಡಿದ ಮಹನೀಯರು ಕೆಲವರು ಮೈಸೂರಿನಲ್ಲಿ ಹುಟ್ಟಿದರು ಇಂಥ ಮಹನೀಯರಲ್ಲಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಅಗ್ರಗಣ್ಯರು. ಶಿಸ್ತಿನ ಜೀವನ, ದೇಶಾಭ್ಯುದಯಕ್ಕೆ ಸಂಪೂರ್ಣವಾಗಿ ಮುಡುಪಿಟ್ಟ ಮೇಧಾಶಕ್ತಿ, ತಮ್ಮ ಆದಾಯದ ಹೆಚ್ಚು ಭಾಗವನ್ನು ಪರೋಪಕಾರಕ್ಕಾಗಿ ವಿನಿಯೋಗಿಸುವ ಉದಾರತೆ, ನಿಸ್ಪೃಹತೆಯಿಂದ ಕೂಡಿದ ಕಾರ್ಯತತ್ಪರತೆ—ಈ ಕಲ್ಯಾಣಗುಣಗಳೆಲ್ಲವೂ ಇರುವ ಮತ್ತೊಬ್ಬ ವ್ಯಕ್ತಿ ಸಿಗುವುದಿಲ್ಲವೆಂದೂ ಮನಸ್ಸಿಗೆ ಹೊಳೆಯಿತು." ಮೈಸೂರಿನ ಮುಖ್ಯಮಂತ್ರಿಯೂ ಕೇಂದ್ರ ಸರ್ಕಾರದ ಸಚಿವರೂ ಆಗಿದ್ದ ದಿವಂಗತ ಕೆಂಗಲ್ ಹನುಮಂತಯ್ಯನವರ ಸ್ಮರಣೀಯ ವಾಕ್ಯಗಳಿವು.

ನಮ್ಮ ದೇಶದಲ್ಲಿ ರಾಜಕೀಯದಲ್ಲಿ, ಪಾರಮಾರ್ಥಿಕ ವಿಚಾರಗಳಲ್ಲಿ ಹೆಸರಾಂತ ವ್ಯಕ್ತಿಗಳಿಗೆ ಕೊರತೆ ಇಲ್ಲ. ಆದರೆ ಕೈಗಾರಿಕೋದ್ಯಮಗಳಲ್ಲಿ ಕೀರ್ತಿವೆತ್ತವರ ಸಂಖ್ಯೆ ವಿರಳ. ಇಂಥ ವಿರಳರಲ್ಲಿ ವಿಭೂತಿ ಪುರುಷರೆನಿಸಿಕೊಂಡವರಲ್ಲಿ ರತ್ನಪ್ರಾಯರಾದವರು ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು. ಅವರ ಕೀರ್ತಿ ಕೇವಲ ಕರ್ನಾಟಕಕ್ಕೆ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಅವರ ಹೆಸರಿನಂತೆಯೇ ವಿಶ್ವವ್ಯಾಪಕ.

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಪರಿಪೂರ್ಣ ಜೀವನ ಚರಿತ್ರೆ ಆಂಗ್ಲಭಾಷೆಯಲ್ಲಿ 1973ರಲ್ಲಿ ಪ್ರಕಟವಾಯಿತು. ಐದು ವರ್ಷಗಳ ನಂತರ "ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಜೀವನ ಮತ್ತು ಸಾಧನೆ" ಮತ್ತಷ್ಟು ವಿಸ್ತೃತಗೊಂಡು ಕನ್ನಡದಲ್ಲಿ ಹೊರಬಂತು. ಇವೆರಡು ಗ್ರಂಥಗಳನ್ನೂ ಮೈಸೂರಿನ ಗೀತಾ ಬುಕ್ ಹೌಸ್ ಇವರು ಪ್ರಕಟಿಸಿರುತ್ತಾರೆ. ಅವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಕನ್ನಡದಲ್ಲಿ ಬರೆಯುವಂತೆ ಪ್ರೋತ್ಸಾಹಿಸಿರುವ 'ನ್ಯಾಷನಲ್ ಬುಕ್ ಟ್ರಸ್ಟ್'ಗೆ ನಾನು ಕೃತಜ್ಞ. ಈ ಕಿರಿ ಪುಸ್ತಕವು ವಿಶ್ವೇಶ್ವರಯ್ಯನವರ ಸವಿಸ್ತಾರ ಜೀವನ ಚರಿತ್ರೆ ಕೊಂಡು ಓದುವಂತೆ ವಾಚಕರನ್ನು ಉತ್ತೇಜಿತಗೊಳಿಸಿದರೆ ನನ್ನ ಶ್ರಮಕ್ಕೆ ಪ್ರತಿಫಲ ದೊರೆತಂತೆ ಆದೀತು. ಹಾಗಾಗಲೆಂದು ಆಶಿಸುವ,

ವಿ. ಎಸ್. ನಾರಾಯಣರಾವ್.

# ಪೀಠಿಕೆ

"ಮೈಸೂರು ಸಂಸ್ಥಾನವು ಪ್ರಕೃತಿಯ ಕೃಪೆಯಿಂದ ಹಲವು ವೈಶಿಷ್ಟ್ಯಗಳಿಗೆ ತೌರುಮನೆಯಾಗಿದೆ. ಗೇರುಸೊಪ್ಪೆ ಮತ್ತು ಶಿವನಸಮುದ್ರ ಜಲಪಾತಗಳು, ಬೃಹತ್ ಗೋಮಟೇಶ್ವರ ವಿಗ್ರಹ, ಕನ್ನಂಬಾಡಿ ಕಟ್ಟೆ, ಬೇಲೂರು, ಹಳೇಬೀಡು ದೇವಾಲಯಗಳು ಮುಂತಾದುವು ಮೈಸೂರಿನ ವೈಶಿಷ್ಟ್ಯದ ಹೆಗ್ಗುರುತುಗಳಾಗಿವೆ. ಪ್ರಕೃತಿಯ ಕೃಪೆ ಮೈಸೂರಿನ ಮೇಲಿರುವಂತೆಯೇ, ದೈವಕೃಪೆಯೂ ಮೈಸೂರಿನ ಮೇಲಿದೆ. ಮೈಸೂರಿನ ಮಾನವ ವೈಶಿಷ್ಟ್ಯದ ಹಿರಿಮೆಯನ್ನು ದಿಗಂತದ ವರೆಗೂ ಹರಡುವಂತೆ ಮಾಡಿರುವ ಮಹನೀಯರು ಕೆಲವರು ಮೈಸೂರಿನಲ್ಲಿಯೇ ಹುಟ್ಟಿದರು. ಇಂಥ ಮಹನೀಯರಲ್ಲಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಅಗ್ರಗಣ್ಯರು."

ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ದಿವಂಗತ ಕೆ. ಹನುಮಂತಯ್ಯನವರ ವಾಕ್ಯಗಳಿವು.

ಎಂಜನಿಯರ್ ತಂತ್ರಜ್ಞಾನಕ್ಕೆ, ನೀರಾವರಿ ಯೋಜನೆಗಳಿಗೆ, ಶಿಸ್ತಿನ ಜೀವನಕ್ಕೆ ಕಾರ್ಯದಕ್ಷತೆಗೆ, ಕೈಗಾರಿಕೋನ್ನತಿಗೆ, ನವನಿರ್ಮಾಣಕ್ಕೆ, ಭಾರತದ ಹಾಗೂ ಮೈಸೂರು ಸಂಸ್ಥಾನದ ನಾನಾ ಮುಖ ಪ್ರಗತಿಗೆ, ನಿಷ್ಕಳಂಕ, ನಿರ್ಮಲ ಜೀವನಕ್ಕೆ, ಪ್ರಾಮಾಣಿಕ ಸೇವಾತತ್ಪರತೆಗೆ, ಸ್ವಾಭಿಮಾನಕ್ಕೆ ಹೆಸರಾಂತವರು ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು. ಒಂದು ದೊಡ್ಡ ಸಂಸ್ಥಾನದ ದಿವಾನರಾಗಿ ದಕ್ಷ ಆಡಳಿತಗಾರ ಎನಿಸಿಕೊಂಡ ಎಂಜನಿಯರುಗಳಲ್ಲಿ ಇವರು ಮೊದಲಿಗರು.

"ಶಿಸ್ತಿನ ಜೀವನ, ದೇಶಾಭ್ಯುದಯಕ್ಕೆ ಸಂಪೂರ್ಣವಾಗಿ ಮುಡುಪಿಟ್ಟ ಮೇಧಾಶಕ್ತಿ, ತಮ್ಮ ಆದಾಯದ ಹೆಚ್ಚು ಭಾಗವನ್ನು ಪರೋಪಕಾರಕ್ಕಾಗಿ ವಿನಿಯೋಗಿಸುವ ಉದಾರತೆ, ನಿಸ್ಪೃಹತೆಯಿಂದ ಕೂಡಿದ ಕಾರ್ಯತತ್ಪರತೆ—ಈ ಕಲ್ಯಾಣಗುಣಗಳೆಲ್ಲವೂ ಇರುವ ಮತ್ತೊಬ್ಬ ಉನ್ನತ ಮಟ್ಟದ ವೃದ್ಧರು ಮತ್ತೊಬ್ಬರಿಲ್ಲ ಎನಿಸಿತು" ಎಂದಿರುತ್ತಾರೆ ಕೆ. ಹನುಮಂತಯ್ಯನವರು. ಇಂಥ ನುಡಿಗಳನ್ನು ನುಡಿದಿರುವ ಮೇಧಾವಿ ಅನುಭವಿಗಳು ಒಬ್ಬಿಬ್ಬರಲ್ಲ, ಹಲವಾರು ಬಲ್ಲವರು.

ಬಡತನದಲ್ಲಿ ಹುಟ್ಟಿ ಬೆಳೆದು ಬಾಳಿ ಎಂಜನಿಯರ್ ಪದವೀಧರರಾಗಿ, ಮೊದಲು ಬೊಂಬಾಯಿ ಸರ್ಕಾರದಲ್ಲಿ ಸೇರಿ ಸ್ವಾಭಿಮಾನದಿಂದ ಉನ್ನತ ಪದವಿಗೆ ರಾಜೀನಾಮೆ ಸಲ್ಲಿಸಿ, ತದನಂತರ ಮಹಾರಾಜರ ಕೋರಿಕೆಯಂತೆ ಮೈಸೂರಿಗೆ ದಯಮಾಡಿಸಿ

ಮುಖ್ಯ ಎಂಜಿನಿಯರಾಗಿ, ದಿವಾನರಾಗಿ ಅವರು ಸಲ್ಲಿಸಿರುವ ಸೇವೆ ಅಪಾರ. ಭಾರತದ ಇತರ ಎಲ್ಲ ಪ್ರಾಂತಗಳಿಗೂ, ರಾಜ್ಯಗಳಿಗೂ ಮೈಸೂರು ಆದರ್ಶ ರಾಜ್ಯವಾಗಬೇಕು ಎಂಬ ದೇಶಾಭಿಮಾನದಿಂದ, ಉತ್ಕಟ ಆಕಾಂಕ್ಷೆಯಿಂದ ಅವರು ದುಡಿದರು. ಸದುದ್ದೇಶ ಪೂರಿತವಾದ ಅವರ ದೂರದೃಷ್ಟಿ ಬಹುಮಟ್ಟಿಗೆ ಕೈಗೂಡಿ, ದೇಶದ ಉನ್ನತಿಗೆ ಪ್ರಗತಿಗೆ ನೀರೆರೆದಿವೆ.

ಪಾಶ್ಚಾತ್ಯ ರಾಷ್ಟ್ರಗಳ ಆರ್ಥಿಕ ಹಾಗೂ ವೈಜ್ಞಾನಿಕ ಪ್ರಗತಿಗೆ, ಔನ್ನತ್ಯಕ್ಕೆ ಕಾರಣ ಅರಸುತ್ತ ದೇಶವಿದೇಶಗಳಲ್ಲಿ ಸಂಚರಿಸಿ, ಅಭ್ಯಸಿಸಿ, ಅವರ ಸಾಧನಮಾರ್ಗಗಳನ್ನು ಭಾರತಕ್ಕೆ ಅಳವಡಿಸಿಕೊಳ್ಳಲು ಪ್ರಯತ್ನಿಸಿದರು. 'ಔದ್ಯೋಗೀಕರಣ' ಅವರ ಮಂತ್ರ ವಾಗಿತ್ತು. ಆರ್ಥಿಕ ಯೋಜನೆಯ ಪಿತಾಮಹರಾಗಿ ಭಾರತದ ಆರ್ಥಿಕ ಯೋಜನೆಯ ಮಾರ್ಗದರ್ಶಕರಾದರು. ಮಹಾತ್ಮಾ ಗಾಂಧೀಯವರಿಗೆ ಇವರಲ್ಲಿ ತುಂಬ ಗೌರವ. ಅಸ್ಪೃಶ್ಯರ, ಹಿಂದುಳಿದ ವರ್ಗದವರ, ಸ್ತ್ರೀಯರ ಉನ್ನತಿಗಾಗಿ ಇವರು ಮಹಾತ್ಮರಿ ಗಿಂತ ಮೊದಲೇ ಕೈಗೊಂಡ ಕಾರ್ಯಗಳು ಅವರ ಮೆಚ್ಚುಗೆಗೆ ಪಾತ್ರವಾದುವು.

ಎಲ್ಲಕ್ಕಿಂತ ಮಿಗಿಲಾಗಿ ಇವರ ನಿಷ್ಕಳಂಕ, ಪ್ರಾಮಾಣಿಕ ಜೀವನ ಗಮನಾರ್ಹ. ಸರ್ಕಾರದ ಒಂದು ಬಿಡಿ ಕಾಸನ್ನೂ ತಮ್ಮ ಸ್ವಂತಕ್ಕಾಗಿ ಬಳಸಿಕೊಂಡವರಲ್ಲ. ತಮ್ಮ ಅಧಿಕಾರ ಸ್ಥಾನ ದುರುಪಯೋಗಪಡಿಸಿಕೊಂಡವರಲ್ಲ. ಇವರ ಕಳಂಕರಹಿತ ಜೀವನ, ಅನುಕರಣೀಯ.

ವಿಶ್ವೇಶ್ವರಯ್ಯನವರ ಜೀವನ, ಯೋಜನೆ ಸಾಧನೆಗಳನ್ನು ಈ ಸಣ್ಣ ಪುಸ್ತಕದಲ್ಲಿ ವಿವರವಾಗಿ ಕೊಡಲು ಸಾಧ್ಯವಿಲ್ಲ. ಅವರ ವಿಷಯವಾಗಿ ಇನ್ನೂ ಹೆಚ್ಚು ತಿಳಿಯ ಬೇಕೆಂಬ ಬಯಕೆ ಇದು ಕೆರಳಿಸಿದರೆ ಇದರ ಪ್ರಕಟನೆ ಸಾರ್ಥಕವಾಯಿತೆಂದು ತೃಪ್ತಿಪಡ ಬಹುದು. ಇನ್ನೂ ಹೆಚ್ಚು ವಿಷಯ ತಿಳಿಯಲಪೇಕ್ಷಿಸುವವರಿಗೆ ಮೈಸೂರಿನ ಗೀತಾ ಬುಕ್ ಹೌಸ್ ಅವರು ಪ್ರಕಟಿಸಿರುವ 'ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಜೀವನ ಮತ್ತು ಸಾಧನೆ' ಅವರ ಪರಿಪೂರ್ಣ ಜೀವನದ ಪರಿಚಯ ಮಾಡಿಕೊಡಬಲ್ಲುದು.

ಈ ಪುಸ್ತಕ ಬರೆಯಲು ನನಗೆ ಅವಕಾಶ ಮಾಡಿಕೊಟ್ಟು ಅದನ್ನು ಪ್ರಕಟಿಸಿರುವ ನ್ಯಾಷನಲ್ ಬುಕ್ ಟ್ರಸ್ಟ್‌ನವರಿಗೆ ನಾನು ಕೃತಜ್ಞ.

ವಿ. ಎಸ್. ನಾರಾಯಣರಾವ್.

## ವಿಷಯಸೂಚಿ

# 1. ಜನನ, ಜವ್ವನ

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು 1860ರ ಆಗಸ್ಟ್ ತಿಂಗಳ 27ರಂದು ಆಗಿನ ಮೈಸೂರು ಸಂಸ್ಥಾನದ ಕೋಲಾರ ಜಿಲ್ಲೆಯ, ಚಿಕ್ಕಬಳ್ಳಾಪುರ ತಾಲ್ಲೂಕ್ಕಿನ ಮುದ್ದೇನ ಹಳ್ಳಿ ಎಂಬ ಗ್ರಾಮದಲ್ಲಿ ಜನಿಸಿದರು. ತಂದೆ ಶ್ರೀನಿವಾಸ ಶಾಸ್ತ್ರಿ. ತಾಯಿ ವೆಂಕಟ ಲಕ್ಷ್ಮಮ್ಮ. ಇದೇ ವರ್ಷದಲ್ಲಿ ಭಾರತದ ಮಹಾ ವಿಭೂತಿ ಪುರುಷರಾದ ಜವಾಹರಲಾಲರ ತಂದೆ ಮೋತಿಲಾಲ್ ನೆಹರೂ, ಬನಾರಸ್ ವಿಶ್ವವಿದ್ಯಾಲಯದ ಸ್ಥಾಪಕ ಪಂಡಿತ ಮದನಮೋಹನ ಮಾಲವೀಯ, ನೊಬೆಲ್ ಪ್ರಶಸ್ತಿ ವಿಜೇತ, ಕವಿಸಾರ್ವಭೌಮ ರವೀಂದ್ರನಾಥ ಠಾಕೂರರು ಜನ್ಮತಾಳಿದ್ದು ಗಮನಾರ್ಹ.

ಮೋಕ್ಷಗುಂಡಂ ಆಂಧ್ರದ ಕರ್ನೂಲು ಜಿಲ್ಲೆಯ ಸಿದ್ದಲೂರು ಗ್ರಾಮಕ್ಕೆ ಸೇರಿದ ಒಂದು ಅಗ್ರಹಾರ. ಇದೊಂದು ಪವಿತ್ರ ತೀರ್ಥಯಾತ್ರಾ ಸ್ಥಳ. ಇಲ್ಲಿಯ ಕುಂಡದಲ್ಲಿ ಸ್ನಾನ ಮಾಡಿದರೆ ಮೋಕ್ಷ ಪ್ರಾಪ್ತವಾಗುತ್ತದೆ ಎಂಬ ನಂಬಿಕೆ. ವಿಶ್ವೇಶ್ವರಯ್ಯನವರ ಪೂರ್ವಜರು ತಮಗೆ ದಾನವಾಗಿ ಬಂದ ಈ ಅಗ್ರಹಾರದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಈ ಕುಟುಂಬಕ್ಕೆ ಮೋಕ್ಷಗುಂಡಂ ಎಂಬ ಹೆಸರು ಸ್ಥಿರವಾಯಿತು. ವಿಶ್ವೇಶ್ವರಯ್ಯನವರ ಹಿರಿಯರು ಹದಿನೆಂಟನೆಯ ಶತಮಾನದಲ್ಲಿ ಮುದ್ದೇನಹಳ್ಳಿಗೆ ವಲಸೆ ಬಂದರು. ವಿಶ್ವೇಶ್ವರ ಜನ್ಮ ತಾಳಿದ್ದು ಇಲ್ಲಿಯೇ.

ವಿಶ್ವೇಶ್ವರಯ್ಯನವರ ಮಾತಾಮಹರು ತಮಿಳುನಾಡಿಗೆ ಸೇರಿದವರು. ಶ್ರೀರಂಗದ ಸಮೀಪದ ಜಂಬುಕೇಶ್ವರದ ಕೊಂಡಯ್ಯಪೇಟೆ, ಪಿತಾಮಹರ ಜನ್ಮಸ್ಥಳ. ಶ್ರೀನಿವಾಸ ಶಾಸ್ತ್ರಿಗಳು ಕುಟುಂಬ ಸಮೇತ ಕಂಚಿ ಕಾಮಕೋಟಿಯ ಪೀಠಾಧಿಪತಿಗಳ ದರುಶನ ಕಾಂಕ್ಷಿಗಳಾಗಿ ದಯಮಾಡಿಸಿದ್ದಾಗ ಜಂಬುಕೇಶ್ವರದ ತಿರುವಾನೆಕಾವಲ್ ಎಂಬಲ್ಲಿ ವಟು ವಿಶ್ವೇಶ್ವರನಿಗೆ ಉಚಿತ ಬ್ರಹ್ಮೋಪದೇಶ ನಡೆಯಿತು. ಶ್ರೀನಿವಾಸ ಶಾಸ್ತ್ರಿಗಳು ಬಹುಕಾಲ ಉಳಿಯಲಿಲ್ಲ. ಆಗ ಆಂಧ್ರಪ್ರಾಂತದ ಭಾಗವಾಗಿದ್ದ ರಾಯಚೂರಿನಲ್ಲಿ ತೀರ್ಥಯಾತ್ರೆಯಲ್ಲಿದ್ದಾಗ ಸ್ವರ್ಗಸ್ಥರಾದರು. ಆಗ ವಿಶ್ವೇಶ್ವರನ ವಯಸ್ಸು 15.

ಈ ವಯಸ್ಸಿಗೆ ವಿಶ್ವೇಶ್ವರ ಚಿಕ್ಕ ಬಳ್ಳಾಪುರದ ಶಾಲೆಯ ವಿದ್ಯಾರ್ಥಿ; ಲೋಅರ್ ಸೆಕೆಂಡರಿ ಶಿಕ್ಷಣ ಇಲ್ಲಿಯೇ ಮುಗಿಸಿದ. ಗಂಡ ಮೃತನಾದ ಮೇಲೆ ಮಗನ ಶಿಕ್ಷಣ ಮುಂದುವರಿಸುವುದು ಹೇಗೆ? ಈ ಚಿಂತೆ ತಾಯಿಗೆ. ತಾಯಿಯ ಸಹೋದರ ಎಚ್. ರಾಮಯ್ಯನವರಿಗೆ ವಿಷಯ ತಿಳಿಯಿತು. ವಿಶ್ವೇಶ್ವರನನ್ನು ಬೆಂಗಳೂರಿಗೆ ಬರಮಾಡಿ

ಕೊಂಡರು. 1875ರಲ್ಲಿ ವೆಸ್ಲಿಯನ್ ಮಿಷನ್ ಪ್ರೌಢಶಿಕ್ಷಣ ಶಾಲೆಗೆ ಸೇರಿಸಿದರು. ಶಿಕ್ಷಣ ಮುಂದುವರೆಯಿತು.

ವಿಶ್ವೇಶ್ವರನಿಗೆ ಗುರುಗಳಲ್ಲಿ ಭಯಭಕ್ತಿ, ಪೂಜ್ಯಭಾವನೆ. ಉಪಾಧ್ಯಾಯರಿಗೂ ಬುದ್ಧಿವಂತ ಶಿಷ್ಯನಲ್ಲಿ ಪ್ರೀತಿ. ತನ್ನ ಶಿಷ್ಯ ತುಂಬ ಬುದ್ಧಿವಂತ ಎಂದು ಎಲ್ಲರಲ್ಲೂ ಹೇಳಿಕೊಳ್ಳುವರು. ಹೀಗೆ ಶಿಷ್ಯನಲ್ಲಿ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದ ಉಪಾಧ್ಯಾಯರಲ್ಲಿ ಕೃಷ್ಣಗಿರಿ ರಾಘವೇಂದ್ರರಾಯರೂ ಒಬ್ಬರು.

ಉಪಾಧ್ಯಾಯರ ವೇತನ ತುಂಬ ಕಡಮೆ. ಈ ವೇತನದಿಂದ ರಾಘವೇಂದ್ರ ರಾಯರಿಗೆ ಸಂಸಾರ ನಿರ್ವಹಿಸುವುದು ಸಾಧ್ಯವಿರಲಿಲ್ಲ. ತಮ್ಮ ವೃತ್ತಿಗೆ ರಾಜೀನಾಮೆ ಸಲ್ಲಿಸಿ ಬೆಂಗಳೂರಿಗೆ ಬಂದರು. ವಕೀಲರಾದರು, ಚಿಕ್ಕಪೇಟೆಯಲ್ಲಿ ಇವರ ಕಚೇರಿ. ಎಂದಿನಂತೆ ಒಂದುದಿನ ಜನಭರಿತ ಚಿಕ್ಕ ಪೇಟೆಯಲ್ಲಿ ನಡೆದುಬರುತ್ತಿದ್ದರು. ಹಠಾತ್ತನೆ ಎರಡು ಕುದುರೆಗಳನ್ನು ಕಟ್ಟಿದ್ದ ಸಾರೋಟು ಇವರ ಬಳಿ ಬಂದು ನಿಂತಿತು. ಅಚ್ಚುಕಟ್ಟಾದ ವಿದೇಶಿ ಉಡುಪು, ಮೈಸೂರು ಪೇಟ ಧರಿಸಿದ್ದ ಒಬ್ಬ ವ್ಯಕ್ತಿ ಸಾರೋಟಿನಿಂದ ಇಳಿದ. ತೆಳ್ಳನೆಯ ಮೈ, ಜ್ವಲಂತ ಕಣ್ಣುಗಳು, ತೀಕ್ಷ್ಣ ದೃಷ್ಟಿ. ಇವನ್ಯಾರು ಮಹಾನುಭಾವ ಎಂದು ಚಕಿತರಾದರು ರಾಘವೇಂದ್ರರಾಯರು. ಇಷ್ಟರಲ್ಲಿ ಆತ ಸಮೀಪಕ್ಕೆ ಬಂದು ನಮ್ರತೆಯಿಂದ ಕೈಜೋಡಿಸಿ ನಮಸ್ಕರಿಸಿದ.

"ಮೇಷ್ಟ್ರೆ, ನೀವು ನನ್ನನ್ನು ಮರೆತಂತೆ ಇದೆ. ಚಿಕ್ಕಬಳ್ಳಾಪುರದ ಶಾಲೆಯಲ್ಲಿ ಓದುತ್ತಿದ್ದ ನಿಮ್ಮ ಶಿಷ್ಯ ವಿಶ್ವೇಶ್ವರನೇ ನಾನು" ಎಂದ. ರಾಘವೇಂದ್ರರಾಯರಿಗೆ ಆದ ಆನಂದ ಹೇಳತೀರದು. ಆಗ ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ಮುಖ್ಯ ಇಂಜಿನಿಯರ್ ಆಗಿದ್ದರು. ತನ್ನ ಶಿಷ್ಯ ಇಂಥ ಉನ್ನತ ಪದವಿಗೆ ಏರಿದನಲ್ಲ ಎಂಬ ಸಂತೋಷ ವ್ಯಕ್ತಪಡಿಸಿ ಇನ್ನೂ ಉನ್ನತ ಸ್ಥಾನ ದೊರೆಯಲಿ, ಚಿರಂಜೀವಿಯಾಗಿ ಬಾಳು ಎಂದು ಹರಸಿದರು.

ಹೈಸ್ಕೂಲ್ ಶಿಕ್ಷಣ ಮುಗಿಸಿದ ವಿಶ್ವೇಶ್ವರ ಸೆಂಟ್ರಲ್ ಕಾಲೇಜ್ ಸೇರಿದ. ಶಿಕ್ಷಣ ಮುಂದುವರಿಸಲು ಹಣ ಬೇಕಲ್ಲ? ರಾಮಯ್ಯನವರ ಮನೆಯಲ್ಲಿ ಊಟ. ಪುಸ್ತಕ ಮತ್ತು ಇತರ ವೆಚ್ಚಕ್ಕೆ ಹಣದ ಕೊರತೆ. ಇದನ್ನು ತುಂಬಲು ವಿರಾಮ ವೇಳೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡಲು ವ್ಯವಸ್ಥೆ ಮಾಡಿಕೊಂಡ. ಶ್ರೀಮನ್ಮಹಾರಾಜ ರವರ ಮಂತ್ರಿಗಳಾಗಿದ್ದ ಮುದ್ದಯ್ಯನವರ ಮಕ್ಕಳಿಗೆ ಪಾಠ ಹೇಳಿ ಕೊಡುತ್ತಿದ್ದ. ರಾಮಯ್ಯನವರ ಮನೆ ಚಾಮರಾಜ ಪೇಟೆಯಲ್ಲಿ. ಮುದ್ದಯ್ಯನವರ ಬಂಗಲೆ ಕೋಟೆ ಯಲ್ಲಿ. ಒಂದು ಮೈಲಿಯ ಅಂತರ. ಬೆಳಿಗ್ಗೆ ಚಾಮರಾಜ ಪೇಟೆಯಿಂದ ಕೋಟೆಗೆ ಬರುವನು. ಪಾಠ ಹೇಳಿಕೊಟ್ಟು ಊಟಕ್ಕೆ ರಾಮಯ್ಯನವರ ಮನೆಗೆ ಹಿಂತಿರುಗುವನು. ಊಟ ಮುಗಿಸಿ, ಸೆಂಟ್ರಲ್ ಕಾಲೇಜಿಗೆ ಧಾವಿಸುವನು. ಅಂತೂ ದಿನಕ್ಕೆ ಹತ್ತು ಮೈಲಿಗೆ ಕಡಮೆ ಇಲ್ಲದ ನಡೆ.

ಬಡತನ ಅವನಿಗೆ ಕಷ್ಟ ಸಹಿಷ್ಣುತೆ ಕಲಿಸಿತು. ಹದಿನಾರನೆಯ ವಯಸ್ಸಿನಲ್ಲಿ ಮೆಟ್ರಿಕ್ ಪರೀಕ್ಷೆಗೆ ಕಟ್ಟಲು ಹಣ ಇರಲಿಲ್ಲ. ತಾಯಿ ಚಿಕ್ಕಬಳ್ಳಾಪುರದಲ್ಲಿ ಇದ್ದಳು. ಆಗಿನ ಕಾಲಕ್ಕೆ ಅಲ್ಲಿಗೆ ಮೋಟಾರ್ ಬಸ್ ಸೌಲಭ್ಯ ಇರಲಿಲ್ಲ. ನಡೆಯುತ್ತಲೇ ಹೊರಟ 35 ಮೈಲಿಗಳ ದೂರದ ಚಿಕ್ಕಬಳ್ಳಾಪುರಕ್ಕೆ. ವಿಧವೆ ವೆಂಕಟಲಕ್ಷ್ಮಮ್ಮ ಅಥವಾ ಅಕ್ಕಚ್ಚಮ್ಮನಿಗೆ ಹಣ ಎಲ್ಲಿಂದ ಬರಬೇಕು? ನೆರಮನೆಯ ವೈಶ್ಯರಲ್ಲಿ ಪಾತ್ರೆಗಳನ್ನು ಅಡವಿಟ್ಟು ಸಾಲಪಡೆದು ಮಗನಿಗೆ ಹನ್ನೆರಡು ರೂಪಾಯಿ ಕೊಟ್ಟಳು. ರಾತ್ರಿ ವಿಶ್ರಾಂತಿ ಪಡೆದು, ಬೆಳಿಗ್ಗೆ ಎದ್ದು ನಡೆಯುತ್ತಲೇ ಬೆಂಗಳೂರಿಗೆ ಹೊರಟ ವಿಶು. ಸಕಾಲಕ್ಕೆ ಕಾಲೇಜಿಗೆ ಬರಲು ಸಾಧ್ಯವಾಗಲಿಲ್ಲ. ಗುಮಾಸ್ತ ಹಣ ತೆಗೆದುಕೊಳ್ಳಲು ನಿರಾಕರಿಸಿದ. ಕಡೆಗೆ ಒಬ್ಬ ಅಧಿಕಾರಿಯ ಶಿಫಾರಸಿನಿಂದ ಹಣ ತೆಗೆದುಕೊಂಡ. ಆ ವರ್ಷದಲ್ಲಿ ವಿಶ್ವೇಶ್ವರ ಇಡೀ ಸಂಸ್ಥಾನಕ್ಕೆ ಮೊದಲ ಶ್ರೇಣಿಯಲ್ಲಿ ಉತ್ತೀರ್ಣನಾದ.

ವಿಶ್ವೇಶ್ವರ ಸ್ವತಃ ಶಿಸ್ತಿನ ಸಿಪಾಯಿ. ಇತರರಲ್ಲೂ ಇದೇ ಶಿಸ್ತು ನಿರೀಕ್ಷಿಸುವನು. ಮಂತ್ರಿಯ ಮಗನೆಂದು ಅಶಿಸ್ತಿಗಾಗಿ, ಸೋಮಾರಿತನಕ್ಕಾಗಿ ಶಿಷ್ಯರನ್ನು ಶಿಕ್ಷಿಸಲು ಹಿಂಜರಿಯುತ್ತಿರಲಿಲ್ಲ. ಇವನ ಶಿಸ್ತಿನ ಶಿಕ್ಷಣಕ್ಕೆ ಒಳಪಟ್ಟ ನಂಜಪ್ಪ ಮುಂದೆ ವೈದ್ಯನಾದ. ಮೈಸೂರು ಸಂಸ್ಥಾನದ ವೈದ್ಯಕೀಯ ವಿಭಾಗದ ಅತ್ಯುನ್ನತ ಅಧಿಕಾರಸ್ಥಾನದ ಸೀನಿಯರ್ ಸರ್ಜನ್ ಆದ.

ಶ್ರಮವಹಿಸಿ ಶಿಕ್ಷಣ ಮುಂದುವರಿಸುತ್ತಿದ್ದ ವಿಶ್ವೇಶ್ವರ ಪ್ರತಿಯೊಂದು ತರಗತಿಯಲ್ಲೂ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣನಾಗುತ್ತ, ವಿದ್ಯಾರ್ಥಿವೇತನ ಪಡೆಯುತ್ತಿದ್ದ. ಆಗ ಚಾರ್ಲ್ಸ್‌ವಾಟರ್ಸ್ ಎಂಬ ಆಂಗ್ಲರು ಸೆಂಟ್ರಲ್ ಕಾಲೇಜಿನ ಮುಖ್ಯ ಪ್ರಾಧ್ಯಾಪಕರಾಗಿದ್ದರು. ವಿಶ್ವೇಶ್ವರನ ಸನ್ನಡತೆ, ಬುದ್ಧಿವಂತಿಕೆ ಅವರ ಮೆಚ್ಚುಗೆಗೆ ಪಾತ್ರವಾಗಿದ್ದುವು. ತಮ್ಮ ಮೆಚ್ಚುಗೆ ವ್ಯಕ್ತಪಡಿಸಲು ವೆಬ್‌ಸ್ಟರ್ ಆಂಗ್ಲ ನಿಘಂಟನ್ನು ಬಹುಮಾನವಾಗಿ ಕೊಟ್ಟರು. ಅಂದಿನಿಂದ ಪ್ರತಿ ಹೊಸ ಮುದ್ರಣದ ಈ ನಿಘಂಟನ್ನು ಕೊಳ್ಳುವ ಹವ್ಯಾಸ ಅವರಲ್ಲಿ ಬೆಳೆಯಿತು. ಗಣಿತ ಮತ್ತು ಆಂಗ್ಲ ಭಾಷೆಯಲ್ಲಿ ಪ್ರಾವೀಣ್ಯತೆ ಪಡೆದಿದ್ದ ವಿಶ್ವೇಶ್ವರ 1881ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣನಾಗಿ ಪದವೀಧರನಾದ.

ಆಗಿನ ಕಾಲಕ್ಕೆ ಉನ್ನತ ಶಿಕ್ಷಣಕ್ಕೆ ಮೈಸೂರು ಸಂಸ್ಥಾನದಲ್ಲಿ ವ್ಯವಧಾನ ಇರಲಿಲ್ಲ. ಹೊರಪ್ರಾಂತಕ್ಕೆ ಹೋಗಬೇಕಾಗಿತ್ತು. ಮೈಸೂರು ಸರ್ಕಾರ ತನ್ನ ವಿದ್ಯಾರ್ಥಿಗಳಿಗೆ ಇದಕ್ಕಾಗಿ ವಿದ್ಯಾರ್ಥಿವೇತನ ಕೊಡುತ್ತಿತ್ತು. ಇಂಥ ವೇತನ ಪಡೆದು ವಿಶ್ವೇಶ್ವರ ಇಂಜಿನಿಯರಿಂಗ್ ಶಿಕ್ಷಣಕ್ಕಾಗಿ ಪುಣೆಗೆ ಹೋದ. ಮೂರು ವರ್ಷಗಳ ಅವಧಿಯ ವ್ಯಾಸಂಗ ಎರಡೂವರೆ ವರ್ಷಗಳಲ್ಲಿಯೇ ಮುಗಿಸಿದ. ತನ್ನ 23ನೇ ವಯಸ್ಸಿನಲ್ಲಿ 1883ರಲ್ಲಿ ವಿಶ್ವೇಶ್ವರ ಎಲ್. ಸಿ. ಇ. ಮತ್ತು ಇ. ಸಿ. ಇ. ಎಲ್. ಪರೀಕ್ಷೆಗಳಲ್ಲಿ ಅಖಂಡ ಬೊಂಬಾಯಿ ಪ್ರಾಂತಕ್ಕೆ ಮೊದಲ ಶ್ರೇಣಿಯಲ್ಲಿ ಪ್ರಥಮ ಸ್ಥಾನಗಳಿಸಿ

ಉತ್ತೀರ್ಣನಾದ. ಇದು ಈಗಿನ ಬಿ. ಇ. ಡಿಗ್ರಿಗೆ ಸಮ. ಉನ್ನತ ಶ್ರೇಣಿಯಲ್ಲಿ ಉತ್ತೀರ್ಣನಾದುದರಿಂದ ಜೇಮ್ಸ್ ಬರ್ಕ್ಲಿ ಬಂಗಾರದ ಪದಕ ಪಡೆದ.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್ ಚಾರ್ಲ್ಸ್‌ವಾಟರ್ಸ್ ನಿವೃತ್ತರಾದ ಮೇಲೆ ಲಂಡನ್ನಿಗೆ ತೆರಳಿದರು. ವಿಶ್ವೇಶ್ವರಯ್ಯನವರು ಲಂಡನ್ನಿಗೆ ಹಲವಾರು ಬಾರಿ ಹೋಗಿದ್ದರು. ಪ್ರತಿ ಸಾರಿಯೂ ತಮ್ಮ ಹಳೆಯ ಪ್ರಿನ್ಸಿಪಾಲರನ್ನು ಸಂದರ್ಶಿಸಿ ಕೃತಜ್ಞತೆ ಸಲ್ಲಿಸುತ್ತಿದ್ದರು. ವಾಟರ್ಸ್ ಅವರಿಗೂ ತಮ್ಮ ನೆಚ್ಚಿನ ಶಿಷ್ಯನಲ್ಲಿ ತುಂಬ ಪ್ರೀತಿ. ಅಂತ್ಯಕಾಲದಲ್ಲಿ ತಾನು ಧರಿಸುತ್ತಿದ್ದ ಷರಟಿನ ಭಂಗಾರದ ಗುಂಡಿಗಳನ್ನು ವಿಶ್ವೇಶ್ವರನಿಗೆ ತನ್ನ ವಾತ್ಸಲ್ಯದ ಕಾಣಿಕೆಯಾಗಿ ಕೊಡುವಂತೆ ಪತ್ನಿಗೆ ತಿಳಿಸಿದರು. ಪತಿಯ ಮರಣಾ ನಂತರ ಆಕೆ ಭಾರತಕ್ಕೆ ಬಂದು, ಪತಿಯ ಆಣತಿ ಯಂತೆ ಸತಿ ನಡೆದುಕೊಂಡಳು. ಎಂಥ ಅಭಿಮಾನ, ಆದರ್ಶ !

1883ರ ನವೆಂಬರ್ ತಿಂಗಳಿನಲ್ಲಿ ಉತ್ತೀರ್ಣನಾದ ವಿಶ್ವೇಶ್ವರ 1884 ಮಾರ್ಚಿಯಲ್ಲಿ ಬೊಂಬಾಯ ಸರ್ಕಾರದಲ್ಲಿ ಸಹಾಯಕ ಇಂಜಿನಿಯರ್ ಅಧಿಕಾರಿಯಾದ.

ತೆಳ್ಳಗೆ ಬೆಳ್ಳಗೆ ಇದ್ದ ವಿಶ್ವೇಶ್ವರ 30 ವರ್ಷಗಳಿಗೂ ಹೆಚ್ಚು ಕಾಲ ಬದುಕಲಾರ ಎಂದು ಸಂಸ್ಕೃತ ಪಂಡಿತರು ಹಾಸ್ಯಮಾಡುತ್ತಿದ್ದರು. ಆದರೆ ನೂರು ವರ್ಷಗಳಿಗೂ ಹೆಚ್ಚು ಕಾಲ ಇವರು ಸಾರ್ಥಕ ಜೀವನ ನಡೆಸಿದರು. ಪುಣೆಯಲ್ಲಿ ಓದುತ್ತಿದ್ದಾಗ ಬೇಸಿಗೆ ಸೂಟಿಯಲ್ಲಿ ವಿಶ್ವೇಶ್ವರ ಚಿಕ್ಕಬಳ್ಳಾಪುರಕ್ಕೆ ಬರುತ್ತಿದ್ದ. ಇದೇ ಸಂದರ್ಭದಲ್ಲಿ ಮೊದಲ ಮದುವೆ ಆಯಿತು. ಅದೇ ಊರಿನ ಶಾಲೆಯ ಉಪಾಧ್ಯಾಯ ರಾಮಚಂದ್ರ ಶಾಸ್ತ್ರಿಯ ಮಗಳೊಡನೆ ವಿವಾಹ. ತಾಯಿ ಸೊಸೆಗೆ ಸಾವಿತ್ರಿ ಎಂದು ಹೆಸರಿಸಿದಳು. ಸಾವಿತ್ರಿಯನ್ನು ಕರೆದುಕೊಂಡು ಅಕ್ಕಚ್ಚಮ್ಮ ಪುಣೆಗೆ ಮಗನಲ್ಲಿಗೆ ಹೋದರು. ಆದರೆ ಪುಣೆಯ ಆಧುನಿಕ ಜೀವನದೊಂದಿಗೆ ಹೊಂದಿಕೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ. ಚಿಕ್ಕಬಳ್ಳಾಪುರಕ್ಕೆ ಮರಳಿದರು. ಸಾವಿತ್ರಿ ಪತಿಯೊಡನೆ ಉಳಿದಳು. ಅಕ್ಟೋಬರ್ 7, 1888ರಲ್ಲಿ ಮಗುವನ್ನು ಹೆತ್ತಳು. ಆದರೆ ಮಗು ಮತ್ತು ಬಾಣಂತಿ ಇಬ್ಬರೂ ಉಳಿಯಲಿಲ್ಲ. ಆಗ ವೈದ್ಯವಿದ್ಯೆ ಅಷ್ಟಾಗಿ ಅಭಿವೃದ್ಧಿ ಹೊಂದಿರಲಿಲ್ಲ.

ಸೊಸೆಯನ್ನು ಕಳೆದುಕೊಂಡ ಅಕ್ಕಚ್ಚಮ್ಮ ಮಗನಿಗೆ ಮೂರನೆಯ ವರ್ಷವೇ ಎರಡನೆ ಮದುವೆ ಮಾಡಿಸಿದರು. ಸಾವಿತ್ರಿಯಂತೆ ಪತಿವ್ರತೆಯಾಗಿ ಬಾಳಲೆಂದು ಅವಳಿಗೂ ಸಾವಿತ್ರಿ ಎಂದೇ ಹೆಸರಿಸಿದರು. ಏನು ದುರದೃಷ್ಟವೊ ಅವಳೂ ಹೆರಿಗೆಯ ಕಾಲದಲ್ಲಿ ಮಗು ಹೆತ್ತು ಮೃತಳಾದಳು. ಮಗುವೂ ಉಳಿಯಲಿಲ್ಲ.

ಮಾತೆಯ ಮಮತೆಗೆ ಮಿತಿ ಉಂಟೇ. ಮಗ ಎಷ್ಟು ಹೇಳಿದರೂ ಕೇಳದೆ ಮೂರನೆ ಮದುವೆ ಮಾಡಿಸಿದರು. ಸೇಲಂ ಜಿಲ್ಲೆಗೆ ಸೇರಿದ ಕುಪ್ಪಗ್ರಾಮದ ಕನ್ಯೆ. ವಿವಾಹ

ಆಯಿತು. ಹೆಂಡತಿಯನ್ನು ಪುಣೆಗೆ ಕರೆದುಕೊಂಡು ಹೋದರು. ಆದರೆ ಆಕೆಯ ನಡತೆಯಲ್ಲಿ ಸಂದೇಹ ಮೂಡಿತು. ಸೋದರ ಮಾವ ರಾಮಯ್ಯನವರ ಸಲಹೆಯಂತೆ ಹೆಂಡತಿಯನ್ನು ತೊರೆದರು. ಆಕೆ ಬದುಕಿದ್ದ ಕಾಲದವರೆಗೂ ಜೀವನಾಂಶ ಕೊಡುತ್ತಿದ್ದರು. ಹೀಗಾಗಿ ವಿಶ್ವೇಶ್ವರಯ್ಯ ಸಂತತಿ ಹೀನರಾದರು.

ಬೊಂಬಾಯಿ ಸರ್ಕಾರದಲ್ಲಿ ಕೆಲಸಕ್ಕೆ ಸೇರಿಕೊಂಡ ಸ್ವಲ್ಪ ಕಾಲದ ನಂತರ ವಿಶ್ವೇಶ್ವರಯ್ಯ, ಮಹಾರಾಜರಿಗೆ ಗೌರವ ಸಲ್ಲಿಸಲು ಮೈಸೂರಿಗೆ ಬಂದರು. ದಸರಾ ಕಾಲದ ಗಡಿಬಿಡಿ. ಮಹಾರಾಜರನ್ನು ಸಂದರ್ಶಿಸಲು ಸಾಧ್ಯವಾಗಲಿಲ್ಲ. ಆದರೆ ಈ ಸದವಕಾಶ 1887ರ ಡಿಸೆಂಬರ್ 27ರಂದು ಮಹಾರಾಜರು ಬೊಂಬಾಯಿಗೆ ದಯಮಾಡಿಸಿದ್ದಾಗ ಲಭಿಸಿತು. ತನ್ನ ಒಬ್ಬ ಪ್ರಜೆ ಸಣ್ಣ ವಯಸ್ಸಿನಲ್ಲೇ ಐನೂರು ರೂಪಾಯಿಗಳ ವೇತನದ ಹುದ್ದೆ ಬೊಂಬಾಯಿ ಸರ್ಕಾರದಲ್ಲಿ ಗಳಿಸಿಕೊಂಡಿರುವನೆಂಬ ಸಂತಸ ಮಹಾರಾಜರಿಗೆ. ವಿಶ್ವೇಶ್ವರಯ್ಯನವರನ್ನು ಬರಮಾಡಿಸಿಕೊಂಡು ಸಮೀಪದಲ್ಲಿ ಕೂಡಿಸಿಕೊಂಡು ಕುಶಲ ವಿಚಾರಿಸಿದರು. ವಿಶ್ವೇಶ್ವರಯ್ಯನವರಿಗೂ ತುಂಬ ತೃಪ್ತಿ, ಸಂತೋಷ ಆಯಿತು.

# 2. ಸ್ವಚ್ಛಲೀಕವಾಟ

ಅಖಂಡ ಬೊಂಬಾಯಿ ಪ್ರಾಂತಕ್ಕೇ ಇಂಜಿನಿಯರ್ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಗಳಿಸಿದ ವಿಶ್ವೇಶ್ವರಯ್ಯನವರಿಗೆ ಸರ್ಕಾರಿ ಉದ್ಯೋಗ ದೊರೆಯುವುದು ದುರ್ಲಭವಿರಲಿಲ್ಲ. 1884ರಲ್ಲಿ ತಮ್ಮ 23ನೇ ವಯಸ್ಸಿನಲ್ಲಿ ಅವರು ಬೊಂಬಾಯಿ ಸರ್ಕಾರದಲ್ಲಿ ಸಹಾಯಕ ಇಂಜಿನಿಯರಾಗಿ ನೇಮಕರಾದರು. ಉದ್ಯೋಗ ನೌಕರಿ ಪ್ರಾರಂಭವಾದುದು ನಾಸಿಕ ಜಿಲ್ಲೆಯಲ್ಲಿ. ಸರ್ಕಾರ ಅವರನ್ನು ಅಲ್ಲಿ ಬಹುಕಾಲ ಇರಿಸಲಿಲ್ಲ. ಅಲ್ಲಿಂದ ಖಾನ್‌ದೇಶ್ ಜಿಲ್ಲೆಗೆ ವರ್ಗವಾಯಿತು. ಆಗಿನ ಬೊಂಬಾಯಿ ಪ್ರಾಂತ ಬಹಳ ದೊಡ್ಡದಾಗಿತ್ತು. ಗುಜರಾತ್, ಮಹಾರಾಷ್ಟ್ರ ಮತ್ತು ಕರ್ನಾಟಕದ ಕೆಲವು ಭಾಗಗಳನ್ನು ಒಳಗೊಂಡಿತ್ತು. ಖಾನ್‌ದೇಶದ ಧೂಲಿಯ ಇವರ ಕೇಂದ್ರ ಸ್ಥಾನ. ಪಂಜ್ರಾ ನದಿಯಿಂದ ದತಾರಿ ಗ್ರಾಮಕ್ಕೆ 'ಸೈಫನ್' ವಿಧಾನದಿಂದ ನೀರು ಹಾಯಿಸುವ ಕೆಲಸ ಇವರಿಗೆ ವಹಿಸಲ್ಪಟ್ಟಿತು.

ಜವಾಬ್ದಾರಿ ಗುರುತರ. ಕೆಲಸ ಕಠಿಣ. ಅನುಭವ ಸಾಲದು. ಕಾರ್ಯಕ್ಷೇತ್ರ ಹೊಸದು. ಪಂಜ್ರಾ ನದಿಯಿಂದ ಸಣ್ಣ ಕಲ್ಲು ಗುಡ್ಡದ ಮೂಲಕ ಆಚೆಯ ದಡಕ್ಕೆ 'ಸೈಫನ್' ವ್ಯವಸ್ಥೆಯಿಂದ ನೀರು ಸಾಗಿಸಬೇಕಾಗಿತ್ತು. ಬಂಡೆಗಳನ್ನು ಕೊರೆದು ಸುರಂಗ ನಿರ್ಮಿಸಿ, ಅವುಗಳಲ್ಲಿ ಕೊಳವೆಗಳನ್ನು ಜೋಡಿಸಿ, ಮರಳು ತೆಗೆಸಿ ಸ್ವಚ್ಛಗೊಳಿಸಬೇಕು. ಕೆಲಸ ಪ್ರಾರಂಭಿಸಿದ ಕೆಲವೇ ದಿನಗಳಲ್ಲಿ ಮಳೆಗಾಲ ಪ್ರಾರಂಭವಾಯಿತು. ನದಿಯಲ್ಲಿ ನೆರೆ. ಕಾಲುವೆ ತೋಡಿ ಮರಳು ತೆಗೆಸಿದಂತೆ ಪ್ರವಾಹ ಮತ್ತಷ್ಟು ಮರಳನ್ನು ತುಂಬಿಸುತ್ತಿತ್ತು. ಮೇಲಿಂದ ಮೇಲೆ ಮರಗಳನ್ನು ತುಂಬುವ ಕೆಲಸ. ಶ್ರಮ ವೆಚ್ಚ ಎರಡೂ ಹೆಚ್ಚುತ್ತಿತ್ತು. ಮೊದಲೇ ನಿಷ್ಕೃತವಾದ ಅಂದಾಜಿಗಿಂತ ವೆಚ್ಚ ಹೆಚ್ಚು ಮಾಡುವಂತಿರಲಿಲ್ಲ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಮಾಡಲೇನು? ಅನನುಭವಿ ವಿಶ್ವೇಶ್ವರಯ್ಯ ಸಬ್ ಡಿವಿಜನ್ ಅಧಿಕಾರಿಗಳ ಸಲಹೆ ಬಯಸಿದ. ಮಳೆಗಾಲದಲ್ಲಿ ಈ ಕೆಲಸಮಾಡಿ ಮುಗಿಸಲು ಶ್ರಮವೂ ಹೆಚ್ಚು, ವೆಚ್ಚವೂ ಅಧಿಕ. ಆದ ಕಾರಣ ಕಾರ್ಯ ಮುಂದುವರಿಸದೆ ಮಳೆಗಾಲದ ನಂತರ ಪ್ರಾರಂಭಿಸಲು ಅವಕಾಶ ಮಾಡಿಕೊಡುವಂತೆ ಜಿಲ್ಲೆಯ ಎಕ್ಸಿಕ್ಯುಟಿವ್ ಇಂಜಿನಿಯರಿಗೆ ಬರೆಯುವಂತೆ ಅವರು ಸೂಚಿಸಿದರು. ಅದರಂತೆ ವಿಶ್ವೇಶ್ವರಯ್ಯ ಮೇಲಧಿಕಾರಿಗೆ ಪತ್ರ ಬರೆದು, ಧೂಲಿಯಾಗೆ ಹಿಂತಿರುಗಲು ಅನುಮತಿ ಬಯಸಿದ.

ಧೂಲಿಯಾಗೆ ಹಿಂದಿರುಗಲು ಅನುಮತಿ ದೊರಕೀತೆಂದು ವಿಶ್ವೇಶ್ವರಯ್ಯನವರು ಕಾದಿದ್ದರು. ಆದರೆ ಬಂದ ಉತ್ತರ ನಿರೀಕ್ಷೆಗೆ ಹೊರತಾಗಿತ್ತು. "ಆಜ್ಞಾಪಾಲನೆ, ಕಾರ್ಯನಿರ್ವಹಣೆ ಈ ಬಗೆಗೆ ತೋರುತ್ತಿರುವ ಅನಾದರಣೆ ಶುಭದಾಯಕವಲ್ಲ.

ಪ್ರಾರಂಭದಲ್ಲಿಯೇ ಈ ಧೋರಣೆ ತಾಳಿರುವುದು ಒಳಿತಲ್ಲ." ಹೀಗಿತ್ತು ಉತ್ತರ, ಇದರಿಂದ ವಿಶ್ವೇಶ್ವರಯ್ಯನವರ ಉತ್ಸಾಹ ಇಮ್ಮಡಿಸಿತೇ ವಿನಾ ಕುಗ್ಗಲಿಲ್ಲ. ತೊಂದರೆಗಳು ಏನೇ ಇರಲಿ, ಕೆಲಸಮಾಡಿಯೇ ತೀರಲು ನಿಶ್ಚಯಿಸಿದರು. ಅನಿವಾರ್ಯ ಎಡರು ತೊಡರುಗಳು ಬಾರದಿದ್ದಲ್ಲಿ, ಮಳೆಗಾಲದಲ್ಲೂ ಕೆಲಸ ಮುಂದುವರಿಸುವುದಾಗಿಯೂ, ಅಂದಾಜಿಗಿಂತ ವೆಚ್ಚ ಸ್ವಲ್ಪ ಅಧಿಕವಾದರೆ ಅದನ್ನು ಒಪ್ಪಿ ಮಂಜೂರುಮಾಡಬೇಕೆಂದೂ ಮೇಲಧಿಕಾರಿಗೆ ಉತ್ತರ ಬರೆದು ತಿಳಿಸಿದರು.

ಕೆಲಸದ ಸ್ಥಳಕ್ಕೆ ವಿಶ್ವೇಶ್ವರಯ್ಯ ಪ್ರತಿದಿನವೂ ತಮ್ಮ ಬಿಡಾರದಿಂದ ಕುದುರೆಮೇಲೆ ಹೋಗುತ್ತಿದ್ದರು. ಸುಮಾರು ಎರಡೂವರೆ ಮೈಲಿಯ ಅಂತರ. ಪ್ರವಾಹದ ಪರಿಣಾಮವಾಗಿ ಒಂದು ದಿನ ನದಿ ಹಾಯಲು ಸಾಧ್ಯವಾಗಲಿಲ್ಲ. ದತಾರಿಯಲ್ಲಿಯೇ ರಾತ್ರಿ ಉಳಿಯಬೇಕಾಯಿತು. ತಮಗಾಗಿ ಕಷ್ಟಪಡುತ್ತಿದ್ದ ತರುಣ ಇಂಜಿನಿಯರಿಗೆ ತುಂಬ ಸಂತೋಷದಿಂದ ಅತಿಥಿಸತ್ಕಾರ ನೀಡಿದರು. ಪ್ರವಾಹ ಇಳಿಮುಖವಾದ ಮೇಲೆ ಭಿಲ್ಲರು ಕಟ್ಟಿದ ತೆಪ್ಪದ ಸಹಾಯದಿಂದ ನದಿಯನ್ನು ಈಜಿಕೊಂಡು ದಾಟಿ ತಮ್ಮ ಬಿಡಾರಕ್ಕೆ ಬಂದರು. ಕುದುರೆಯನ್ನು ಕೆಲಸಗಾರರು ದಡಕ್ಕೆ ಸಾಗಿಸಿದರು.

'ಸೈಫನ್' ಕೆಲಸದಲ್ಲಿ ತೊಡಗಿದ್ದವರು ಅನುಭವಿಗಳಾಗಿರಲಿಲ್ಲ. ಇಲ್ಲಿ ವಾಸಿಸುತ್ತಿದ್ದವರು ಅನಾಗರಿಕ ಭಿಲ್ಲರು. ಏನೇ ಆಗಲಿ, ಗಾರೆ ಕೆಲಸಗಾರರು, ಕಲ್ಲುಕುಟಿಗರು ಮತ್ತು ಇತರ ಶ್ರಮಜೀವಿಗಳ ಸಹಾಯದಿಂದ ಮಳೆಯನ್ನು ಲಕ್ಷಿಸದೆ ಎರಡೇ ತಿಂಗಳಲ್ಲಿ ಕೆಲಸ ಸಮರ್ಪಕವಾಗಿ ಮುಗಿಸಿದರು. ಪಂಜ್ರಾ ನದಿಯಿಂದ ಆಚೆಯ ದಡಕ್ಕೆ 'ಸೈಫನ್' ವ್ಯವಸ್ಥೆಯ ಕೊಳವೆಗಳ ಮೂಲಕ ನೀರು ಸರಾಗವಾಗಿ ಹರಿಯುವ ವ್ಯವಸ್ಥೆ ಮಾಡಿದರು. ಗ್ರಾಮಸ್ಥರು ಸಂತುಷ್ಟರಾದರು. ತರುಣ ವಿಶ್ವೇಶ್ವರನ ಸಾಹಸ ಕೊಂಡಾಡಿದರು. ಎಲ್ಲಕ್ಕೂ ಮಿಗಿಲಾಗಿ ಅತೃಪ್ತಿ ವ್ಯಕ್ತಪಡಿಸಿದ್ದ ಮೇಲಧಿಕಾರಿ ಎಚ್. ಜಿ. ಪಾಲಿಸಾರ್ ಅವರ ಮೆಚ್ಚುಗೆಗೆ ಪಾತ್ರರಾದರು. ತಾನು ಹಿಂದೆ ಎತ್ತಿದ್ದ ಆಕ್ಷೇಪಣೆ ಹಿಂತೆಗೆದುಕೊಂಡು ಮಳೆಗಾಲವನ್ನು ಲಕ್ಷಿಸದೆ ಸಕಾಲದಲ್ಲಿ ತೃಪ್ತಿಕರವಾಗಿ ಕಾರ್ಯ ನಿರ್ವಹಿಸಿದುದಕ್ಕಾಗಿ ಶ್ಲಾಘಿಸಿ ಪತ್ರ ಬರೆದರು.

ಸರ್ಕಾರದ ಉದ್ಯೋಗದಲ್ಲಿ ಮೇಲಿನ ದರ್ಜೆಗೆ ಏರಲು ಮತ್ತು ಬಡ್ತಿ ಪಡೆಯಲು ಇಲಾಖೆಯ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುತ್ತದೆ. ಇದರಿಂದ ಅರ್ಹತೆಗೆ ಅವರು ಯೋಗ್ಯರಾಗುತ್ತಾರೆ. ಪ್ರಾಂತಭಾಷೆಯ ಅನುಭವಕ್ಕೂ ಒಂದು ಪ್ರಶ್ನೆಪತ್ರಿಕೆ ಇರುತ್ತದೆ. ಪ್ರಾಂತಭಾಷೆ ಮರಾಠಿಯನ್ನು ಚೆನ್ನಾಗಿ ಕಲಿತರು. ಇದಲ್ಲದೆ ಇಂಜಿನಿಯರ್ ಕೆಲಸದಲ್ಲಿ ಪ್ರತ್ಯಕ್ಷ ಅನುಭವದ ಪತ್ರಿಕೆಯೂ ಇರುತ್ತದೆ. ಉದ್ಯೋಗ ಪ್ರಾರಂಭಿಸಿ ಒಂದು ವರ್ಷವೂ ಆಗಿರಲಿಲ್ಲ. ಸಾಕಷ್ಟು ಅನುಭವ ಪಡೆಯದೆ ಪರೀಕ್ಷೆಗೆ ಕೂತು ತೇರ್ಗಡೆಯಾಗುವುದು ಸಾಧ್ಯವೇ? ವಿಶ್ವವಿದ್ಯಾಲಯದ ಎಲ್ಲ ಪರೀಕ್ಷೆಗಳಲ್ಲೂ ಅತ್ಯುನ್ನತ ಶ್ರೇಣಿಯಲ್ಲಿ ಉತ್ತೀರ್ಣರಾಗುತ್ತಿದ್ದ ಇವರನ್ನು ಈ ಕಳವಳ ಕಾಡತೊಡಗಿತು. ಆದರೆ

ಇವರ ಆಂಗ್ಲ ಮೇಲಧಿಕಾರಿ ಇವರ ಸಾಮರ್ಥ್ಯವನ್ನು ಚೆನ್ನಾಗಿ ಅರಿತಿದ್ದ. ಪರೀಕ್ಷೆಗೆ ಕೂಡುವಂತೆ ಪ್ರೋತ್ಸಾಹಿಸಿದ. ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದ ರೆಂದು ಹೇಳಬೇಕಾದ್ದೇ ಇಲ್ಲ. ಯಾವ ಪರೀಕ್ಷೆಯಲ್ಲೂ ವಿಶ್ವೇಶ್ವರಯ್ಯ ಅನುತ್ತೀರ್ಣ ಎನಿಸಿಕೊಳ್ಳಲಿಲ್ಲ. ಇದರ ಪರಿಣಾಮವಾಗಿ, ಕೆಲಸಕ್ಕೆ ಸೇರಿದ ಕೇವಲ ಇಪ್ಪತ್ತು ತಿಂಗಳಲ್ಲಿ ಮೊದಲ ದರ್ಜೆಯ ಇಂಜಿನಿಯರ್ ಆದರು. ಮಾಹೆಯಾನ ಐನೂರು ರೂಪಾಯಿಗಳ ವೇತನವೂ ಲಭಿಸಿತು. ಕನ್ನಡ ನಾಡಿನಿಂದ ಮಹಾರಾಷ್ಟ್ರಕ್ಕೆ ಬಂದು, ಕೆಲಸ ಗಿಟ್ಟಿಸಿ, ಅಲ್ಪ ಕಾಲದಲ್ಲೇ ಮರಾಠಿ ಭಾಷೆ ಕಲಿತು, ಪರೀಕ್ಷೆಯಲ್ಲಿ ಉತ್ತೀರ್ಣ ರಾಗಿ, ಐನೂರು ರೂಪಾಯಿ ವೇತನ ಪಡೆದುದು, ಮೈಸೂರು ಮಹಾರಾಜರ ಪ್ರಶಂಸೆಗೂ ಪಾತ್ರವಾದುದರಲ್ಲಿ ಆಶ್ಚರ್ಯವೇನು?

ಖಾನ್‌ದೇಶ ಮಲೇರಿಯ ಪೀಡಿತ ಪ್ರದೇಶ. ಎಷ್ಟೇ ಜಾಗರೂಕತೆ ವಹಿಸಿದರೂ ಸೊಳ್ಳೆಗಳಿಂದ ಹರಡುವ ಈ ವ್ಯಾಧಿ ಇವರನ್ನೂ ಕಾಡತೊಡಗಿತು. ಇವರು ಜ್ವರ ಪೀಡಿತರಾದರು. ಆರೋಗ್ಯ ಕೆಟ್ಟಿತು. ತಮ್ಮನ್ನು ಬೇರೆ ಕಡೆಗೆ ವರ್ಗಮಾಡ ಬೇಕೆಂದು ಪ್ರಾರ್ಥಿಸಿಕೊಂಡರು. ಎಲ್ಲರ ಸಹಾನುಭೂತಿಗೆ ಪಾತ್ರರಾಗಿದ್ದ ಇವರನ್ನು ಪುಣೆಗೆ ವರ್ಗಮಾಡಲಾಯಿತು. ಸರ್ಕಾರಿ ಕಟ್ಟಡಗಳು, ರಸ್ತೆ ಇವುಗಳ ದುರುಸ್ತಿ, ಮೇಲ್ವಿಚಾರಣೆ ಈ ವಿಭಾಗದ ಹೊಣೆ. ನೀರಾವರಿ ಕೆಲಸದಿಂದ ಅನ್ಯ. ಹೀಗೆಂದು ಹೊಣೆ ವಹಿಸಿಕೊಳ್ಳಲು ವಿಶ್ವೇಶ್ವರಯ್ಯ ಹಿಂಜರಿಯಲಿಲ್ಲ. ತಮ್ಮ ಸಾಮರ್ಥ್ಯದಿಂದ ಇಲ್ಲಿಯೂ ಉತ್ತಮ ಹೆಸರು ಗಳಿಸಿದರು. ಹೊಸ ವಿಭಾಗದ ಅನುಭವ ಪಡೆದರು.

ಉತ್ತಮ ಪ್ರಾಮಾಣಿಕ ಕೆಲಸಗಾರನಿಗೆ ಬೇಡಿಕೆ ಹೆಚ್ಚು. ವಿಶ್ವೇಶ್ವರಯ್ಯನವರಿಗೆ ಬೇರೆ ಪ್ರದೇಶಕ್ಕೆ ಹೋಗುವ ಕರೆ ಬಂತು. ಸಿಂಧ್ ವಿಭಾಗದ ಸಕ್ಕೂರಿಗೆ ಸಿಂಧೂ ನದಿಯಿಂದ ಕುಡಿಯುವ ನೀರು ಒದಗಿಸಬೇಕಾದ ಕಾರ್ಯ. ಸಿಂಧ್ ಆಗ ಬೊಂಬಾಯಿ ಪ್ರಾಂತಕ್ಕೇ ಸೇರಿತ್ತು. ಈ ಕೆಲಸ ನಿರ್ವಹಿಸಲು ಒಬ್ಬ ಆಂಗ್ಲ ಇಂಜಿನಿಯರನ್ನು ನೇಮಿಸ ಲಾಗಿತ್ತು. ಬಲು ಕೆಟ್ಟ ಹವೆ. ಅತಿ ಬಿಸಿಲು, ಅಥವಾ ಅತಿ ಚಳಿ. ಪಟ್ಟಣ ಇನ್ನೂ ಅಭಿವೃದ್ಧಿಯಾಗಿರಲಿಲ್ಲ. ಹವಾಗುಣಕ್ಕೆ ಹೆದರಿ ಅಲ್ಲಿಗೆ ಹೋಗಲು ಅಧಿಕಾರಿಗಳು ಹಿಂಜರಿಯುತ್ತಿದ್ದರು. ಆಂಗ್ಲ ಇಂಜಿನಿಯರ್ ಮೃತನಾದುದೂ ಇದೇ ಕಾರಣದಿಂದ. ಇದರಿಂದ ಭಯ ಮತ್ತಷ್ಟು ಹೆಚ್ಚಿತ್ತು. ಆದಕಾರಣ ಈ ಅನಾರೋಗ್ಯ ಜಿಲ್ಲೆಗೆ ಹೋಗುವಂತೆ ಪ್ರೋತ್ಸಾಹಿಸುವ ವ್ಯವಸ್ಥೆ ಸರ್ಕಾರ ಮಾಡಿತ್ತು. ಇಲ್ಲಿಗೆ ಹೋಗುವವರಿಗೆ ಇನ್ನೂರು ರೂಪಾಯಿ ಹೆಚ್ಚಿನ ವೇತನ, ಅಲ್ಲದೆ ಮನೆ ಬಾಡಿಗೆಗೆ ಐವತ್ತು ರೂಪಾಯಿ ಗಳ ಸಹಾಯ ಧನ ಮತ್ತು ಇತರ ಕೆಲವು ಸೌಲಭ್ಯಗಳು.

ಒಂದು ಸ್ಥಳದಿಂದ ಮತ್ತೊಂದಕ್ಕೆ ವರ್ಗಮಾಡುವಾಗ ನೌಕರನ ಅಭಿಲಾಷೆ ಕೇಳು ವುದು ಸರ್ಕಾರದ ವಾಡಿಕೆ ಅಲ್ಲ. ವರ್ಗ ಮಾಡಿದಲ್ಲಿಗೆ ಹೋಗಲೇಬೇಕು. ಆದರೆ ಉತ್ತಮ ಹೆಸರು ಗಳಿಸಿದ್ದ ತರುಣ ವಿಶ್ವೇಶ್ವರಯ್ಯನನ್ನು ಮೇಲಿನ ಆಂಗ್ಲ ಅಧಿಕಾರಿ

ರೆನಾಲ್ಡ್ ಈ ನಿರ್ಬಂಧಕ್ಕೆ ಒಳಪಡಿಸಲಿಲ್ಲ. ಹೋಗುವಿರಾ? ಎಂದು ಕೇಳಿದ. ಸಾಧಕ ಬಾಧಕಗಳನ್ನು ವಿವರಿಸಿ ತಿಳಿಸಿದ. "ಈ ಕೆಲಸದಿಂದ ಉತ್ತಮ ಅನುಭವ, ಜ್ಞಾನಾರ್ಜನೆ ಆಗಿ, ಪುರೋಭಿವೃದ್ಧಿಗೂ ಖ್ಯಾತಿಗೂ ಸಹಾಯವಾದೀತು. ಈ ಜವಾಬ್ದಾರಿ ಕೆಲಸಕ್ಕೆ ಯೋಗ್ಯರನ್ನು ಸೂಚಿಸುವಂತೆ ಸರ್ಕಾರ ನನ್ನನ್ನು ಕೇಳಿತು. ನಿಸ್ಸಂದೇಹವಾಗಿ ನೀವೇ ಅತ್ಯಂತ ಯೋಗ್ಯರೆಂದು ನಾನು ಸರ್ಕಾರಕ್ಕೆ ತಿಳಿಸಿರುತ್ತೇನೆ. ಅಲ್ಲಿ ಕೆಲಸಮಾಡಲು ಸರ್ಕಾರ ನೀಡುವ ಪ್ರೋತ್ಸಾಹ ನಿಮಗೆ ಸಮಾಧಾನವಾಗುವಂತಿದೆಯೇ? ನೀವೇ ಯೋಚಿಸಿ. ನೀವು ಅಲ್ಲಿ ಸ್ವತಂತ್ರರು. ಎಲ್ಲಕ್ಕೂ ನೀವೇ ಹೊಣೆ." ಮೇಲಧಿಕಾರಿಯಿಂದ ಇಂಥಾ ಪ್ರೋತ್ಸಾಹದ ಪತ್ರ ನಿರಾಕರಿಸುವುದು ವಿಶ್ವೇಶ್ವರಯ್ಯನವರಿಗೆ ಉಚಿತವೆನಿಸಲಿಲ್ಲ. ಆಗಲಿ ಎಂದು ಒಪ್ಪಿಕೊಂಡರು.

ಸಿಂಧೂ ನದಿಯಿಂದ ಸಕ್ಕೂರಿಗೆ ನೀರೊದಗಿಸುವುದು ಈ ಕಾರ್ಯ. ಸಮೀಪದ ಗುಡ್ಡಕ್ಕೆ ನೀರು ಪಂಪ್ ಮಾಡಿ, ಶೋಧಿಸಿ, ನಳಗಳ ಮೂಲಕ ಹಾಯಿಸಿ ನಗರಕ್ಕೆ ನೀರೊದಗಿಸುವ ಯೋಜನೆ ಸಿದ್ಧಪಡಿಸಿದ್ದರು ಹಿಂದೆ ಇದ್ದ ಇಂಜಿನಿಯರ್. ಇದಕ್ಕೆ ಸರ್ಕಾರದ ಮತ್ತು ಪೌರಸಭೆಯ ಒಪ್ಪಿಗೆಯೂ ಲಭಿಸಿತ್ತು. ಬೆಳೆಯುತ್ತಿದ್ದ ಸಕ್ಕೂರ್ ಪೌರಸಭೆಗೆ ಇಷ್ಟು ಹಣ ಒದಗಿಸುವ ಸಾಮರ್ಥ್ಯ ಇರಲಿಲ್ಲ. ಇದೆಲ್ಲವನ್ನೂ ಗಮನಿಸಿ ವಿಶ್ವೇಶ್ವರಯ್ಯನವರು ತಮ್ಮದೇ ಆದ ಒಂದು ಯೋಜನೆ ಸಿದ್ಧಪಡಿಸಿದರು.

ಸಿಂಧೂ ನದಿಯ ನೀರು ತುಂಬ ಬಗ್ಗಡ. ನದಿಯ ತೀರದಲ್ಲಿ ಒಂದು ದೊಡ್ಡ ಬಾವಿ ತೋಡಿಸಿದರು. ನದಿಯ ನೀರು ಮರಳಿನ ಮೂಲಕ ಬಾವಿಯ ಕೆಳಭಾಗಕ್ಕೆ ಇಳಿಯುವಂತೆ ಮಾಡಿದರು. ಮರಳಿನ ಮುಖಾಂತರ ಇಳಿದುಹೋಗುವಾಗ ಬಗ್ಗಡದ ನೀರು ಜಾಲಾಡಿದಂತಾಗಿ ಶುದ್ಧವಾಗುತ್ತದೆ. ಈ ಶುದ್ಧ ನೀರನ್ನು ಗುಡ್ಡದ ಮೇಲಕ್ಕೆ ಪಂಪ್ ಮಾಡಿ ಶೇಖರಿಸುವುದು. ಅನಂತರ ಕೊಳವೆಗಳ ಮೂಲಕ ಸಾಗಿಸುವುದು. ಇದರಿಂದ ನೀರು ಶೋಧಿಸುವ ಪ್ರತ್ಯೇಕ ವ್ಯವಸ್ಥೆ ಮಾಡಬೇಕಾದ್ದು ಅನವಶ್ಯಕವಾಯಿತು. ಪೌರಸಭೆಗೆ ಹಣದ ಉಳಿತಾಯವಾಯಿತು. ಯೋಜನೆ ಎಷ್ಟು ಸರಳ. ಬುದ್ಧಿವಂತಿಕೆಯೇ ಇದಕ್ಕೆ ಮೂಲ. ತಪತೀನದಿಯಿಂದ ಸೂರತ್ ನಗರಕ್ಕೆ ನೀರೊದಗಿಸುವ ಕಾರ್ಯವನ್ನು ಇವರಿಗೇ ಒಪ್ಪಿಸಲಾಯಿತು. ಇದೇ ದಕ್ಷತೆಯಿಂದ ಈ ಕೆಲಸ ನಿರ್ವಹಿಸಿದರು.

ಪುಣೆ ಮತ್ತು ಇದೇ ನಗರದ ಸಮೀಪದ ದಂಡಿನ ಕರ್ಕಿಗೆ, ಮೂಸಾ ನದಿಯ ಕಾಲುವೆಯಿಂದ ನೀರು ಒದಗಿಸಲಾಗುತ್ತಿತ್ತು. ಕಾಲುವೆಯ ನೀರು ಖಡಕವಾಸಲದ ಸಮೀಪದ ಜಲಾಶಯಕ್ಕೆ ಹರಿಯುತ್ತದೆ. ಈ 'ಫೈಪ್' ಜಲಾಶಯದಿಂದ ಶೋಧಿಸಿದ ನೀರನ್ನು ಕರ್ಕಿಗೂ, ಶೋಧಿಸಲ್ಪಡದ ಅಶುದ್ಧ ನೀರನ್ನು ಪುಣೆಗೂ ಒದಗಿಸಲಾಗುತ್ತಿತ್ತು. ಪ್ರಜಾಸಂಖ್ಯೆ ಬೆಳೆದಂತೆ ಸರೋವರ ನೀರನ್ನು ಪೂರೈಸಲಾರದೆ ಹೋಯಿತು. ಬೇಸಿಗೆಯಲ್ಲಿ ಸಾಲದು. ಮಳೆಗಾಲದಲ್ಲಿ ಜಲಾಶಯ ತುಂಬಿ ಕೋಡಿ ಬಿದ್ದು ನೀರು

ವ್ಯರ್ಥವಾಗಿ ಹರಿದುಹೋಗುವುದು. ಈ ನೀರನ್ನು ಶೇಖರಿಸಿ ಇಟ್ಟರೆ ನೀರಿಲ್ಲದ ಕಾಲಕ್ಕೂ ಬಳಸಬಹುದಾಗಿತ್ತು. ಜಲಾಶಯದ ಗೋಡೆ ಎತ್ತರಿಸುವುದು ಒಂದು ಮಾರ್ಗ. ಇದಕ್ಕೆ ವೆಚ್ಚ ಹೆಚ್ಚು. ಗೋಡೆ ಭದ್ರವಾಗಿ ಉಳಿದೀತೋ ಇಲ್ಲವೋ ಎಂಬ ಶಂಕೆ. ಗೋಡೆ ಒಡೆದರೆ ಊರಿಗೆ ಅಪಾರ ಅಪಾಯ. ಏನು ಮಾಡೋಣ ಎಂಬ ತಳಮಳ ಎಂಜಿನಿಯರುಗಳಿಗೆ.

ವಿಶ್ವೇಶ್ವರಯ್ಯನವರು ಹೊಸ ಉಪಾಯವೊಂದನ್ನು ರೂಪಿಸಿದರು. ಉಕ್ಕಿನ ಕವಾಟ ಅಥವಾ ದೊಡ್ಡ ಬಾಗಿಲುಗಳನ್ನು ಮಾಡಿಸಿದರು. ಇವನ್ನು 'ಫೈಫ್' ಜಲಾಶಯದ ತೂಬಿನಲ್ಲಿ ಸ್ಥಾಪಿಸಿದರು. ಇವು 'ಸ್ವಚ್ಛಲೀ' ಎಂದರೆ ಸ್ವಯಂ ತಾವಾಗಿಯೇ ತೆರೆದು ಮುಚ್ಚಿಕೊಳ್ಳುವ ಬಾಗಿಲುಗಳು. ಕೋಡಿಯಲ್ಲಿ ವ್ಯರ್ಥವಾಗಿ ಹರಿದುಹೋಗುವ ನೀರನ್ನು ಎಂಟು ಅಡಿ ಮಟ್ಟದ ಎತ್ತರದ ವರೆಗೆ ಇವು ತಡೆ ಹಿಡಿಯುತ್ತವೆ. ಇದಕ್ಕೂ ಹೆಚ್ಚಿನ ನೀರನ್ನು ತಡೆಹಿಡಿದು ಶೇಖರಿಸಲು ಪ್ರಯತ್ನಿಸಿದರೆ ಕಟ್ಟೆಯೇ ಒಡೆದುಹೋಗಬಹುದು. ಆದರೆ ಸ್ವಯಂಚಾಲಿತ ಕವಾಟಗಳು ಎಂಟು ಅಡಿ ಎತ್ತರಕ್ಕೆ ನೀರು ಭರ್ತಿಯಾಗುತ್ತಲೇ ತಾವಾಗಿಯೇ ತೆರೆದುಕೊಂಡು ಹೆಚ್ಚುವರಿ ನೀರು ಹರಿದುಹೋಗಲು ಅವಕಾಶ ಮಾಡಿಕೊಡುತ್ತವೆ. ಎಂಟು ಅಡಿಗೆ ಇಳಿಯುತ್ತಲೇ ತಾವಾಗಿ ಮುಚ್ಚಿಕೊಳ್ಳುತ್ತವೆ. ಎಂಥಾ ಅದ್ಭುತ !

ನೈಪುಣ್ಯತೆಯ ಈ ಕವಾಟಗಳು ಬಹು ಜನರನ್ನು ಆಕರ್ಷಿಸುತ್ತಿದ್ದುವು. ಶ್ರೀಸಾಮಾನ್ಯ ಅಲ್ಲದೆ, ಇಂಜಿನಿಯರುಗಳು, ಬೊಂಬಾಯಿ ಗವರ್ನರುಗಳು, ಭಾರತ ಸೇನೆಯ ಮಹಾ ದಂಡನಾಯಕ ಲಾರ್ಡ್ ಕಿಚಿನರ್ ಮೊದಲಾದವರು ಈ ಚಮತ್ಕಾರ ನೋಡಲು ಬಂದಿದ್ದರು. ಈ ಕವಾಟಗಳನ್ನು ಇತರರು ಮಾಡಿ ಹಣ ಗಿಟ್ಟಿಸಿಕೊಳ್ಳದಂತೆ ಇದಕ್ಕೆ 'ಪೇಟೆಂಟ್' 'ಕೃತಿಚೌರ್ಯ' ರಕ್ಷಣೆ ವಿಶ್ವೇಶ್ವರಯ್ಯ ಪಡೆದರು. ಆದಾಗ್ಯೂ 'ಫೈಫ್' ಸರೋವರಕ್ಕೆ ನಿರ್ಮಿಸಿದ ಕವಾಟಗಳಿಗೆ ಮರ್ಯಾದಿತ ಹಣ ಪಡೆಯಲಿಲ್ಲ. ಸರ್ಕಾರದ ನೌಕರನಾಗಿ ಈ ರೀತಿ ಪಡೆಯುವುದು ಧರ್ಮವಲ್ಲ ಎಂದು ಅವರ ದೃಷ್ಟಿ. ಎಂಥಾ ದುರಾಸೆ ರಹಿತ ಉದಾರ ನೀತಿ ! ಇದೇ ಬಗೆಯ ಕವಾಟಗಳು ಮೈಸೂರಿನ ಕೃಷ್ಣರಾಜಸಾಗರ, ಗ್ವಾಲಿಯರಿನ 'ಟಿಗ್ರಾ' ಅಣೆಕಟ್ಟುಗಳಲ್ಲೂ ಇವೆ. ಖಡಕವಾಸಲದ 'ಫೈಫ್' ಜಲಾಶಯದಲ್ಲಿ ಇವರು ಸ್ಥಾಪಿಸಿದ ಕವಾಟಗಳು ಸಮರ್ಪಕವಾಗಿ ಕೆಲಸ ನಿರ್ವಹಿಸುತ್ತಿವೆಯೇ ಎಂದು ನೋಡಲು ಐವತ್ತು ವರ್ಷಗಳ ನಂತರ ವಿಶ್ವೇಶ್ವರಯ್ಯನವರು ಸ್ವತಃ ಹೋಗಿದ್ದರು. ಆಗಲೂ ಅವು ತೃಪ್ತಿಕರವಾಗಿ ಕೆಲಸ ಮಾಡುತ್ತಿದ್ದುವು.

# 3. ಬೇಸಾಯದಲ್ಲಿ ಹೊಸ ವಿಧಾನ

ಸೂರತ್‌ನಲ್ಲಿ ಒಂದೇ ವರ್ಷ ಇದ್ದರು ವಿಶ್ವೇಶ್ವರಯ್ಯ. 1899ರಲ್ಲಿ ಪುಣೆಗೆ ಇವರನ್ನು ವರ್ಗಮಾಡಲಾಯಿತು. ವೇತನವೂ ಹೆಚ್ಚಿತು. ಮಹಾರಾಷ್ಟ್ರದ ಶೈಕ್ಷಣಿಕ, ರಾಜಕೀಯ ಹಾಗೂ ಸಾಮಾಜಿಕ ಪ್ರಗತಿಯ ಕೇಂದ್ರವೆನಿಸಿಕೊಂಡಿತ್ತು ಪುಣೆ. ರಾನಡೆ, ಗೋಖಲೆ, ತಿಲಕ್, ಕಪರ್ದೆ, ಕೇಳ್ಕರ್, ಪರಾಂಜಪೆ ಮೊದಲಾದ ಹೆಸರಾಂತ ಧುರೀಣರ ನಗರ ಪುಣೆ. ಘಟ್ಟದ ಮೇಲಿರುವ ನಗರ ಸಮಶೀತೋಷ್ಣ ವಲಯದ ಆಹ್ಲಾದಕರ ಹವಾಗುಣದಿಂದ ಕೂಡಿದೆ. ಪುಣೆ ಜಿಲ್ಲೆಯೂ ನೀರಾವರಿ ಪ್ರದೇಶಕ್ಕೂ ಪ್ರಸಿದ್ಧವಾದುದು. ಭಾರಿ ಜಲಾಶಯಗಳಿಂದ ಬೇಸಾಯಕ್ಕೆ ನೀರು ಒದಗುತ್ತದೆ. ಜಲಾಶಯ ಮತ್ತು ನಾಲೆಗಳು ನಿರ್ಮಾಣವಾಗುತ್ತಲೇ, ಬರಡು ಭೂಮಿಯವರೂ ಸಹ ತಮ್ಮ ಭೂಮಿಗೆ ನೀರು ಒದಗಬೇಕು, ತಾವು ಅದರ ಪ್ರಯೋಜನ ಪಡೆಯಬೇಕೆಂದು ಆಶಿಸುವುದು ಸಹಜ. ಇದರಿಂದಾಗಿ ಎಲ್ಲ ಬೇಸಾಯಗಾರರಿಗೂ ಸಾಕಷ್ಟು ನೀರು ಒದಗಿಸಲು ಸಾಧ್ಯವಾಗದೆ ಹೋಗುವುದುಂಟು. ಇಂಥ ಪರಿಸ್ಥಿತಿ ಪುಣೆಯ ಸುತ್ತಮುತ್ತಲ ವ್ಯವಸಾಯ ಕ್ಷೇತ್ರದಲ್ಲಿ ಕಾಣಿಸಿಕೊಂಡಿತು.

ನಾಲೆಯ ಮೇಲ್ಭಾಗದವರಿಗೆ ಯಥೇಚ್ಛ ನೀರು. ಕೆಳಭಾಗದವರಿಗೆ ಅಲ್ಪ. ಇದರಿಂದ ರೈತರಲ್ಲಿ ಅಸಮಾಧಾನ. ಇದನ್ನು ಸರಿಪಡಿಸಲು ಹತ್ತು ದಿನಗಳಿಗೆ ಒಮ್ಮೆ ಸರದಿಯಂತೆ ಎಲ್ಲ ಜಮೀನಿಗೂ ನೀರೊದಗಿಸುವ ಸಮರ್ಪಕ ಪದ್ಧತಿಯನ್ನು, ವಿಶ್ವೇಶ್ವರಯ್ಯನವರ ಸಲಹೆಯಂತೆ ಜಾರಿಗೆ ತರಲಾಯಿತು. ಆದರೆ ಇದರಿಂದ ಧಾರಾಳವಾಗಿ ನೀರು ಬಳಸುತ್ತಿದ್ದ ಜಮೀನ್ದಾರರಿಗೆ ಅಸಮಾಧಾನವಾಯಿತು. ಮಹಾರಾಷ್ಟ್ರದ ಅತ್ಯಂತ ಪ್ರತಿಭಾನ್ವಿತ ವ್ಯಕ್ತಿ ಲೋಕಮಾನ್ಯ ತಿಲಕರ 'ಕೇಸರಿ' ಪತ್ರಿಕೆಯಲ್ಲಿ ಈ ಪದ್ಧತಿಯನ್ನು ಪ್ರತಿಭಟಿಸಿ ಲೇಖನಗಳು ಪ್ರಕಟವಾದುವು. ಈ ಜಟಿಲ ಸಮಸ್ಯೆ ಬಗೆಹರಿಸಲು ಸರ್ಕಾರದ ಸಲಹೆ ಅಪೇಕ್ಷಿಸಿದರು ನೀರಾವರಿ ವಿಭಾಗದ ಮುಖ್ಯ ಇಂಜಿನಿಯರ್ ಆಗಿದ್ದ ವಿಶ್ವೇಶ್ವರಯ್ಯ. ಇವರಲ್ಲಿ ಪೂರ್ಣ ವಿಶ್ವಾಸ ತಾಳಿದ್ದ ಸರ್ಕಾರ, ಈ ಹೊಣೆಯನ್ನು ಅಯ್ಯನವರಿಗೇ ವಹಿಸಿಕೊಟ್ಟಿತು.

ಜನತೆಯ ಸಹಕಾರದಿಂದ ಕಾರ್ಯ ಸಾಧಿಸಬೇಕು. ಅಧಿಕಾರಬಲದಿಂದ ಮಾಡುವ ಕೆಲಸ ಶಾಶ್ವತವಲ್ಲ. ಅಲ್ಲದೆ ಅತೃಪ್ತಿ, ಅಸಮಾಧಾನಗಳಿಗೆ ಎಡೆಗೊಡುತ್ತದೆ. ಇದನ್ನರಿತ ವಿಶ್ವೇಶ್ವರಯ್ಯನವರು ನೀರು ಬಳಸುತ್ತಿದ್ದ ಭೂಮಾಲೀಕರು, ರೈತರು ಮತ್ತು ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳ ಸಭೆ ಸೇರಿಸಿದರು. 'ಬ್ಲಾಕ್ ಸಿಸ್ಟಂ'

ಎಂದು ಹೆಸರಾಂತ ಹೊಸ ವ್ಯವಸಾಯ ಪದ್ಧತಿಯನ್ನು ಸಭೆಗೆ ವಿವರಿಸಿದರು. ಜಮೀನುಗಳನ್ನು ಮೂರು ಭಾಗಗಳಾಗಿ ವಿಂಗಡಿಸುವುದು. ಅಧಿಕ ನೀರು ಅಪೇಕ್ಷಿಸುವ ಭತ್ತ, ಕಬ್ಬಿನ ಬೆಳೆಯ ಒಂದು ಭಾಗ; ಸ್ವಲ್ಪ ಕಡಮೆ ನೀರು ಬಳಸಿಕೊಳ್ಳುವ ಫಸಲಿನ ಮತ್ತೊಂದು ವಿಭಾಗ; ಖುಷ್ಕಿ ಜಮೀನು ಇನ್ನೊಂದು ವಿಭಾಗ. ಫಸಲನ್ನು ಅದಲು ಬದಲು ಮಾಡಿಕೊಳ್ಳುವುದು. ಇದರಿಂದ ಭೂಸಾರ ಉತ್ತಮವಾಗಿ ಉಳಿಯುತ್ತದೆ. ಎಲ್ಲರಿಗೂ ಸಾಕಷ್ಟು ನೀರು ಒದಗಿಬರುತ್ತದೆ ಅಲ್ಲದೆ ಪೋಲಾಗುವುದಿಲ್ಲ. ಬೆಳೆ ಅಧಿಕವಾಗುತ್ತದೆ. ಸೊಳ್ಳೆಯ ಕಾಟ, ಮಲೇರಿಯದ ಪಿಡುಗು ಕಡಮೆಯಾಗುತ್ತದೆ. ಜನಾರೋಗ್ಯ ಉತ್ತಮವಾಗುತ್ತದೆ. ಎಲ್ಲರಿಗೂ ನೀರು ಸಮವಾಗಿ ಹಂಚಿಕೆಯಾಗಿ ಅಸಮಾಧಾನಕ್ಕೆ ಅವಕಾಶವಾಗದು. ನೀರುಗಂಟಿ ನಿಯಮದಂತೆ ನೀರು ಬಿಡುತ್ತಾನೆ. ಕಡೆಗೆ ನೀರುಗಂಟಿಯನ್ನು ರೈತರೇ ನೇಮಿಸಿಕೊಳ್ಳಬಹುದು. ಸರ್ಕಾರ ಅವನಿಗೆ ವೇತನ ಕೊಡುತ್ತದೆ. ಈ ರೀತಿಯಲ್ಲಿ ವಿಭಾಗ ವ್ಯವಸಾಯ ಪದ್ಧತಿ ಎಲ್ಲರಿಗೂ ಮನದಟ್ಟಾಗುವಂತೆ ವಿವರಿಸಿದರು.

ನೀರಾ ನದಿ ನೀರುಣಿಸುವ ಪ್ರದೇಶದಲ್ಲಿ ಪ್ರಾಯೋಗಿಕವಾಗಿ 'ಬ್ಲಾಕ್ ಸಿಸ್ಟಂ' ವ್ಯವಸಾಯ ನಡೆಸುವ ಹೊಣೆಯನ್ನು ಬೊಂಬಾಯಿ ಸರ್ಕಾರ ವಿಶ್ವೇಶ್ವರಯ್ಯನವರಿಗೇ ಒಪ್ಪಿಸಿತು. ಈ ಜಿಲ್ಲೆಯ ಜಿಲ್ಲಾಧಿಕಾರಿ, ತಹಶೀಲ್ದಾರ್ ಮತ್ತು ಇತರ ಕೆಳದರ್ಜೆಯ ನೌಕರರು ಯೋಜನೆಯ ವಿರೋಧಿಗಳಾಗಿದ್ದರು. ಜಿಲ್ಲಾಧಿಕಾರಿ ಮತ್ತು ಜಿಲ್ಲೆಯ ಉಪ ಅಧಿಕಾರಿ ಇಬ್ಬರೂ ಆಂಗ್ಲರು. ಕರಿಯ ಭಾರತೀಯನ ಆಜ್ಞಾನುವರ್ತಿಯಾಗಿ ತಾವು ನಡೆದುಕೊಳ್ಳಬೇಕೆ ಎಂಬ ಅಹಂಕಾರ ಅವರಲ್ಲಿ. ಆದರೆ ವಿಶ್ವೇಶ್ವರಯ್ಯನವರು ಜಿಲ್ಲೆಯ ಡೆಪ್ಯುಟಿ ಕಲೆಕ್ಟರ್, ಮತ್ತು ಮತ್ತೊಬ್ಬ ಇಂಜಿನಿಯರ್ ಇವರ ನೆರವಿನಿಂದ ವಿಭಾಗ ವ್ಯವಸಾಯ ಪದ್ಧತಿಯನ್ನು ಪ್ರಾಯೋಗಿಕವಾಗಿ ಪ್ರಾರಂಭಿಸಿದರು. ಇವರೀರ್ವರೂ ಮೇಲಿನ ಇಬ್ಬರು ಮೇಲಧಿಕಾರಿಗಳಿಂದ ಆಗುತ್ತಿದ್ದ ತೊಂದರೆ ವಿಶ್ವೇಶ್ವರಯ್ಯನವರಿಗೆ ತಿಳಿಸಿದರು. ಇವರ ವರದಿಯನ್ನು ಅಯ್ಯನವರು ಬೊಂಬಾಯಿ ಸರ್ಕಾರಕ್ಕೆ ಕಳುಹಿಸಿ ಕೊಟ್ಟರು. ಈ ಅಧಿಕಾರಿಗಳು ಯೋಜನೆ ಯಶಸ್ವಿಯಾಗುವಂತೆ ನಮ್ಮೊಡನೆ ಸಹಕರಿಸುವಂತೆ ಆಜ್ಞಾಪಿಸಿ. ಅದು ಸಾಧ್ಯವಾಗದಿದ್ದರೆ ಈ ಜವಾಬ್ದಾರಿಯಿಂದ ನನ್ನನ್ನು ಮುಕ್ತಗೊಳಿಸಿ ಎಂದು ಬರೆದರು.

ಇದೇ ಕಾಲಕ್ಕೆ ಭಾರತ ಸರ್ಕಾರ ನೀರಾವರಿ ಬೆಳೆ ಹೆಚ್ಚಿಸಲು ಸೂಕ್ತ ಸಲಹೆ ನೀಡುವಂತೆ ಉನ್ನತ ಮಟ್ಟದ ಆಯೋಗವನ್ನು ನೇಮಿಸಿತ್ತು. ಈ ಆಯೋಗಕ್ಕೆ ಮೂರು ತಿಂಗಳ ಅಲ್ಪ ಕಾಲದಲ್ಲಿ ವಿವರವಾಗಿ ವಿಭಾಗ ಪದ್ಧತಿಯ ವ್ಯವಸಾಯ ಕ್ರಮವನ್ನು ವಿಶ್ವೇಶ್ವರಯ್ಯನವರು ಒಪ್ಪಿಸಿದರು. ಯೋಜನೆ ಆಯೋಗದ ಪೂರ್ಣ ವಿಶ್ವಾಸಕ್ಕೆ ಪಾತ್ರವಾಯಿತು. ಡೆಕನ್ ಪ್ರಸ್ಥಭೂಮಿಯಲ್ಲಿ ಪ್ರಾಯೋಗಿಕವಾಗಿ ಇದನ್ನು ಆಚರಣೆಗೆ ತರುವುದು ಒಳಿತು ಎಂದು ಬೊಂಬಾಯಿ ಸರ್ಕಾರಕ್ಕೆ ಆಯೋಗ ಶಿಫಾರಸು ಮಾಡಿತು. ಸಹಜವಾಗಿ ಸರ್ಕಾರಕ್ಕೆ ಪ್ರಯೋಗ ನಡೆಸುವ ಉತ್ಸಾಹ ಹೆಚ್ಚಿತು.

ಆಂಗ್ಲ ಅಧಿಕಾರಿಗಳನ್ನು ಬೊಂಬಾಯಿಗೆ ಬರಮಾಡಿಕೊಂಡು ವಿಶ್ವೇಶ್ವರಯ್ಯನವರಿಗೆ ಪೂರ್ಣ ಸಹಕಾರ ನೀಡುವಂತೆ ಅವರಿಗೆ ತಿಳಿಸಲಾಯಿತು. ಆಜ್ಞಾಧಾರಿಗಳಾಗಿ ಅವರು ಸಹಕಾರ ನೀಡಬೇಕಾಯಿತು.

ಯೋಜನೆಯ ಉಪಯುಕ್ತತೆ ಭೂಮಾಲೀಕರಿಗೆ ಮನದಟ್ಟು ಮಾಡಿಕೊಡುವುದು ಅಗತ್ಯವಾಗಿತ್ತು. ವಿಶ್ವೇಶ್ವರಯ್ಯನವರು ಇಬ್ಬರು ದೊಡ್ಡ ಜಮೀನ್ದಾರರನ್ನು ಬರ ಮಾಡಿಕೊಂಡು ಯೋಜನೆಯಿಂದಾಗುವ ಅನುಕೂಲ ಅವರಿಗೆ ವಿವರಿಸಿದರು. ಮಾಡಿ ನೋಡಿ; ಇದು ಉತ್ತಮ ಬೇಸಾಯ ಪದ್ಧತಿ ಎಂದು ಖಾತರಿ ಆದರೆ ಸರಿ, ಇಲ್ಲವೇ ಕೈಬಿಡೋಣ. ನಷ್ಟವಾದರೆ ಸರ್ಕಾರ ಅದನ್ನು ತುಂಬಿ ಕೊಡುತ್ತೆ ಎಂಬ ಅಭಯ ನೀಡಿದರು. ದೊಡ್ಡ ಜಮೀನ್ದಾರರು ಹೊಸ ವಿಧಾನ ಅನುಸರಿಸಿ ಬೇಸಾಯ ಮಾಡಿ ದರು. ಪ್ರಯೋಗ ತುಂಬ ಯಶಸ್ವಿಯಾಯಿತು. ಇತರ ರೈತರಿಗೆ ಇದು ಮಾರ್ಗ ದರ್ಶನವಾಯಿತು.

ಬೊಂಬಾಯಿ ಸಂಪುಟದ ಹಿರಿಯ ಸಚಿವ ಸರ್ ಜಾನ್ ಮೂರ್ ಮೆಕನ್ಸಿ, ವಿಶ್ವೇಶ್ವ ರಯ್ಯನವರ ಸಾಮರ್ಥ್ಯ ಮನಸಾರೆ ಹೊಗಳಿರುತ್ತಾರೆ. "ನಮ್ಮ ಸರ್ಕಾರದ ಮರಾ ಮತ್ ಇಲಾಖೆಯಲ್ಲಿ, ಇಷ್ಟು ಪ್ರತಿಭಾವಂತ ಆಂಗ್ಲ ಅಥವಾ ಭಾರತೀಯ ಅಧಿಕಾರಿ ಬೇರೊಬ್ಬನಿಲ್ಲ. ಇವರೊಡನೆ ಸಹಕರಿಸುವ ಸೌಭಾಗ್ಯ ನನ್ನದಾಗಿರುವುದಕ್ಕೆ ನನಗೆ ಸಂತೋಷವಾಗಿದೆ" ಎಂದಿರುತ್ತಾರೆ.

# 4. ಏಡನ್ ನಗರದ ನೆರವಿಗೆ

ಸೂರ್ಯ ಅಸ್ತಂಗತನಾಗದ ಚಕ್ರಾಧಿಪತ್ಯ ತನ್ನದು, ಹೀಗೆಂದು ಬ್ರಿಟಿಷರು ಹೆಮ್ಮೆ ಪಡುತ್ತಿದ್ದ ಕಾಲ ಅದು. ಪೂರ್ವ ಪಶ್ಚಿಮ ಗೋಳದ ಎಲ್ಲೆಡೆಯಲ್ಲೂ ಬ್ರಿಟಿಷರ ವಸಾಹತುಗಳು. ಭಾರತದ ಕಡೆಯಿಂದ ಸುಯಜ್ ಕಾಲುವೆ ಪ್ರವೇಶಿಸುವಾಗ ಮೊದಲು ದೊರೆಯುವ ಪ್ರಮುಖ ರೇವು ಪಟ್ಟಣ ಏಡನ್. ಒಳ್ಳೆಯ ಆಯಕಟ್ಟಿನಲ್ಲಿರುವ ಈ ನಗರ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿತ್ತು. ಸುಯಜ್ ಕಾಲುವೆಯ ಮುಖಾಂತರ ಹಡಗುಗಳು ಹೋಗಲು ಅವಕಾಶ ದೊರೆಯದಿದ್ದರೆ, ಯೂರೋಪಿನಿಂದ 'ಗುಡ್‌ಹೋಪ್' ಭೂಶಿರ ಬಳಸಿಕೊಂಡು ಭಾರತಕ್ಕೆ ಪ್ರಯಾಣ ಬೆಳೆಸಬೇಕು. ಸುಯಜ್ ಕಾಲುವೆಯನ್ನು ಸಂಚಾರಕ್ಕೆ ಮುಕ್ತವಾಗಿ ಇಡುವುದು ಬ್ರಿಟಿಷರಿಗೆ ಅತ್ಯಗತ್ಯ. ಇದಕ್ಕಾಗಿ ಬೆಂಗಾಡಾದ ಏಡನ್‌ನಲ್ಲಿ ಬಲವಾದ ಸೈನ್ಯ ಇಟ್ಟು ಇದನ್ನು ದಂಡಿನ ಠಾಣೆಯಾಗಿ ಮಾಡಿಕೊಂಡಿತ್ತು.

ದಕ್ಷತೆ, ಪ್ರಾಮಾಣಿಕತೆಗಳಿಗೆ ಹೆಸರಾಂತ ವಿಶ್ವೇಶ್ವರಯ್ಯನವರು ಇಲಾಖೆಯಲ್ಲಿ ಮೇಲಿಂದ ಮೇಲಕ್ಕೆ ಏರುತ್ತ ಬಂದರು. ಸರ್ಕಾರ ಕೆಲವು ದೊಡ್ಡ ಹುದ್ದೆಗಳನ್ನು ಬ್ರಿಟಿಷರಿಗಾಗಿಯೇ ಮೀಸಲಾಗಿ ಇರಿಸುತ್ತಿತ್ತು. ಇವು ಭಾರತೀಯರಿಗೆ ಲಭ್ಯವಿರಲಿಲ್ಲ. ಆದರೆ ಇಂಥ ಅಲಭ್ಯ ಸ್ಥಾನಗಳನ್ನೂ ತಮ್ಮ ಸಾಮರ್ಥ್ಯದಿಂದ ಇವರು ಪಡೆದುಕೊಂಡರು. 1904ರಲ್ಲಿ ಬೊಂಬಾಯಿ ಪ್ರಾಂತದ ಸ್ಯಾನಿಟರಿ ಅಥವಾ ಸಫಾಯಿ ವಿಭಾಗದ ಇಂಜಿನಿಯರ್ ಆದರು. ಇದೇ ವರ್ಷದಲ್ಲಿ ಲಂಡನ್ನಿನ ಸಿವಿಲ್ ಇಂಜಿನಿಯರುಗಳ ಸದಸ್ಯರಾದರು. 1907ರಲ್ಲಿ ಸಫಾಯಿ ವಿಭಾಗದ ಹೊಣೆಗಾರಿಕೆಯ ಜೊತೆಗೆ ಇನ್ನೂ ಎರಡು ಬೇರೆ ವಿಭಾಗಗಳ ಅಧಿಕಾರಿಯಾಗಿದ್ದರು. ಏಕಕಾಲದಲ್ಲಿ ಮೂರು ವಿಭಾಗಗಳ ಮುಖ್ಯ ಇಂಜಿನಿಯರಾಗಿದ್ದರು. ಯಾವ ವಿಭಾಗದ ಕೆಲಸಕ್ಕೂ ಚ್ಯುತಿಯಾಗದಂತೆ ಹೊಣೆ ಅರಿತು ಕಾರ್ಯ ನಿರ್ವಹಿಸುತ್ತಿದ್ದರು. ಪುಣೆಯಲ್ಲಿ ಒಂದು ಕಚೇರಿ, ಬೆಳಗಾವಿಯಲ್ಲಿ ಮತ್ತೊಂದು. ಎರಡೂ ಕಚೇರಿಗಳ ಕೆಲಸ ಸಮರ್ಪಕವಾಗಿ ನಿರ್ವಹಿಸುತ್ತಿದ್ದುದು ಎಲ್ಲರನ್ನೂ ತಲೆದೂಗುವಂತೆ ಮಾಡಿತ್ತು.

ಇಷ್ಟೊಂದು ಜವಾಬ್ದಾರಿಯ ಕಾರ್ಯ ನಿರ್ವಹಿಸುತ್ತಿದ್ದಾಗ, ಇದನ್ನು ಅರಿತಿದ್ದರೂ ಬೊಂಬಾಯಿ ಸರ್ಕಾರ ಇನ್ನೊಂದು ಕೆಲಸ ಸಂಕೋಚದಿಂದ ಇವರಿಗೆ ವಹಿಸಿತು. ಇಂಜಿನಿಯರಿಂಗ್ ಶಾಲೆಯ ಶಿಕ್ಷಣಕ್ರಮ ಅವಲೋಕಿಸಿ, ಸುಧಾರಿತ ಪದ್ಧತಿ ಸೂಚಿಸಲು ರಚಿತವಾಗಿದ್ದ ಸಮಿತಿಗೆ ಸರ್ಕಾರ ಇವರನ್ನು ನೇಮಿಸಿತು. ಹೆಸರಾಂತ ಸರ್

ಫಿರೋಜ್‌ಷಾ ಮೆಹತ ಸಮಿತಿಯ ಅಧ್ಯಕ್ಷರು. ಹೊಸ ಪಠ್ಯಕ್ರಮ ರೂಪಿಸುವುದರಲ್ಲಿ ವಿಶ್ವೇಶ್ವರಯ್ಯನವರ ಪಾತ್ರ ಗಣನೀಯವಾಗಿತ್ತು. ಪುಣೆ, ಧಾರವಾಡ, ಬಿಜಾಪುರ ಈ ನಗರಗಳ ಕುಡಿಯುವ ನೀರಿನ ಯೋಜನೆ ಸಿದ್ಧಪಡಿಸಿ ಕೊಟ್ಟರು.

ಬೊಂಬಾಯಿ ಗವರ್ನರ್ ಲಾರ್ಡ್ ಸಿಡನ್‌ಹ್ಯಾಂ ಇವರ ಸಾಮರ್ಥ್ಯ ಗಮನಿಸಿ ಅಹಮದಾಬಾದ್ ಪೌರಸಭೆಗೆ ನಗರದ ನೀರಿನ ಸಮಸ್ಯೆ ತೃಪ್ತಿಕರವಾಗಿ ಬಗೆಹರಿಸಲು 'ಅತ್ಯಂತ ದಕ್ಷ ಮತ್ತು ಅನುಭವಶಾಲಿಯಾದ ವಿಶ್ವೇಶ್ವರಯ್ಯನವರ ಸಲಹೆ ಪಡೆಯುವಂತೆ' ತಿಳಿಸಿದರು. ಅಷ್ಟೊಂದು ವಿಶ್ವಾಸ ಗವರ್ನರಿಗೆ ವಿಶ್ವೇಶ್ವರಯ್ಯನವರ ಸಾಮರ್ಥ್ಯದಲ್ಲಿ.

ಏಡನ್ನಿನ ಪ್ರಾಮುಖ್ಯತೆ ವಾಚಕರ ಗಮನಕ್ಕೆ ತರಲಾಗಿದೆಯಷ್ಟೆ. ದೂರದ ಏಡನ್ನಿನ ಸಿವಿಲ್ ಅಥವಾ ಅಸೈನಿಕ ವಿಭಾಗದ ಆಡಳಿತ ಬೊಂಬಾಯಿ ಸರ್ಕಾರದ ಹೊಣೆಯಾಗಿತ್ತು. ನೀರೊದಗಿಸುವುದು; ನೈರ್ಮಲ್ಯ ಕಾಪಾಡುವುದು; ರಸ್ತೆ, ಚರಂಡಿ ಇವನ್ನು ದುರಸ್ತಿಯಲ್ಲಿಡುವುದು ಬೊಂಬಾಯಿ ಸರ್ಕಾರದ ಜವಾಬ್ದಾರಿ. ಸೇನೆಗೆ ಸಕಲ ಸೌಲಭ್ಯಗಳನ್ನು ಒದಗಿಸುವುದು ಬ್ರಿಟಿಷ್ ಸರ್ಕಾರದ ಹೊಣೆ. ಏಡನ್ನಿನಲ್ಲಿ ನೀರಿನ ಅಭಾವದಿಂದ ಎಲ್ಲರೂ ಪರಿತಪಿಸುತ್ತಿದ್ದರು. ಸಮುದ್ರದ ನೀರನ್ನು ಆವಿಯಾಗಿ ಮಾಡಿ, ನೀರಾಗಿ ರೂಪಾಂತರಿಸಿ ಸೈನಿಕ ಮತ್ತು ಅಸೈನಿಕ ಎರಡೂ ವಿಭಾಗಗಳ ಜನ ಬಳಸುತ್ತಿದ್ದರು. ಏನೇ ಆಗಲಿ ನಿಸರ್ಗದತ್ತ ನೀರು ಕೊಡುತ್ತಿದ್ದ ತೃಪ್ತಿ ಇದರಿಂದ ಆಗುತ್ತಿರಲಿಲ್ಲ. ಈ ನೀರಿಗೂ ಹಣ ತೆರಬೇಕು. ಈ ನೀರಿಗೆ 100 ಗ್ಯಾಲನ್‌ಗೆ ಮೂರು ರೂಪಾಯಿ. ಸಮೀಪದ ಕಟ್ಟೆಯಿಂದ ಗಾಡಿಯಲ್ಲಿ ತರುತ್ತಿದ್ದ ನೀರಿಗೆ ಗ್ಯಾಲನ್‌ಗೆ ಒಂದರಿಂದ ಒಂದೂವರೆ ರೂಪಾಯಿ. ಇದೂ ಕುಡಿಯಲು ಯೋಗ್ಯವಲ್ಲ. ಏಡನ್ ನಗರ ಕುಡಿಯುವ ನೀರಿಗಾಗಿ ಏಳು ಲಕ್ಷ ವೆಚ್ಚ ಮಾಡುತ್ತಿತ್ತು. ಜನಸಂಖ್ಯೆಯೂ ಹೆಚ್ಚಾಗಿರಲಿಲ್ಲ.

ನೀರಿನ ಬವಣೆಯಿಂದ ಪರಿತಪಿಸುತ್ತಿದ್ದ ಏಡನ್ ಪರಿಸ್ಥಿತಿ ಬಗೆಹರಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಬ್ರಿಟಿಷ್ ಸರ್ಕಾರ ಇಂಡಿಯ ಸರ್ಕಾರಕ್ಕೆ ಬರೆಯಿತು. ಇಂಡಿಯ ಸರ್ಕಾರ ಇದನ್ನು ಬೊಂಬಾಯಿ ಸರ್ಕಾರಕ್ಕೆ ವಹಿಸಿತು. ಎಂಜಿನಿಯರಿಂಗ್ ಅಥವಾ ತಾಂತ್ರಿಕ ವಿಷಯಕ್ಕೆ ಸಂಬಂಧಿಸಿದ ಏನೇ ಜಟಿಲ ಸಮಸ್ಯೆ ತಲೆದೋರಿದರೂ ಬೊಂಬಾಯಿ ಸರ್ಕಾರಕ್ಕೆ ಮೊದಲು ಹೊಳೆಯುತ್ತಿದ್ದ ಹೆಸರು ವಿಶ್ವೇಶ್ವರಯ್ಯನವರದು. ಸರಿ, ಈ ಸಮಸ್ಯೆ ಬಗೆಹರಿಸಲು ವಿಶ್ವೇಶ್ವರಯ್ಯನವರನ್ನು ಏಡನ್‌ಗೆ ಹೋಗುವಂತೆ ಸರ್ಕಾರ ನೇಮಿಸಿತು. ನಗರದ ನೀರಿನ ಸಮಸ್ಯೆ, ನೈರ್ಮಲ್ಯ, ಒಳಚರಂಡಿ ಯೋಜನೆ, ರಸ್ತೆಗಳನ್ನು ಉತ್ತಮ ಸ್ಥಿತಿಯಲ್ಲಿರಿಸುವುದು ಇವುಗಳ ವಿಷಯದಲ್ಲಿ ಸೂಕ್ತ ಸಲಹೆ ನೀಡುವಂತೆ ವಿಶ್ವೇಶ್ವರಯ್ಯನವರಿಗೆ ವಹಿಸಲಾಯಿತು.

ವಿಶ್ವೇಶ್ವರಯ್ಯನವರು 1906ರಲ್ಲಿ ಏಡನ್ನಿಗೆ ಹೋದರು. ಸುತ್ತಮುತ್ತಲ ಪ್ರದೇಶದಲ್ಲಿ ಸುತ್ತಾಡಿ ಪರಿಶೀಲಿಸಿದರು. ಅಂಕಿಸಂಖ್ಯೆ ವರದಿಗಳಿಂದ ಸಂಗ್ರಹಿಸಿದರು.

ಏಡನ್ನಿನಿಂದ ಅರುವತ್ತು ಮೈಲಿಗಳ ಅಂತರದ ಪ್ರದೇಶ ಗುಡ್ಡಗಳಿಂದ ಆವೃತವಾಗಿದೆ. ಇಲ್ಲಿ ಅಲ್ಲಿ ಸ್ವಲ್ಪ ಮಳೆಯಾಗುತ್ತದೆ. ಇಲ್ಲಿ ಬಿದ್ದ ಮಳೆಯ ನೀರು ಸಣ್ಣ ಹೊಳೆಯಾಗಿ ಸ್ವಲ್ಪ ದೂರ ಹರಿದು, ಮರಳು ಪ್ರದೇಶ ಪ್ರವೇಶಿಸುತ್ತದೆ. ಮುಂದೆ ಹರಿಯಲಾರದೆ ಮರಳಿನಲ್ಲಿ ಕಣ್ಮರೆಯಾಗುತ್ತದೆ. ಅಲ್ಲಿ ಶೇಖರವಾಗಿರುತ್ತದೆ. ಈ ಲಹೇಜ್ ಪ್ರದೇಶ ಏಡನ್ನಿನಿಂದ 18 ಮೈಲಿಗಳ ದೂರದಲ್ಲಿದೆ. ಮರಳಿನಲ್ಲಿ ಬಾವಿ ತೋಡಿ, ಮೇಲಕ್ಕೆ 'ಪಂಪ್' ಮಾಡಿ, ನಳಗಳ ಮೂಲಕ ಏಡನ್ನಿಗೆ ಒದಗಿಸುವಂತೆ ಸೂಚಿಸಿದರು.

ಇಷ್ಟರಿಂದಲೇ ತಮ್ಮ ಕೆಲಸ ಮುಗಿಯಿತೆಂದು ಅವರು ಭಾವಿಸಲಿಲ್ಲ. ಲಹೇಜ್ ಸುಲ್ತಾನರಿಗೆ ಸೇರಿದ ಸ್ಥಳ. ಅಲ್ಲಿಯ ನಿವಾಸಿಗಳು ಅನಾಗರಿಕ ಒರಟುಜನ. ಸುಲ್ತಾನ ರೊಡನೆ ವ್ಯವಹರಿಸಿ ಸೂಕ್ತ ಒಪ್ಪಂದ ಮಾಡಿಕೊಳ್ಳುವುದು ಯುಕ್ತವೆಂದರು. ಎಂಜಿ ನಿಯರಿಗೆ ಇದು ಸಂಬಂಧಿಸಿದ ವಿಷಯವಲ್ಲ. ಆದರೂ ಇದರ ಪ್ರಸ್ತಾಪ ಮಾಡಿದ್ದು ಅವರ ವಿಶಾಲ ಮತ್ತು ದೂರದೃಷ್ಟಿಯ ದ್ಯೋತಕವಾಗಿದೆ.

ಒಳಚರಂಡಿ ವ್ಯವಸ್ಥೆಗೆ ಭೌಗೋಳಿಕ ದೃಷ್ಟಿಯಿಂದ ಏರು ಪೇರು, ಹಳ್ಳ ತಿಟ್ಟು, ಇವೆಲ್ಲ ಪರಿಶೀಲಿಸಿದರು. ಇದು ಎಂಜಿನಿಯರುಗಳು ಮಾಡಬೇಕಾದ ಕರ್ತವ್ಯ. ಆದರೆ ವಿಶ್ವೇಶ್ವರಯ್ಯನವರು ಇದಲ್ಲದೆ ಏಡನ್ ಮತ್ತು ಸುತ್ತುಮುತ್ತಲ ಜನನ ಮರಣದ ಸಂಖ್ಯೆ ಸಂಗ್ರಹಿಸಿದ್ದು ಆಶ್ಚರ್ಯವೆನಿಸದಿರದು. ಷೇಕ್ ಒಟ್ಟುಮನ್‌ನಲ್ಲಿ ಸಾವಿರಕ್ಕೆ ಸರಾಸರಿ ಮರಣ 122; ಇಂಗ್ಲೆಂಡ್ ಮತ್ತು ವೇಲ್ಸ್‌ನಲ್ಲಿ ಸಾವಿರಕ್ಕೆ 18; ಬೊಂಬಾಯಿಯಲ್ಲಿ 40. ಒಳಚರಂಡಿ ವ್ಯವಸ್ಥೆ ಇರುವಲ್ಲಿ ಮರಣ ಕಡಮೆ. ಈ ದೃಷ್ಟಿಯಿಂದ ಏಡನ್ ನಗರಕ್ಕೆ ಒಳಚರಂಡಿ ವ್ಯವಸ್ಥೆ ಅಗತ್ಯವೆಂದು ಸಾಧಿಸಿದರು.

ಸರ್ಕಾರ ಇವರ ಕೂಲಂಕಷ ವರದಿ ಒಪ್ಪಿಕೊಂಡು ಜಾರಿಗೆ ತಂದಿತು. ಇವರ ಕಾರ್ಯ ಚಾತುರ್ಯ ಮೆಚ್ಚಿ "ಕೈಸರ್–ಇ–ಹಿಂದ್" ಪ್ರಶಸ್ತಿ ಪದಕ ಬ್ರಿಟಿಷ್ ಪ್ರಭುತ್ವ ನೀಡಿತು.

# 5. ಸ್ವಾಭಿಮಾನ

ನಮ್ಮ ದೇಶದ ಬಹುತೇಕ ಹಳೆಯ ಕೆರೆಗಳು ಮಣ್ಣಿನಿಂದ ನಿರ್ಮಿತವಾದುವು. ಮಣ್ಣಿನ ಕಟ್ಟೆ, ಕಲ್ಲಿನ ತೂಬು. ಕೆಲವು ಕೆರೆಗಳ ಒಳಭಾಗಕ್ಕೆ ಕಲ್ಲು ಕಟ್ಟಿರುತ್ತಾರೆ. ಸಿಮೆಂಟ್ ಬಳಕೆಗೆ ಬಂದ ತರುವಾಯ ಬೃಹತ್ ಜಲಾಶಯಗಳು ಸಿಮೆಂಟಿನಿಂದ ನಿರ್ಮಿತವಾಗಿವೆ.

ಮಹಾಲಕ್ಷ್ಮಿ ದೇವಾಲಯಕ್ಕೆ ಪ್ರಸಿದ್ಧವಾದ ಯಾತ್ರಾ ಸ್ಥಳ ಕೊಲ್ಹಾಪುರ. ಸಂಸ್ಥಾನ ಮಹಾರಾಜರ ಅಧೀನ. ಇಲ್ಲಿನ ದೊಡ್ಡ ಕೆರೆ ಮಣ್ಣಿನಿಂದ ಕಟ್ಟಲ್ಪಟ್ಟದ್ದು. ನಗರದ ಕುಡಿಯುವ ನೀರಿಗೆ ಇದೇ ಆಶ್ರಯ. ಒಮ್ಮೆ ಕೆರೆಯ ಏರಿಯ ದೊಡ್ಡ ಭಾಗ ಕುಸಿದು, ಅಪಾಯ ಸ್ಥಿತಿ ಒದಗಿತು. ಕೆರೆಯ ನೀರೆಲ್ಲ ಹರಿದುಹೋಗಿ ಬರಿದಾಗುವ ಭಯಂಕರ ಸ್ಥಿತಿ ಉದ್ಭವಿಸಿತ್ತು. ಕೆರೆ ಬರಿದಾದರೆ ಊರಿಗೆ ಕುಡಿಯಲು ನೀರಿಲ್ಲ. ಈ ಸ್ಥಿತಿಯಲ್ಲಿ ಮಹಾರಾಜರ ಪರವಾಗಿ ಕರ್ನಲ್ ಫೆರಿಸ್ ಬೊಂಬಾಯಿ ಸರ್ಕಾರಕ್ಕೆ ತುರ್ತು ತಂತಿ ಕಳುಹಿಸಿದರು. ಕೆರೆಯ ಕಟ್ಟೆ ಭದ್ರಪಡಿಸಬಲ್ಲ ಸಮರ್ಥ ಆಂಗ್ಲ ಎಂಜಿನಿಯರನ್ನು ಕೂಡಲೇ ಕಳುಹಿಸಿಕೊಡುವುದು. ಇದು ತುರ್ತು ತಂತಿಯ ಪ್ರಾರ್ಥನೆ.

ಬೊಂಬಾಯಿ ಸರ್ಕಾರದಲ್ಲಿ ಆಂಗ್ಲ ಎಂಜಿನಿಯರುಗಳಿಗೆ ಕೊರತೆ ಇರಲಿಲ್ಲ. ಆದರೆ ಸರ್ಕಾರ ಜವಾಬ್ದಾರಿಯ ಕೆಲಸ ನಿರ್ವಹಿಸಲು ಸ್ಯಾನಿಟರಿ ಎಂಜಿನಿಯರ್ ವಿಶ್ವೇಶ್ವರಯ್ಯನವರನ್ನು ಕಳುಹಿಸಿತು. ದುರಸ್ತಿ ಕೈಗೊಳ್ಳುವ ವಿಧಾನ ಹೇಳುವ ವಿದ್ಯಾವಂತರಿಗೆ ಕೊರತೆ ಇಲ್ಲ. ವಿದ್ಯಾವಂತರೆಲ್ಲ ಬುದ್ಧಿವಂತರೆನಿಸಿಕೊಳ್ಳಲಾರರು. ಆದರೆ ವಿಚಾರಶೀಲ ಅನುಭವಿಗಳ ಅಭಾವ. ಹೀಗೆಂದು ಫೆರಿಸ್ ತಮ್ಮ ಪತ್ರದಲ್ಲಿ ನಿಜ ನುಡಿದಿದ್ದರು.

ವಿಶ್ವೇಶ್ವರಯ್ಯನವರು ಕೂಡಲೇ ಕೊಲ್ಹಾಪುರಕ್ಕೆ ಹೋದರು. ಕೆರೆಯ ಸ್ಥಿತಿ ಕೂಲಂಕಶವಾಗಿ ಪರಿಶೀಲಿಸಿದರು. ದುರಸ್ತಿ ಮಾಡಬೇಕಾದ ಕ್ರಮ ಸಿದ್ಧಪಡಿಸಿದರು. ಚಾಚೂ ತಪ್ಪದೆ ತಮ್ಮ ಸಲಹೆಯಂತೆ ಕಾರ್ಯ ಮಾಡಬೇಕೆಂದು ಸ್ಥಳೀಯ ಎಂಜಿನಿಯರುಗಳಿಗೆ ಎಚ್ಚರಿಕೆ ಕೊಟ್ಟರು. ದುರಸ್ತಿ ಕಾರ್ಯ ನಡೆಯುತ್ತಿದ್ದಾಗ ಮೂರು ನಾಲ್ಕು ಸಾರಿ ಬೊಂಬಾಯಿಂದ ಹೋಗಿ ಬಂದರು, ಮೇಲ್ವಿಚಾರಣೆ ನಡೆಸಲು. ಇವರ ಸಲಹೆಯಂತೆ ಕಾಂಗಾರಿ ನಡೆದು ಮೊದಲಿಗಿಂತ ಕಟ್ಟೆ ಹೆಚ್ಚು ಭದ್ರವಾಯಿತು. ಮಳೆ ಬಂದು ಕೆರೆ ತುಂಬಿ ಕೋಡಿ ಹರಿಯಿತು. ಕಟ್ಟೆ ಒಡೆಯಲಿಲ್ಲ. ಭದ್ರವಾಗಿಯೇ ಉಳಿಯಿತು.

ಮಹಾರಾಜರು ಸಂತುಷ್ಟರಾದರು. ಮಹಾರಾಜರ ಸಂತೋಷ, ಸಮಾಧಾನ, ಮೆಚ್ಚುಗೆ ವ್ಯಕ್ತಪಡಿಸಿ ಕರ್ನಲ್ ಫೆರಿಸ್ ಬೊಂಬಾಯಿ ಸರ್ಕಾರಕ್ಕೆ ಪತ್ರ ಬರೆದರು. ತಮ್ಮ ಕೃತಜ್ಞತೆ ಮತ್ತು ಧನ್ಯವಾದ ಪ್ರತಿಭಾ ಪರಿಣತ ವಿಶ್ವೇಶ್ವರಯ್ಯನವರಿಗೆ ತಿಳಿಸುವಂತೆ ಪತ್ರದಲ್ಲಿ ನಮೂದಿಸಲಾಗಿತ್ತು.

ಬಹುತೇಕ ನಮ್ಮ ದೇಶದ ವಿದ್ಯೆಯ ಗುರಿ ನೌಕರಿ. ಅದರಲ್ಲೂ ಸರ್ಕಾರಿ ನೌಕರಿಗೆ ವಿಶೇಷ ಪ್ರಾಶಸ್ತ್ಯ. ಸರ್ಕಾರದ ನೌಕರಿಯಲ್ಲಿ ಕಾಲಕಾಲಕ್ಕೆ ಆಗುತ್ತೆ ನಿಶ್ಚಿತ ವೇತನದ ಪಾವತಿ. ದಡ್ಡನಿರಲಿ, ಬುದ್ಧಿವಂತನಿರಲಿ, ಸೇವಾನಿಯಮದಂತೆ ಬಡ್ತಿ, ಅಧಿಕ ವೇತನ, ನಿವೃತ್ತಿ ವೇತನ, ನಿಯಮದಂತೆ ರಜ, ಇನ್ನೂ ಹಲವು ಸೌಲಭ್ಯಗಳು.

ದಕ್ಷತೆ, ಬುದ್ಧಿವಂತಿಕೆಗೂ ಮನ್ನಣೆ ದೊರೆಯದೆ ಹೋಗದು. ವಿಶ್ವೇಶ್ವರಯ್ಯ ನವರು ತಮ್ಮ ಸಾಮರ್ಥ್ಯ, ಬುದ್ಧಿವಂತಿಕೆ, ಕಾಲಕ್ಷಮತೆ, ಪ್ರಾಮಾಣಿಕತೆ ಇವುಗಳಿಂದ ಸರ್ಕಾರ ಹಾಗೂ ಸಾರ್ವಜನಿಕರ ಗೌರವ ಗಳಿಸಿದ್ದರು. ಇವರ ಅಸಾಧಾರಣ ಗುಣ ಗಳನ್ನು ಗಮನಿಸಿ ಸರ್ಕಾರ ಬೇಗ ಬೇಗನೆ ಬಡ್ತಿ ಕೊಡುತ್ತಾ ಬಂತು. 18 ಆಂಗ್ಲ ಅಧಿಕಾರಿಗಳ ಮೇಲೆ ಇವರಿಗೆ ಬಡ್ತಿ ದೊರೆಯಿತು. ಇದರಿಂದ ಹಲವರಿಗೆ ಅಸೂಯೆ, ಅಸಮಾಧಾನ. ಆ ಕಾಲಕ್ಕೆ ಹಲವು ಉನ್ನತ ಸ್ಥಾನಗಳು ಆಂಗ್ಲರಿಗೆ ಮೀಸಲು. ಛೀಫ್ ಎಂಜಿನಿಯರ್ ಸ್ಥಾನ ಮೀಸಲಾಗಿತ್ತು.

ತೀವ್ರಗತಿಯಲ್ಲಿ ಮೇಲೇರುತ್ತಿದ್ದ ವಿಶ್ವೇಶ್ವರಯ್ಯನವರಿಗೆ ಈ ಸ್ಥಾನ ದೊರೆಯ ಬೇಕಾಗಿತ್ತು. ಆದರೆ ಮೀಸಲಾತಿ ನಿಯಮ ಇದಕ್ಕೆ ಅಡ್ಡಿಯಾಗಿತ್ತು. ಮಾಡಲೇನು? ಎಲ್ಲ ದೃಷ್ಟಿಯಿಂದ ವಿಶ್ವೇಶ್ವರಯ್ಯ ಈ ಸ್ಥಾನಕ್ಕೆ ಅರ್ಹರಾಗಿದ್ದರು. ಅವರು ಹಿಂದು–ಮುಂದು ನೋಡಲಿಲ್ಲ. ಈ ಸ್ಥಾನ ಲಭಿಸದಿದ್ದರೆ ರಾಜಿನಾಮೆ ಸಲ್ಲಿಸಲು ನಿರ್ಧರಿಸಿ ದರು.

ಈ ಸುದ್ದಿ ತಿಳಿದ ಹಿತೈಷಿಗಳೂ, ಸಹಪಾಟಿಗಳೂ ರಾಜಿನಾಮೆ ಕೊಡಬೇಡಿ ಎಂದ ವಿಶ್ವೇಶ್ವರಯ್ಯನವರ ಮನಸ್ಸು ಪರಿವರ್ತಿಸಲು ತುಂಬ ಪ್ರಯತ್ನ ನಡೆಸಿದರು. ಅವರು ಕೆಲಸಕ್ಕೆ ಸೇರಿ ಇಪ್ಪತ್ತಮೂರು ವರ್ಷಗಳಾಗಿತ್ತು. ಪಿಂಚಣಿಗೆ ಅರ್ಹ ರಾಗಲು ಇನ್ನೂ ಎರಡು ವರ್ಷ ಕಾಲ ಕಳೆಯಬೇಕಾಗಿತ್ತು. ಎಷ್ಟೇ ಒತ್ತಾಸೆ ಬಂದರೂ ದೃಢಸಂಕಲ್ಪದಿಂದ ಅವರು ವಿಚಲಿತರಾಗಲಿಲ್ಲ. ರಾಜಿನಾಮೆ ಪತ್ರ ಗವರ್ನರರಿಗೆ ಕಳುಹಿಸಿಕೊಟ್ಟರು.

ಈ ಪತ್ರ ನೋಡಿ ಗವರ್ನರ್ ಲಾರ್ಡ್ ಸಿಡನ್‌ಹ್ಯಾಂ ಚಕಿತರಾದರು. ಇವರ ಅಸಾಧಾರಣ ಸಾಮರ್ಥ್ಯ, ದಕ್ಷತೆ, ಪ್ರಾಮಾಣಿಕತೆ, ಕಾರ್ಯತತ್ಪರತೆ ಇವುಗಳನ್ನು ಮೆಚ್ಚಿ ತ್ವರಿತಗತಿಯಲ್ಲಿ ಇವರಿಗೆ ಸರ್ಕಾರ ಬಡ್ತಿ ಕೊಡುತ್ತಾ ಬಂದಿದೆ. ಇನ್ನೆರಡು ವರ್ಷ

ಸೇವೆಯಲ್ಲಿ ನಿರತರಾಗಿದ್ದರೆ ಪಿಂಚಣಿ ಪಡೆಯುವ ಅವಕಾಶ ದೊರೆಯುತ್ತದೆ. ಹೀಗಿದ್ದರೂ ಈ ವ್ಯಕ್ತಿ ರಾಜೀನಾಮೆ ಕೊಡುತ್ತಿರುವನಲ್ಲ?

ವಿಶ್ವೇಶ್ವರಯ್ಯನವರನ್ನು ಗವರ್ನರ್ ಬರಮಾಡಿಕೊಂಡು ರಾಜೀನಾಮೆ ಹಿಂತೆಗೆದುಕೊಳ್ಳುವಂತೆ ಮನ ಒಲಿಸಲು ಬಹಳ ಪ್ರಯತ್ನಿಸಿದರು. ನಿಮ್ಮ ಸಾಮರ್ಥ್ಯ ಮೆಚ್ಚಿ ನಿಮಗೆ ಸರ್ಕಾರ ಪುರಸ್ಕಾರ ಕೊಡುತ್ತಲೇ ಬಂದಿದೆ. ಇದನ್ನು ನೀವು ಗ್ರಹಿಸಬೇಕು. ಗವರ್ನರ್ ಸಿಡನ್‌ಹ್ಯಾಂ ನೀಡಿದ ಅಭಯ ಗಮನಾರ್ಹ. ತಾನು ಅಧಿಕಾರದಲ್ಲಿ ಇನ್ನು ಸ್ವಲ್ಪ ಕಾಲ ಉಳಿಯಲು ಸಾಧ್ಯವಾದರೆ, ವಿಶ್ವೇಶ್ವರಯ್ಯನವರು ನೌಕರಿಯಲ್ಲೇ ಮುಂದುವರಿಯುವುದಾದರೆ, ಉನ್ನತ ಸ್ಥಾನಕ್ಕೆ ಭಾರತೀಯರು ಏರಲು ಅಡ್ಡಿಯಾಗುತ್ತಿರುವ ನಿಯಮ ಮಾರ್ಪಡಿಸಿ ಛೀಫ್ ಇಂಜಿನಿಯರ್ ಸ್ಥಾನ ಕೊಡಿಸುವ ಪ್ರಯತ್ನ ನಡೆಸುವ ಭರವಸೆ ನೀಡಿದರು.

ಇಪ್ಪತ್ತೈದು ವರ್ಷಗಳ ಸೇವೆ ಸಲ್ಲಿಸಿ ಪಿಂಚಣಿ ಪಡೆಯಬಹುದಾದ ಸದವಕಾಶ ಒಂದೆಡೆ. ಇದರಿಂದ ನಿತಾಂತ, ನಿರಾತಂಕ, ನಿರಾಳ ಸುಖಜೀವನ ನಡೆಸಬಹುದಾದ ಆಮಿಷ ಒಂದೆಡೆ. ಸ್ವಾಭಿಮಾನ, ಆತ್ಮಾಭಿಮಾನ, ದೇಶಾಭಿಮಾನ ಮತ್ತೊಂದೆಡೆ. ಉಭಯ ಸಂಕಟ. ದೃಢ ಸಂಕಲ್ಪಿ ವಿಶ್ವೇಶ್ವರಯ್ಯನವರಿಗೆ ಎರಡರಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂಬ ಚಿಂತೆ ಪೀಡಿಸಲಿಲ್ಲ. ಹಣ ಹೇಗಾದರೂ ಗಳಿಸಬಹುದು. ಆಗಲೇ ಅವರಿಗೆ ಎರಡು ಸಂಸ್ಥಾನಗಳಿಂದ ಆಹ್ವಾನ ಬಂದಿತ್ತು. ಆದರೆ ಸ್ವಾಭಿಮಾನ ದೇಶಾಭಿಮಾನ ಹಣಕ್ಕಿಂತ ಮಿಗಿಲು. ಭಾರತೀಯರ ಸಾಮರ್ಥ್ಯ ಕಡೆಗಣಿಸುವ ದುರಭಿಮಾನಕ್ಕೆ ತಲೆಬಾಗಲಾಗದು. ಈ ರೀತಿಯ ದೃಢ ಮನೋಭಾವನೆ ತಾಳಿದ್ದ ವಿಶ್ವೇಶ್ವರಯ್ಯನವರು ಆಸೆ ಆಮಿಷಗಳಿಗೆ ಮಣಿಯದೆ ರಾಜೀನಾಮೆಯನ್ನು ಹಿಂತೆಗೆದುಕೊಳ್ಳಲಿಲ್ಲ.

ಇವರಲ್ಲಿ ತುಂಬ ಅಭಿಮಾನ ತಾಳಿದ್ದ ಗವರ್ನರ್ ಲಾರ್ಡ್ ಸಿಡನ್‌ಹ್ಯಾಂ ವಿಶ್ವೇಶ್ವರಯ್ಯನವರಿಗೆ ಪೂರ್ಣಾವಧಿಯ ನಿವೃತ್ತಿ ವೇತನ ಕೊಡಿಸಿದರು.

# 6. ಮೂಸಿ ಪ್ರವಾಹದ ಪ್ರಕೋಪ

ವಿಶ್ವೇಶ್ವರಯ್ಯನವರು 1908ರ ಮೇ ತಿಂಗಳಲ್ಲಿ ಬೊಂಬಾಯಿ ಸರ್ಕಾರದ ಕೆಲಸದಿಂದ ನಿವೃತ್ತರಾದರು. ತದನಂತರ ಅವರು ಜ್ಞಾನಾರ್ಜನೆಗಾಗಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರವಾಸ ಮಾಡಲು ಹೊರಟರು. ಲಂಡನ್ನಿನಲ್ಲಿ ಇದ್ದಾಗ ಅವರ ಸೇವೆ ಹೈದರಾಬಾದ್, ಸರ್ಕಾರಕ್ಕೆ ಅಗತ್ಯವಾಗಿದೆ ಎಂಬ ತಂತಿ, ಇಂಡಿಯ ಸರ್ಕಾರ ಕಳುಹಿಸಿತು. ಅಷ್ಟು ಹೊತ್ತಿಗೆ ಅವರು ಇಟಲಿಯ ಮಿಲಾನ್ ನಗರ ಸೇರಿದ್ದರು. ಲಂಡನ್ನಿನಿಂದ ಮಿಲಾನ್‌ಗೆ ಕೂಡಲೇ ಭಾರತಕ್ಕೆ ಮರಳುವಂತೆ ಲಂಡನ್ನಿನಲ್ಲಿರುವ ಬ್ರಿಟಿಷ್ ಪ್ರಭುತ್ವದ ಕಚೇರಿ ಯಿಂದ ಪತ್ರ ಹೋಯಿತು. ಮೊದಲೇ ಏರ್ಪಡಿಸಿಕೊಂಡಿದ್ದ ಪ್ರವಾಸ ಹಠಾತ್ತಾಗಿ ಕೊನೆಗಾಣಿಸಲು ಅವರು ಇಚ್ಛಿಸಲಿಲ್ಲ. ಐದು ತಿಂಗಳ ನಂತರ ಪ್ರವಾಸ ಮುಗಿಸಿ ಬರುವುದಾಗಿ ತಿಳಿಸಿದರು. ಅಲ್ಲದೆ ಬೇರೆಯವರನ್ನು ನೇಮಿಸಿಕೊಳ್ಳಲು ತಾನು ಆಕ್ಷೇಪಿಸುವುದಿಲ್ಲವೆಂದು ಸ್ಪಷ್ಟಪಡಿಸಿದರು. ಪತ್ರವ್ಯವಹಾರ ಇಷ್ಟರಿಂದಲೇ ಕೊನೆಗೊಳ್ಳಲಿಲ್ಲ. ಕೆಲವು ಷರತ್ತುಗಳನ್ನು ವಿಧಿಸಿದರು. ಹೈದರಾಬಾದಿನ ವಿಭಾಗದ ಅಧಿಕಾರಿ ಆಂಗ್ಲ. ಅವನಿಗೆ ಭಾರತೀಯನಿಗಿಂತ ಅಧಿಕ ವೇತನ. ಆಂಗ್ಲ ಅಧಿಕಾರಿಗೆ ಕೊಡುವ ವೇತನ ತನಗೂ ಸಲ್ಲಬೇಕು. ತನಗೆ ಸಹಾಯಕರಾಗಿ ಬೇಕಾದವರನ್ನು ನೇಮಿಸಿಕೊಳ್ಳುವ ಸ್ವಾತಂತ್ರ್ಯ ಇರಬೇಕು. ಇವು ಷರತ್ತಿನ ಮುಖ್ಯಾಂಶಗಳು. ಅತಿ ಶ್ರೀಮಂತರಾದರೂ ತುಂಬ ಜಾಣ ಎನಿಸಿಕೊಂಡಿದ್ದ ನಿಜಾಮರು ಈ ಷರತ್ತುಗಳನ್ನು ಒಪ್ಪಿಕೊಂಡರು.

ಅಮೇರಿಕ, ಕೆನಡ, ರಷ್ಯಗಳ ಪ್ರವಾಸ ಮುಗಿಸಿ ಏಪ್ರಿಲ್ 1909ರಲ್ಲಿ ವಿಶ್ವೇಶ್ವರಯ್ಯ ನವರು ಭಾರತಕ್ಕೆ ಮರಳಿದರು. ಏಪ್ರಿಲ್ 15 ಹೈದರಾಬಾದಿನ ವಿಶೇಷ ಎಂಜಿನಿಯರ್ ಅಧಿಕಾರ ಸ್ವೀಕರಿಸಿದರು. ಹುದ್ದೆ ಇವರಿಗಾಗಿ ಕಾದಿತ್ತು. ಲಂಡನ್ನಿನಲ್ಲಿ ಇದ್ದಾಗ ತುರುತ್ತಾಗಿ ಇವರನ್ನು ಬರುವಂತೆ ಕರೆ ಹೋಗಲು ಸೆಪ್ಟಂಬರ್ 28, 1908ರಲ್ಲಿ ಹೈದರಾಬಾದಿನಲ್ಲಿ ಸಂಭವಿಸಿದ ಮಹಾ ಪ್ರಳಯದ ದುರಂತ ಕಾರಣ. ನಗರವನ್ನು ಇಂಥಾ ದುರಂತಗಳಿಂದ ರಕ್ಷಿಸುವುದು; ಹೈದರಾಬಾದ್ ನಗರದ ಪುನರ್ನಿರ್ಮಾಣ; ಹೈದರಾಬಾದ್ ಮತ್ತು ಬೀದರ್‌ಘಾಟ್ ಇವುಗಳ ಒಳಚರಂಡಿ ವ್ಯವಸ್ಥೆ; ನಗರ ನೈರ್ಮಲ್ಯ ರಕ್ಷಣೆ. ಇವುಗಳಿಗೆ ಸೂಕ್ತ ಯೋಜನೆ ಸಿದ್ಧಪಡಿಸಿ ಕೊಡುವುದು ಅಯ್ಯ ನವರಿಗೆ ವಹಿಸಿಕೊಟ್ಟ ಹೊಣೆ.

ಮೂಸಿ ಮತ್ತು ಇಯೂಸಿ ಇವು ಅವಳಿಜವಳಿ ನದಿಗಳು. ಹೈದರಾಬಾದ್ ನಗರದ ನಡುವೆ ಮೂಸಿ ಹರಿಯುತ್ತದೆ. ನದಿಯ ಉಭಯ ದಡಗಳಲ್ಲಿ ನಗರ ಬೆಳೆದಿವೆ. ನದಿ

**ಅಷ್ಟು ದೊಡ್ಡದಲ್ಲ. ಆದರೆ ಮಳೆಗಾಲದಲ್ಲಿ ಹುಚ್ಚುಹೊಳೆಯಾಗಿ ಹರಿಯುತ್ತದೆ. ಊರೊಳಕ್ಕೆ ನುಗ್ಗಿ ಮನೆಮಠಗಳನ್ನು ಉರುಳಿಸಿ ಅಪಾರ ಅರ್ಥ ಹಾನಿ, ಪ್ರಾಣಹಾನಿ ಮಾಡುತ್ತದೆ. ವರ್ಷವರ್ಷವೂ ಈ ದುರಂತ ಸಂಭವಿಸುತ್ತಲೇ ಇತ್ತು. 1908ರಲ್ಲಿ ಹಿಂದೆ ಎಂದೂ ಸಂಭವಿಸದ ಆಘಾತ ಸಂಭವಿಸಿತ್ತು. ಸಂಸ್ಥಾನದ ಕೆಲವೆಡೆ 12ರಿಂದ 18 ಅಂಗುಲ ಮಳೆ ಒಂದೇ ದಿನದಲ್ಲಿ ಸುರಿದಿತ್ತು. ಇದರಿಂದ ನದಿ ಉಕ್ಕಿ ಹರಿದು ಜಲಪ್ರಳಯವಾಗಿತ್ತು.**

ವಹಿಸಿಕೊಂಡ ಕೆಲಸದ ಪೂರ್ಣ ಪರಿಶೀಲನೆ ನಡೆಸುವುದು ವಿಶ್ವೇಶ್ವರಯ್ಯನವರ ಕ್ರಮ. ಹೈದರಾಬಾದಿನ ಕೆಲವು ಎಂಜಿನಿಯರುಗಳನ್ನೂ, ನೌಕರರನ್ನೂ ಸರ್ಕಾರ ಇವರ ಸಹಾಯಕ್ಕೆ ಒದಗಿಸಿತು. ಟಿ. ಡಿ. ಮೆಕನ್ಜಿ ಎಂಬ ಆಂಗ್ಲ ಎಂಜಿನಿಯರ್ ಇಂಥವರಲ್ಲಿ ಒಬ್ಬ. ಈತನೂ ಹೆಸರಾಂತ ವ್ಯಕ್ತಿ. ಆಂಗ್ಲನಾದ ತಾನು ಭಾರತೀಯನ ಅಧೀನದಲ್ಲಿ ಕೆಲಸ ಮಾಡುವುದೇ ಎಂಬ ಅಹಂಭಾವದಿಂದ ಅಯ್ಯನವರ ಅಧೀನದಲ್ಲಿ ಕೆಲಸ ಮಾಡಲು ನಿರಾಕರಿಸಿದ. ತಮಗೆ ಪರಿಚಿತರಾದ ಕೆಲವು ಸಹಾಯಕರನ್ನು ವಿಶ್ವೇಶ್ವರಯ್ಯನವರು ಬೊಂಬಾಯಿಯಿಂದ ಬರಮಾಡಿಕೊಂಡರು. ನದಿಯ ಉಗಮದಿಂದ ಸಂಗಮದ ವರೆಗೆ ಸರ್ವೆ ಮಾಡಿಸಿದರು. ಪ್ರವಾಹದಿಂದ ಸಂಭವಿಸಿದ ದುರಂತದ ಹಿಂದಿನ ವರದಿಗಳನ್ನು ಪರಿಶೀಲಿಸಿದರು.

ನೆರೆಯ ಪ್ರಾಂತಗಳಾದ ಬೊಂಬಾಯಿ, ಮದರಾಸು ಇಲ್ಲಿಯ ಮಳೆಯ ಅಂಕಿಅಂಶ ಸಂಗ್ರಹಿಸಿದರು. ಪ್ರಪಂಚದ ಹಲವು ಭಾಗಗಳಲ್ಲಿ ಸಂಭವಿಸಿದ ಅತಿವೃಷ್ಟಿಯ ವರದಿಗಳನ್ನು ಪರಿಶೀಲಿಸಿದರು. ಹೈದರಾಬಾದಿನ ಮೇಲ್ಭಾಗದ ಮೂಸಿ ಜಲಾನಯನ ಪ್ರದೇಶದಲ್ಲಿ 788 ಕೆರೆಗಳು, ಮೂರು ಚದರ ಮೈಲಿಗೆ ಸರಾಸರಿ ಐದು ಕೆರೆಗಳು. ಇವುಗಳ ಪೈಕಿ 221 ಕೆರೆಗಳು ಮಳೆಯ ಪ್ರಭಾವದಿಂದ ಒಡೆದುವು. ತುಂಬ ದೊಡ್ಡದಾದ ಪಾಲ್ಮಕೋಲೆ ಮತ್ತು ಪಾರ್ತಿ ಕೆರೆಗಳ ಜಲಾನಯನ ಪ್ರದೇಶದಲ್ಲಿ ಅತ್ಯಂತ ಭಾರಿ ಪ್ರಮಾಣದಲ್ಲಿ ಮಳೆ ಸುರಿಯಿತು. ಪಾರ್ತಿ ಕೆರೆ ಹೈದರಾಬಾದಿನಿಂದ 22 ಮೈಲಿಗಳ ಮೇಲ್ಗಡೆ ಇದೆ. ಈ ದೊಡ್ಡ ಜಲಾಶಯ ಒಡೆದುದು ಬೆಳಿಗ್ಗೆ 5 ಘಂಟೆಗೆ. ಘಂಟೆಗೆ ನಾಲ್ಕು ಮೈಲಿಗಳ ವೇಗದಲ್ಲಿ ನೀರು ಹರಿಯುತ್ತಿತ್ತು. ಪ್ರವಾಹ ಹೈದರಾಬಾದಿನಲ್ಲಿ ಬೆಳಿಗ್ಗೆ 11 ಘಂಟೆಗೆ ಅತ್ಯುನ್ನತ ಮಟ್ಟಕ್ಕೆ ಏರಿತು. ಜಲಾನಯನ ಪ್ರದೇಶ ಸಣ್ಣದಾದಷ್ಟೂ ಪ್ರವಾಹದ ತೀಕ್ಷ್ಣತೆ ಬಹಳಷ್ಟು ಹೆಚ್ಚುತ್ತದೆ. ವಿಶ್ವೇಶ್ವರಯ್ಯನವರು ನಿಜಾಮರ ಸರ್ಕಾರಕ್ಕೆ ಒಪ್ಪಿಸಿದ ದೀರ್ಘ ವರದಿಯಿಂದ, ಅವರು ಎಷ್ಟು ಕೂಲಂಕಷ ಪರಿಶೀಲನೆ ನಡೆಸುತ್ತಿದ್ದರು ಎಂದು ಉದಹರಿಸಲು ಒಂದೆರಡು ವಾಕ್ಯಗಳನ್ನು ಇಲ್ಲಿ ಉದ್ಧರಿಸಲಾಗಿದೆ.

ಪ್ರವಾಹದ ಹೆಚ್ಚಿನ ನೀರು ತಡೆಹಿಡಿದು ಸಂಗ್ರಹಿಸಲು ಮೂಸಿ ನದಿಗೆ ಅಡ್ಡಲಾಗಿ ಹೈದರಾಬಾದಿನಿಂದ ಎಂಟೂವರೆ ಮೈಲಿಗಳ ಮೇಲ್ಭಾಗದಲ್ಲಿ ಒಂದು ಜಲಾಶಯ;

ಆರೂವರೆ ಮೈಲಿಗಳ ಮೇಲುಗಡೆ ಇಯಾಸಿ ನದಿಗೆ ಮತ್ತೊಂದು ಕಟ್ಟೆ–ಹೀಗೆ ಎರಡು ಜಲಾಶಯಗಳನ್ನು ನಿರ್ಮಿಸುವುದು. ನಗರದ ಒಳಭಾಗದಲ್ಲಿ ಹರಿಯುವ ಮೂಸಿ ನದಿಯ ಉಭಯ ಪಾರ್ಶ್ವದ ದಂಡೆಗಳನ್ನು ಎತ್ತರಿಸಿ ಉದ್ಯಾನವನ ನಿರ್ಮಿಸುವುದು. ಇವು ಪ್ರವಾಹದ ಪ್ರಕೋಪ ತಡೆಯಲು ವಿಶ್ವೇಶ್ವರಯ್ಯನವರು ಸೂಚಿಸಿದ ಮುಖ್ಯಾಂಶಗಳು.

ಎಷ್ಟೇ ಸಮರ್ಥನೆನಿಸಿಕೊಂಡಿದ್ದರೂ ವಿಶ್ವೇಶ್ವರಯ್ಯ ಭಾರತೀಯನಲ್ಲವೇ? ಶ್ವೇತ ವರ್ಣೀಯರು ಮನುಜಕುಲದ ಶ್ರೇಷ್ಠರು ಎಂಬ ಪೊಳ್ಳುವಾದ ಆಗ ಪ್ರಚಲಿತ. ಮೊದಲು ಹೈದರಾಬಾದಿನಲ್ಲಿ ಎಂಜಿನಿಯರಾಗಿದ್ದು, ಮದರಾಸು ಸರ್ಕಾರದಲ್ಲಿದ್ದ ರಾಸ್ಕೊ ಅಲೆನ್‌ಗೆ ನಿಜಾಂ ಸರ್ಕಾರ ವಿಶ್ವೇಶ್ವರಯ್ಯನವರ ವರದಿ ಕಳುಹಿಸಿ ಅವರ ಅಭಿಪ್ರಾಯ ಕೋರಿತು. ಇದಕ್ಕಿಂತ ಉತ್ತಮವಾದ ವರದಿ ಅನ್ಯರಿಂದ ನಿರೀಕ್ಷಿಸಲಾಗದು. ಅವರ ಕೀರ್ತಿಗೆ ಅನುಗುಣವಾದ ವರದಿ ಅವರು ಒಪ್ಪಿಸಿರುತ್ತಾರೆ. ವ್ಯರ್ಥವಾಗಿ ಹೋಗದಂತೆ, ಸದುಪಯೋಗಪಡಿಸಿಕೊಳ್ಳುವ ವಿಧಾನ ತೋರಿಸಿಕೊಟ್ಟಿದ್ದಾರೆ. ವರದಿ ದೋಷಮುಕ್ತವಾಗಿದೆ. ತಡಮಾಡದೆ ಕಾರ್ಯಗತಗೊಳಿಸಿ. ಈ ರೀತಿಯಲ್ಲಿ ರಾಸ್ಕೊ ಅಲೆನ್ ವರದಿಯನ್ನು ಹೊಗಳಿ ಸರ್ಕಾರಕ್ಕೆ ತಿಳಿಸಿದರು.

ಇದಲ್ಲದೆ ಒಳಚರಂಡಿ ವ್ಯವಸ್ಥೆ, ಮೋರಿಯ ರೊಚ್ಚನ್ನು ಊರಿನಾಚೆಗೆ ಸಾಗಿಸಿ ಅದನ್ನು ಶುದ್ಧಮಾಡಿ ಬೇಸಾಯಕ್ಕೆ ಬಳಸಿಕೊಳ್ಳಬಹುದಾದ ಕ್ರಮ; ನಗರದ ಮುಖ್ಯ ಬೀದಿಗಳನ್ನು ವಿಸ್ತರಿಸಿ 'ಸಿಮೆಂಟ್' ಮತ್ತು 'ಮ್ಯಾಕೆಡಂ' ಧೂಳು ರಹಿತ ರಸ್ತೆಗಳ ನಿರ್ಮಾಣ; ಉದ್ಯಾನವನ, ಪ್ರವಾಹದ ವಿಕೋಪದಿಂದ ಮನೆಗಳನ್ನು ಕಳೆದುಕೊಂಡ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಡುವುದು ಇವೆಲ್ಲ ವರದಿಯಲ್ಲಿ ಅಡಕವಾಗಿವೆ.

ವಿಶ್ವೇಶ್ವರಯ್ಯನವರು ತಮ್ಮ ವರದಿಯನ್ನು ಸರ್ಕಾರಕ್ಕೆ ಸಕಾಲದಲ್ಲಿ ಒಪ್ಪಿಸಿದರೂ ಕೆಲಸ ಪ್ರಾರಂಭಿಸಲು ಮೂರುವರ್ಷಗಳಾದುವು. ಮೂಸಾ ನದಿಯ ಅಣೆಕಟ್ಟಿನ ಶಂಕುಸ್ಥಾಪನೆ 1913ರಲ್ಲಿ ನೆರವೇರಿಸಲ್ಪಟ್ಟಿತು. ಅಣೆಕಟ್ಟಿನ ಕಟ್ಟೋಣ ಪ್ರಾರಂಭ ವಾಗುವುದರೊಳಗೆ ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾಗಿದ್ದರು.

ಮೈಸೂರು ಸಂಸ್ಥಾನದ ಹಲವು ಜಲಾಶಯಗಳ ನಿರ್ಮಾಣದಿಂದ ಅನುಭವ ಮತ್ತು ಖ್ಯಾತಿ ಗಳಿಸಿದ್ದ ಸಿ. ಟಿ. ದಲಾಲರನ್ನು, ವಿಶ್ವೇಶ್ವರಯ್ಯನವರ ಸಲಹೆಯಂತೆ ಕಟ್ಟೆಯ ನಿರ್ಮಾಣ ಕಾರ್ಯಕ್ಕೆ ನೇಮಿಸಿಕೊಳ್ಳಲಾಯಿತು. ಮೈಸೂರಿನ ದಿವಾನ್ ಪದವಿಯಿಂದ ನಿವೃತ್ತರಾದ ಮೇಲೆ, ನಿಜಾಂ ಸರ್ಕಾರದ ಕೋರಿಕೆಯಂತೆ, ವಿಶ್ವೇಶ್ವರಯ್ಯನವರು ಹೈದರಾಬಾದಿಗೆ ಹೋಗಿ, ಅಪೂರ್ಣವಾಗಿದ್ದ ಕಾಂಗಾರಿಗಳು ಪೂರ್ಣವಾಗಲು ನೆರವಾದರು. ಮೂಸಿ ಮತ್ತು ಇಯಾಸಿ ನದಿಗಳಿಗೆ, ಪ್ರವಾಹದ ಪ್ರಕೋಪ ತಡೆಯಲು ಕಟ್ಟಲಾದ ಕಟ್ಟೆಗಳು ಹಿಮಾಯತ್‌ಸಾಗರ ಮತ್ತು ಉಸ್ಮಾನಸಾಗರ, ಹೈದರಾಬಾದ್

ಮತ್ತು ಸಿಕಂದರಾಬಾದ್ ನಗರಗಳಿಗೆ ನೀರೊದಗಿಸುತ್ತವೆ. ಈ ಅವಳಿ ನಗರಗಳು ಸಮೃದ್ಧ ನೀರು, ವಿದ್ಯುಚ್ಛಕ್ತಿ, ಕಂಗೊಳಿಸುವ ಉದ್ಯಾನವನಗಳಿಂದಲೂ ವಿಶಾಲ ರಸ್ತೆಗಳಿಂದಲೂ ಶೋಭಿಸುತ್ತಿರಲು ವಿಶ್ವೇಶ್ವರಯ್ಯನವರ ಕೈವಾಡವೇ ಮುಖ್ಯ ಕಾರಣ.

ವಿಶ್ವೇಶ್ವರಯ್ಯನವರ ಸಾಮರ್ಥ್ಯದ ಕುರಿತು ನಿಜಾಂ ಸರ್ಕಾರದ ಮುಖ್ಯ ಎಂಜಿನಿಯರ್ ಮೆಕನ್ಜಿ ಹೇಳಿರುವುದು ಗಮನಾರ್ಹ. "ದಿವಂಗತ ನಿಜಾಮರ ಸಲಹೆಗಾರರು ಈ ಯೋಜನೆಗೆ ದಕ್ಷ ಎಂಜಿನಿಯರನ್ನು ನೇಮಿಸುವುದರಲ್ಲಿ ಪ್ರದರ್ಶಿಸಿರುವ ಜಾಣ್ಮೆ ಹೈದರಾಬಾದಿನ ಅದೃಷ್ಟವೆಂದೇ ಹೇಳಬೇಕು. ಭಾರತದ ಎಂಜಿನಿಯರುಗಳಲ್ಲಿ ಅತ್ಯಂತ ಪ್ರತಿಭಾನ್ವಿತರಾದ, ಈಗ ಮೈಸೂರಿನ ದಿವಾನರಾಗಿರುವ ಮತ್ತು ಜೀವನದ ಯಾವ ರಂಗವನ್ನೇ ಪ್ರವೇಶಿಸಲಿ, ನಿಸ್ಸಂದೇಹವಾಗಿ ಅದರಲ್ಲಿ ಖ್ಯಾತಿ ಗಳಿಸಬಲ್ಲ ವಿಶ್ವೇಶ್ವರಯ್ಯನವರ ಸೇವೆಯ ಫಲ ಪಡೆದಿರುವುದು ನಮ್ಮ ಸೌಭಾಗ್ಯವೇ ಸರಿ." ವಿಶ್ವೇಶ್ವರಯ್ಯನವರೊಂದಿಗೆ ಅಹಂಭಾವದಿಂದ ಸಹಕರಿಸಲು ನಿರಾಕರಿಸಿದವರಿಂದ - ಈ ಹೊಗಳಿಕೆ.

# 7. ಮೈಸೂರಿಗೆ ಪಾದಾರ್ಪಣೆ

ಬೊಂಬಾಯಿ ಸರ್ಕಾರದ ಉದ್ಯೋಗದಿಂದ ನಿವೃತ್ತರಾದ ಮೇಲೆ ವಿಶ್ವೇಶ್ವರಯ್ಯನವರು ಮೇ 1908ರಿಂದ ಏಪ್ರಿಲ್ 1909ರ ವರೆಗೆ ಇಂಗ್ಲೆಂಡ್, ಯೂರೋಪ್, ಅಮೇರಿಕಗಳ ಪ್ರವಾಸ ಕೈಗೊಂಡಿದ್ದರು. ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರಿಗೆ ಮೈಸೂರಿಗ ವಿಶ್ವೇಶ್ವರಯ್ಯನವರ ಸೇವೆ ಪಡೆಯುವ ಅಭಿಲಾಷೆ. ಆಗ ದಿವಾನರಾಗಿದ್ದ ವಿ. ಪಿ. ಮಾಧವರಾಯರಿಂದ ಮೈಸೂರಿನ ಮುಖ್ಯ ಎಂಜಿನಿಯರ್ ಸ್ಥಾನ ಸ್ವೀಕರಿಸುವಂತೆ ಪತ್ರ ಬರೆಸಿದರು. ಏಪ್ರಿಲ್ 10, 1909ರಲ್ಲಿ ಈ ಪತ್ರ ಅವರ ಕೈ ಸೇರಿತು. ಆದರೆ ವಿಶ್ವೇಶ್ವರಯ್ಯನವರು ಹೈದರಾಬಾದಿನ ನಿಯತ ಕಾರ್ಯಕ್ಕೆ ಯೋಜನೆ ಸಿದ್ಧಪಡಿಸಲು ಒಪ್ಪಿಗೆ ಕೊಟ್ಟಿದ್ದರು. ಆದ್ದರಿಂದ ಈ ಆಹ್ವಾನ ಕೂಡಲೇ ಸ್ವೀಕರಿಸಲು ಇವರಿಗೆ ಸಾಧ್ಯವಾಗಲಿಲ್ಲ. ಏಪ್ರಿಲ್ 1909ರಿಂದ ಏಳು ತಿಂಗಳ ಕಾಲ ಇವರು ಹೈದರಾಬಾದಿನಲ್ಲಿದ್ದರು.

ವಿ. ಪಿ. ಮಾಧವ ರಾಯರ ನಿವೃತ್ತಿಯ ಅನಂತರ ಟಿ. ಆನಂದ ರಾಯರು ಮೈಸೂರಿನ ದಿವಾನರಾದರು. ಇದೇ ಕಾಲಕ್ಕೆ ಮೈಸೂರಿನ ಮುಖ್ಯ ಎಂಜಿನಿಯರಾಗಿದ್ದ ಮ್ಯಾಕ್ ಹಚಿನ್ ನಿವೃತ್ತರಾದರು. ವಿಶ್ವೇಶ್ವರಯ್ಯನವರ ಸೇವೆ ಪಡೆಯಲು ದಿವಾನ್ ಆನಂದ ರಾಯರಿಂದ ಮತ್ತೆ ಆಹ್ವಾನ ಕಳುಹಿಸಿದರು. ಅದುವರೆಗೂ ಆಂಗ್ಲರಿಗೆ ಮಾತ್ರ ಈ ಸ್ಥಾನ ಮೀಸಲಾಗಿತ್ತು. ಅತ್ಯಂತ ಪ್ರತಿಭಾನ್ವಿತ ಎಂಜಿನಿಯರ್ ವಿಶ್ವೇಶ್ವರಯ್ಯನವರ ಸೇವೆ ಪಡೆಯಲು ಬ್ರಿಟಿಷ್ ಪ್ರಭುತ್ವವೂ ಅಡ್ಡ ಬರಲಿಲ್ಲ.

ಇಂಥ ಅವಕಾಶ ಸಿಕ್ಕಿದರೆ ಜೀವನ ಸಾರ್ಥಕವಾಯಿತು ಎಂದು ತಿಳಿಯುವವರು ಬಹುಜನ. ವಿಶ್ವೇಶ್ವರಯ್ಯನವರು ವಿದೇಶಗಳಲ್ಲಿ ಶಿಕ್ಷಣ ಮತ್ತು ಕೈಗಾರಿಕೆಗಳ ಪ್ರಾಮುಖ್ಯತೆ ಗಮನಿಸಿದ್ದರು. ಪ್ರಗತಿಗೆ ಇವು ಅಗತ್ಯ ಎಂಬ ತೀರ್ಮಾನಕ್ಕೆ ಅವರು ಬಂದಿದ್ದರು. ಸಹಜವಾಗಿ ಮೈಸೂರಿನ ಅಭಿವೃದ್ಧಿಗೂ ಇವು ಅಗತ್ಯ. ಈ ಕ್ಷೇತ್ರಗಳಲ್ಲಿ ಕೆಲಸ ಮಾಡಲು ತನಗೆ ಸ್ವಾತಂತ್ರ್ಯ ಇರಬೇಕೆಂಬ ಷರತ್ತು ಅವರು ಹಾಕಿದರು. ಮಹಾರಾಜರು ಉದಾರ ಮನಸ್ಸಿನಿಂದ ಇದಕ್ಕೆ ಒಪ್ಪಿಗೆ ನೀಡಿದರು.

ವಿಶ್ವೇಶ್ವರಯ್ಯನವರು ಮೈಸೂರಿನ ಮುಖ್ಯ ಎಂಜಿನಿಯರಾಗಿ ನವಂಬರ್ 15, 1909ರಂದು ಅಧಿಕಾರ ಸ್ವೀಕರಿಸಿದರು. ಪದಾಧಿಕಾರದಿಂದ ಇವರು ರೈಲ್ವೆ ಮತ್ತು ಮರಾಮತ್ ಇಲಾಖೆಯ ಕಾರ್ಯದರ್ಶಿ ಸಹ ಆಗಿದ್ದರು. ಮೂರು ವರ್ಷಗಳ ಕಾಲ

ಈ ಸ್ಥಾನದಲ್ಲಿದ್ದರು. ಇದೇ ಕಾಲಕ್ಕೆ ಶಿಕ್ಷಣದ ಪ್ರಗತಿಗೆ ಕೈಗಾರಿಕೆಯ ಅಭಿವೃದ್ಧಿಗೆ ಎರಡು ಸಮಿತಿಗಳು ರಚಿತವಾದುವು. ಎರಡು ಸಮಿತಿಗಳಿಗೂ ವಿಶ್ವೇಶ್ವರಯ್ಯನವರೇ ಅಧ್ಯಕ್ಷರು. 1911ರಲ್ಲಿ ಮೊಟ್ಟಮೊದಲ ಸಂಪದಭಿವೃದ್ಧಿ ಸಮ್ಮೇಳನ ನೆರವೇರಿತು. ಮಹಾರಾಜರು ಪ್ರಾರಂಭಿಕ ಭಾಷಣ ಮಾಡಿದರು. ಮದರಾಸಿನ ಕೈಗಾರಿಕೆ ಇಲಾಖೆಯ ನಿವೃತ್ತ ಡೈರೆಕ್ಟರ್ ಸರ್ ಆಲ್‌ಫ್ರೆಡ್ ಚಾಟರ್‌ಟನ್ ಸಮಿತಿಯ ಒಬ್ಬ ಪ್ರಮುಖ ಸದಸ್ಯರಾಗಿದ್ದರು.

ವಿಶ್ವೇಶ್ವರಯ್ಯನವರು ಅನಿರ್ಬಂಧಿತ ಸೇವಾವಕಾಶ ದೊರಕಿದ್ದಕ್ಕಾಗಿ ಹಿಗ್ಗಿದರು. ಆರ್ಥಿಕವಾಗಿ ಸಂಪದ್ಭರಿತ, ವೈಜ್ಞಾನಿಕವಾಗಿ ಆಧುನಿಕ, ಕೈಗಾರಿಕೆಯಲ್ಲಿ ಪ್ರಗತಿಪರ; ಶಿಕ್ಷಣದಲ್ಲಿ ಅವಿದ್ಯೆ, ಅಜ್ಞಾನಗಳ ಸಂಹಾರ ಇವು ಅವರು ಕನಸುಕಾಣುತ್ತಿದ್ದ ಮೈಸೂರು. ದಿವಾನ್ ಪದವಿಯಿಂದ ನಿವೃತ್ತರಾಗುವ ವರೆಗೂ ಈ ಗುರಿಸಾಧನೆಯಲ್ಲಿ ತಮ್ಮ ಶಕ್ತಿಯನ್ನು ವಿನಿಯೋಗಿಸಿದರು.

ಮರಾಮತ್ ಇಲಾಖೆಗೆ ಯೋಗ್ಯ ಅಧಿಕಾರಿಗಳನ್ನು ನೇಮಿಸುವ ಸಮಸ್ಯೆಯನ್ನು ಪ್ರಾರಂಭದಲ್ಲಿಯೇ ಬಗೆಹರಿಸಬೇಕಾದ ಪರಿಸ್ಥಿತಿ ತಲೆದೋರಿತು. ಈ ಸ್ಥಾನಕ್ಕೆ ಅರ್ಜಿಗಳನ್ನು ಬರವಮಾಡಿಕೊಳ್ಳಲಾಗಿತ್ತು. ಅರ್ಜಿದಾರರ ಪಟ್ಟಿ, ಅವರವರ ಅರ್ಹತೆಗೆ ಅನುಗುಣವಾಗಿ ವಿಂಗಡಿಸಿ ವಿಶ್ವೇಶ್ವರಯ್ಯನವರಿಗೆ ಕಳುಹಿಸಿ ಕೊಡಬೇಕಾದ್ದು ಇಲಾಖೆಯ ಮುಖ್ಯಾಧಿಕಾರಿಯ ಕರ್ತವ್ಯ. ಮುಖ್ಯ ಎಂಜಿನಿಯರ್ ಪಟ್ಟಿಯನ್ನು ಕಳುಹಿಸಿ ಕೊಡುವಾಗ, ಅರ್ಜಿದಾರ ಯಾವ ಉನ್ನತ ಅಧಿಕಾರಿಯ ಬಳಗ, ಶಿಫಾರಸ್ ಮಾಡಿದ್ದವರ ಹೆಸರು ಮೊದಲಾದ ವಿವರಗಳನ್ನು ಬರೆದು ಕಳುಹಿಸಿದ್ದ. ಉನ್ನತ ಅಧಿಕಾರಿಗಳಿಂದ ಶಿಫಾರಸ್ ಮಾಡಲ್ಪಟ್ಟವನು, ದೊಡ್ಡ ಮನೆತನಕ್ಕೆ ಸೇರಿದವನು. ಈ ದಾಕ್ಷಿಣ್ಯಗಳನ್ನು ಗಮನಿಸಿ ಅರ್ಜಿದಾರರ ಆಯ್ಕೆ ನಡೆಯಬೇಕೆಂದು ಅಧಿಕಾರಿಯ ಸಲಹೆ. ಅದು ವರೆಗೂ ಇವುಗಳನ್ನು ಗಮನಕ್ಕೆ ತೆಗೆದುಕೊಂಡೇ ನೇಮಕಾತಿ ನಡೆಯುತ್ತಿತ್ತು. ಆದರೆ ಅರ್ಜಿದಾರನ ವಿದ್ಯಾರ್ಹತೆ, ಯೋಗ್ಯತೆ, ಅನುಭವ ಇವುಗಳಿಗೆ ಆದ್ಯತೆ ಕೊಡಬೇಕೆಂದು ವಿಶ್ವೇಶ್ವರಯ್ಯನವರ ಅಭಿಮತ. ಪಟ್ಟಿಯನ್ನು ಅಧಿಕಾರಿಗೆ ಹಿಂತಿರುಗಿಸಿ, ಅರ್ಹತೆ ಯೋಗ್ಯತೆ ಇವುಗಳ ಅನುಗುಣ ಪಟ್ಟಿಮಾಡಿ ಕಳುಹಿಸುವಂತೆ ತಿಳಿಸಿದರು. ದಾಕ್ಷಿಣ್ಯಕ್ಕೆ ಮಣಿಯದೆ ಯೋಗ್ಯತೆ ಪುರಸ್ಕರಿಸಿ ಅವರು ಆಕಾಂಕ್ಷಿಗಳ ಆಯ್ಕೆ ಮಾಡಿದರು.

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಮೂರು ವರ್ಷ ಕಾಲ ಮುಖ್ಯ ಎಂಜಿನಿಯರಾಗಿ ಸಲ್ಲಿಸಿದ ಸಮರ್ಪಕ ಕಾರ್ಯದಿಂದ ಸಂತೃಪ್ತರಾದ ಮಹಾರಾಜರವರು ವಿಶ್ವೇಶ್ವರಯ್ಯನವರನ್ನು ದಿವಾನರಾಗಿ ನೇಮಿಸಿದರು. ವಿಶ್ವೇಶ್ವರಯ್ಯನವರು ಅತ್ಯಂತ ತೀಕ್ಷ್ಣಮತಿಯ, ದಕ್ಷ, ಪ್ರಾಮಾಣಿಕ ಎಂಜಿನಿಯರೆಂದು ವಿಶ್ವ ಖ್ಯಾತಿ ಗಳಿಸಿದ್ದುದು ದಿಟ. ಕೆರೆ, ಕಾಲುವೆ, ಕಟ್ಟೆ, ಜಲಾಶಯ ಈ ತಾಂತ್ರಿಕ ವಿಭಾಗಗಳಲ್ಲಿ ಖ್ಯಾತಿವೆತ್ತವನು

ದಕ್ಷ ಆಡಳಿತಗಾರನಾಗಬಲ್ಲನೇ? ಇದು ಹಲವರನ್ನು ಕಾಡುತ್ತಿದ್ದ ಸಂದೇಹ. ಅದು ವರೆಗೂ 'ಸಿವಿಲಿಯನ್' ಅಧಿಕಾರಿಗಳು ಮಾತ್ರ ದಿವಾನರಾಗಿದ್ದರು. ಆದರೆ ವಿಶ್ವೇಶ್ವ ರಯ್ಯನವರು ಆರು ವರ್ಷ ಕಾಲ ಮಾತ್ರ ದಿವಾನರಾಗಿ ಸಂಸ್ಥಾನಕ್ಕೆ ಸಲ್ಲಿಸಿದ ಅವಿಸ್ಮರ ಣೀಯ ಅದ್ಭುತ ಸೇವೆ ವ್ಯಕ್ತಿಗಳ ಯೋಗ್ಯತೆ, ಗುಣಸಾಮರ್ಥ್ಯ ಅಳೆಯುವ ಮಹಾ ರಾಜರ ಪ್ರಾಪಂಚಿಕ ಪರಿಜ್ಞಾನ, ಬುದ್ಧಿವಂತಿಕೆಗಳನ್ನು ನಿದರ್ಶಿಸುತ್ತದೆ.

ಇದುವರೆಗೂ ವಿಶ್ವೇಶ್ವರಯ್ಯನವರು ಪರಾಧೀನರಾಗಿ, ಉನ್ನತ ಅಧಿಕಾರಿಗಳ ಆದೇಶ ದಂತೆ ಕಾರ್ಯನಿರ್ವಹಿಸಬೇಕಾಗಿತ್ತು. ಈಗ ಸಂಸ್ಥಾನದ ಆಡಳಿತದ ಮುಖ್ಯಾಧಿಕಾರಿ ದಿವಾನರಾಗಿ ಬಹುಮಟ್ಟಿಗೆ ಸ್ವತಂತ್ರರಾಗಿ ವರ್ತಿಸುವ ಅವಕಾಶ ದೊರಕಿತು. ದೇಶದ ಸೇವೆಗೆ, ದೇಶದ ಮುನ್ನಡೆಗೆ ಸದವಕಾಶ ದೊರಕಿದ್ದಕ್ಕೆ ಸಂತುಷ್ಟರಾದರು. ಹಣಕ್ಕಾಗಿ ಅವರು ಎಂದೂ ಆಸೆಪಟ್ಟವರಲ್ಲ. ಆಂಗ್ಲರಿಗೆ ದೊರೆಯುವ ವೇತನ ತನಗೂ ದೊರೆಯಬೇಕೆಂದು ಆಶಿಸಿದ್ದುದು ಐಶ್ವರ್ಯಕ್ಕಾಗಿ ಅಲ್ಲ. ವರ್ಣಭೇದ ನೀತಿಯನ್ನು ವಿರೋಧಿಸಲು ಮತ್ತು ಶ್ವೇತ ವರ್ಣೀಯರು, ಕೃಷ್ಣವರ್ಣದವರಿಗಿಂತ ಶ್ರೇಷ್ಠರು ಎಂಬ ಸಿದ್ಧಾಂತ ವಿರೋಧಿಸುವ ಸಲುವಾಗಿ. ಯಾವ ಗಣನೀಯ ಆಸ್ತಿಯನ್ನೂ ಇವರು ಬಿಟ್ಟುಹೋಗಲಿಲ್ಲ. ಅಂತ್ಯಕಾಲಕ್ಕೆ ಹಿತೈಷಿಗಳ ಒತ್ತಾಯಕ್ಕೆ ಮಣಿದು ಒಂದು ಸಣ್ಣ ಬಂಗಲೆ ಕೊಂಡರು. ಅಷ್ಟೆ. ಶ್ರೀಮನ್ಮಹಾರಾಜರ ಹಾಗೂ ಈ ನಾಡಿನ ಸೇವೆ ಸಲ್ಲಿಸುವ ಅವಕಾಶ ದೊರಕಿತಲ್ಲ, ಇದೇ ಸಾಕು. ದಿವಾನ್ ಪದವಿ ಸ್ವೀಕರಿಸಿದ ಪ್ರಾರಂಭದಲ್ಲಿ ಈ ಪರಿಯಲ್ಲಿ ನುಡಿದಿರುತ್ತಾರೆ.

ವಿಶ್ವೇಶ್ವರಯ್ಯನವರು ಮೈಸೂರಿನ ಸೇವೆಗೆ ಪ್ರವೇಶಿಸುತ್ತಲೇ ನಾಡಿಗೆ ಹೊಸ ತೊಂದು ಜೀವಕಳೆ ಬಂತು. ನಿದ್ರಾವಸ್ಥೆಯ, ನಿರಾಶಾವಾದಿ ಜನತೆಯನ್ನು ಜಾಗೃತ ಗೊಳಿಸಿದರು. ನಾಗಾಲೋಟದಲ್ಲಿ ಓಡುವಂತೆ ಮಾಡಿದರು. ಕೇಂದ್ರ ಸರ್ಕಾರದಲ್ಲಿ ಸಚಿವರಾಗಿದ್ದ ದಿವಂಗತ ಎಚ್. ಸಿ. ದಾಸಪ್ಪನವರ ಮಾವ ಹಾಗೂ ಕರ್ನಾಟಕ ಸಂಪುಟದ ಸಚಿವೆಯಾಗಿದ್ದ ದಿವಂಗತ ಯಶೋಧರಮ್ಮನವರ ತಂದೆ ಕೆ. ಎಚ್. ರಾಮಯ್ಯನವರು, ವಿಶ್ವೇಶ್ವರಯ್ಯನವರನ್ನು ಎಕ್ಸ್‌ಪ್ರೆಸ್ ಉಗಿಬಂಡಿಯ ಎಂಜಿನ್ನಿಗೆ ಹೋಲಿಸಿರುತ್ತಾರೆ. ಜನ ಗುಡ್ಸ್ ಅಥವಾ ಸರಕು ಒಯ್ಯುವ ರೈಲಿನಂತೆ ನಿಧಾನ. ಈ ಮಾಲುಗಾಡಿಗೆ ಎಕ್ಸ್‌ಪ್ರೆಸ್ ಎಂಜಿನ್ ಲಗತ್ತಿಸಿದರೆ ಆಗುವ ಪರಿಸ್ಥಿತಿ. ಎಂಜಿನ್ ಮುಂದಕ್ಕೆ ಎಳೆಯುತ್ತದೆ, ಜನತೆ ಹಿಂದಕ್ಕೆ ಸೆಳೆಯುತ್ತದೆ. ಆದರೂ ಎಂಜಿನ್ ಬಿಡದು. ಹಬೆ ಏರಿಸಿ ಮುಂದಕ್ಕೆ ದೂಡುತ್ತದೆ.

ವಿಶ್ವೇಶ್ವರಯ್ಯನವರ "ಚಾಟಿಯ ಏಟು ನಿರ್ಜೀವ ಕುದುರೆಯನ್ನೂ ಬಡಿದೆಬ್ಬಿಸ ಬಲ್ಲುದು" ಎಂದಿರುತ್ತಾರೆ, ಭದ್ರಾವತಿ ಕಬ್ಬಿಣ ಕಾರ್ಖಾನೆಯ ಸಲಹೆಗಾರ ಅಮೇರಿಕದ ಪೆರಿನ್. "ನಾಡಿನ ಹೊಲಸನ್ನೆಲ್ಲ ಹೊತ್ತು ಸಾಗಿಸಬೇಕೆಂಬ ಬಿರುಗಾಳಿ" ಎನ್ನುತ್ತಾರೆ ಮತ್ತೊಬ್ಬ ಲೇಖಕ ಸಿದ್ಧವನಹಳ್ಳಿ ಕೃಷ್ಣ ಶರ್ಮ. ಅಂಥ ಚೇತನಶಕ್ತಿಸ್ವರೂಪಿ.

ದೇಹ ಕೃಶಾಂಗಿ, ಶಕ್ತಿ ಸರ್ವಾಂಗಿ. ಸೋಮಾರಿ, ಮೈಗಳ್ಳತನ ಕಂಡರೆ ಸಿಡಿಮಿಡಿ ಆಗುವರು. 'ಆಲಸ್ಯಂ ಅಮೃತಂ ವಿಷಂ'. ಆಲಸ್ಯದಿಂದ ಅಮೃತವೂ ವಿಷವಾದೀತು.

ವಿಶ್ವೇಶ್ವರಯ್ಯನವರ ಅವಿಶ್ರಾಂತ ಕ್ರಿಯಾಶಕ್ತಿ, ಅಜೇಯ ಕಾರ್ಯೋತ್ಸಾಹ, ಅಪ್ರತಿಮ ಸಾಮರ್ಥ್ಯ. ಜನಶಕ್ತಿಯಲ್ಲಿ ಅಪರಿಮಿತ ವಿಶ್ವಾಸ. ಇವುಗಳಿಗೆ ಎಣೆಯಿಲ್ಲ ಅವರಲ್ಲಿ.

"ನಮ್ಮವರು ಕಷ್ಟಪಟ್ಟು ಮೈದಣಿಸಿ ದುಡಿಯುವವರಲ್ಲ. ಯೂರೋಪಿನಲ್ಲಿರುವುದಕ್ಕಿಂತ ದಿನಗೆಲಸದ ಅವಧಿ ನಮ್ಮಲ್ಲಿ ಕಡಮೆ. ರಜಾದಿನಗಳು, ಹಬ್ಬಹುಣ್ಣಿಮೆಗಳು, ಹುಟ್ಟುಹಬ್ಬಗಳು ಹೆಚ್ಚು. ಸರ್ಕಾರಿ ಚಾಕರಿ ದೊರೆತರೆ ಸಾಕು. ಅನ್ನವೇನೋ ಭದ್ರ, ಶಾಶ್ವತ. ಅವನು ದಡ್ಡನಿರಲಿ, ಬುದ್ಧಿವಂತನಿರಲಿ; ಸೋಮಾರಿಯಿರಲಿ, ಚುರುಕಿಯಿರಲಿ, ಬಡ್ತಿ ತಾನಾಗಿ ಏರುತ್ತಾ ಹೋಗುವುದು."

ಶ್ರೀಮಂತರ ಮಹಾ ಶತ್ರುಗಳು ಜಡತೆ, ಮೈಗಳ್ಳತನ. ನಮ್ಮ ದೇಶದ ಅತಿ ಘೋರ ವ್ಯಾಧಿ ಕ್ರಿಯಾಶೂನ್ಯತೆ, ಅಲಸತೆ; ಅಲ್ಪಕ್ಕೂ ಲಲಾಟಲಿಪಿ, ಹಣೆಬರಹ ಎನ್ನುವ ನಿರ್ವೀರ್ಯ ಮನೋಧರ್ಮ. ತನ್ನ ಆಗುಹೋಗು ತನ್ನ ಅಧೀನವಲ್ಲ ಎಂಬ ಸೋಲು ಮನೋಭಾವದ ಕಲ್ಪನೆ. ತದ್ವಿರುದ್ಧ ಅಯ್ಯನವರ ದಿನಚರಿ. ಬೆಳಗಿನಿಂದ ರಾತ್ರಿಯವರೆಗೆ, ಕ್ರಮವರಿತು ಗಡಿಯಾರದ ಮುಳ್ಳಿನಂತೆ ಅವಿಶ್ರಾಂತ ದುಡಿಮೆ. ದುಡಿಯುವುದರಲ್ಲಿ ಬೇಸರ ಅರಿಯರು. ದುಡಿದು ಕೆಟ್ಟವರಿಲ್ಲ. ದುಡಿಯದೆ ಕೆಟ್ಟವರುಂಟು. ದುಡಿಯದೆ ತುಕ್ಕುಹಿಡಿದು ಸಾಯುವುದಕ್ಕಿಂತ, ದೇಹ ದಂಡಿಸಿ, ದಣಿಸಿ, ತೇಯಿಸಿ ಸವೆಸುವುದು ಲೇಸು. ಇದು ಅವರ ಜೀವನ ಧರ್ಮ. ಗಂಧದ ಕೊರಡಿನಂತೆ ದೇಹ ತೇದು ಸುಗಂಧ ಬೀರಿ ಅಳಿಯುವುದು ಉತ್ತಮ.

ಶ್ರೀಯುತರಿಗೆ ದುಡಿಮೆಯಲ್ಲೇ ಸಂತೋಷ. ಅದರಲ್ಲೇ ಕಾಣುವರು ತೃಪ್ತಿ. ದುಡಿದು ದಣಿವಾಯಿತು, ಪಡೆಯೋಣ ಸ್ವಲ್ಪ ವಿಶ್ರಾಂತಿ. ಆಡೋಣ ಆಟ. ಈ ಮನೋಭಾವ ಅವರಲ್ಲಿ ಕಾಣಸಿಗದು. ಒಂದು ಕೆಲಸದಿಂದ ಮತ್ತೊಂದಕ್ಕೆ ಗಮಿಸುವುದೇ ವಿಶ್ರಾಂತಿ. ಇದು ಮಹಾತ್ಮಾ ಗಾಂಧಿಯವರ ವಿಶ್ರಾಂತಿ ಸೂತ್ರ. ಪ್ರತ್ಯೇಕ ಮನರಂಜನೆ ಉಭಯತ್ರರಿಗೂ ಅನವಶ್ಯಕ. 'ನಿಮ್ಮ ಅಂತ್ಯಕಾಲದ ಬಯಕೆ ಏನು' ಎಂದು ವಿಶ್ವೇಶ್ವರಯ್ಯನವರನ್ನು ಪ್ರಶ್ನಿಸಿದಾಗ, "ಉಸಿರು ನಿಲ್ಲುವ ಕ್ಷಣದಲ್ಲಿಯೂ ದುಡಿಯುತ್ತಿರಬೇಕು. ಉಳಿದೆಲ್ಲ ಆಸೆಗಳಿಗಿಂತ, ಹೆಚ್ಚಿನ ಆಸೆ, ನನ್ನ ಕಟ್ಟಕಡೆಯ ಬಯಕೆ ಇದು" ಎಂದಿರುತ್ತಾರೆ. ನೋಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ ಸರ್ ಸಿ. ವಿ. ರಾಮನ್ ಅವರ ಬಯಕೆಯೂ ಇದೇ ಆಗಿತ್ತು. ಔಷಧಿ ಸೇವಿಸುತ್ತ, ಹಾಸಿಗೆ ಹಿಡಿದು ಬದುಕುವುದು ಅವರಿಗೆ ಬೇಡವಾಗಿತ್ತು. ದುಡಿಯಲು ಸಾಧ್ಯವಾಗದ ಬದುಕು ಬೇಡವೆಂದು ಔಷಧಿ ತೆಗೆದುಕೊಳ್ಳಲು ರಾಮನ್ ನಿರಾಕರಿಸಿದರು. ಕೇವಲ ಜಲಪಾನ ಮಾಡುತ್ತ ಕಡೆಯ ಉಸಿರೆಳೆದರು.

# 8. ವಿದ್ಯೆಯ ವಿತರಣೆ

ಪಾಶ್ಚಾತ್ಯ ರಾಷ್ಟ್ರಗಳಿಗೆ ಹಲವು ಬಾರಿ ಹೋಗಿದ್ದ ವಿಶ್ವೇಶ್ವರಯ್ಯನವರು ಆ ದೇಶಗಳ ಪ್ರಗತಿಯ ಕಾರಣ ಗಾಢವಾಗಿ ಅಭ್ಯಸಿಸಿ ವಿಶ್ಲೇಷಿಸಿ ಅರಿತಿದ್ದರು. ವಿದ್ಯೆ ಸಕಲ ಸಮಸ್ಯೆಗಳ ಸಂಜೀವಿನಿ. ಸರ್ವಾರ್ಥ ಸಾಧನ. ಅಲ್ಲಿ ಅವಿದ್ಯಾವಂತರು ಅಪರೂಪ. ನಮ್ಮಲ್ಲಿ ವಿದ್ಯಾವಂತರೆನಿಸಿಕೊಳ್ಳುವವರ ಸಂಖ್ಯೆ ಅಪರೂಪ. ದಿವಾನರಾಗಿ 1913ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಅವರು ಮಾಡಿದ ಭಾಷಣದಂತೆ ನಮ್ಮಲ್ಲಿ ಹದಿನಾರು ಜನರಲ್ಲಿ ಒಬ್ಬನು ಮಾತ್ರ ಓದು ಬರಹ ಬಲ್ಲವನು ಎನಿಸಿಕೊಳ್ಳುತ್ತಾನೆ. ವಿದ್ಯೆ ವ್ಯಾಪಕವಾಗಿ ಬೆಳೆಯಲು ಶಿಕ್ಷಣಕ್ಕೆ ಅವರು ಪ್ರಮುಖ ಸ್ಥಾನ ಕೊಟ್ಟರು. ಜಪಾನಿನ ಪ್ರವಾಸದಿಂದ ಶಿಕ್ಷಣವನ್ನು ಉಪೇಕ್ಷಿಸಿರುವುದೇ ನಮ್ಮ ಎಲ್ಲ ವ್ಯಾಧಿಗಳಿಗೂ ಮೂಲ ಕಾರಣವೆಂದು ಅವರ ಅರಿವು ಮತ್ತಷ್ಟು ದೃಢವಾಯಿತು. ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಇತರ ಗುಣಗಳನ್ನು ಪ್ರೋತ್ಸಾಹಿಸಲು ಜಪಾನಿನ ವಿವಿಧ ಶಾಲೆಗಳಲ್ಲಿ ಸೈನಿಕ ಶಿಕ್ಷಣ ಕೊಡಲಾಗುತ್ತಿತ್ತು. ಮಕ್ಕಳ ಪಾಲನೆ ಪೋಷಣೆ ಸರ್ಕಾರದ ಹೊಣೆಯಾಗಿತ್ತು. ರಾಜಭಕ್ತಿ, ದೇಶಭಕ್ತಿ, ನೈತಿಕ ಮತ್ತು ಮಾನವೀಯ ಗುಣಗಳಿಗೆ ವಿಶೇಷ ಗಮನ ಹರಿಸಲಾಗುತ್ತಿತ್ತು. ಜಪಾನ್ ದೇಶದ ವಿದ್ಯಾರ್ಥಿಗಳಲ್ಲಿ, ನಮ್ಮ ದೇಶದಂತೆಯೇ ಬಡವರ ಬಳಗವೇ ಅಧಿಕ. ಪುಸ್ತಕಗಳನ್ನು ಕೊಳ್ಳುವ ಶಕ್ತಿಯೂ ಇಲ್ಲ. ಆದಕಾರಣ ಪುಸ್ತಕಗಳನ್ನು ಕೊಳ್ಳುವಂತೆ ವಿದ್ಯಾರ್ಥಿಗಳನ್ನು ಪೀಡಿಸುತ್ತಿರಲಿಲ್ಲ. ಪ್ರತಿಯಾಗಿ ಟಿಪ್ಪಣಿ ಹೇಳಿ ಬರೆಯಿಸುತ್ತಿದ್ದರು. ವಿಶ್ವವಿದ್ಯಾಲಯಗಳಲ್ಲಿ ಕ್ರಿಯಾತ್ಮಕ ಶಿಕ್ಷಣಕ್ಕೆ ವಿಶೇಷ ಗಮನ ಹರಿಸಲಾಗುತ್ತಿತ್ತು. ವಿಶ್ವವಿದ್ಯಾಲಯದ ಪದವೀಧರರಿಗೆ ಬೇಡಿಕೆ ಬಹಳವಾಗಿತ್ತು. ಉದ್ಯೋಗಕ್ಕಾಗಿ ಪರದಾಡುವ ಸ್ಥಿತಿ ಅಲ್ಲಿ ಇರಲಿಲ್ಲ. ಇದಕ್ಕೆ ವಿರುದ್ಧವಾಗಿ ಸರ್ಕಾರಿ ಹಾಗೂ ಖಾಸಗಿ ಕ್ಷೇತ್ರಗಳಲ್ಲಿ ಉದ್ಯೋಗ ಅವರಿಗಾಗಿ ಕಾದಿರುತ್ತಿತ್ತು. ಜಪಾನಿನ ಪ್ರಾಧ್ಯಾಪಕರ ಜೀವನ ಸರಳ. ದೇಶಭಕ್ತಿಯಿಂದ ಪ್ರೇರಿತರಾಗಿ ಅಧಿಕ ವೇತನ ಮತ್ತು ಉನ್ನತ ಸ್ಥಾನಗಳನ್ನು ಸ್ವಪ್ರೇರಣೆಯಿಂದ ಪ್ರಾಧ್ಯಾಪಕರು ತ್ಯಜಿಸುತ್ತಿದ್ದರು. ನಮ್ಮ ದೇಶದಲ್ಲೂ ಈ ಬಗೆಯ ಸ್ಥಿತಿಗತಿ ಸ್ಥಾಪಿತವಾಗಬೇಕು. ನಮ್ಮ ದೇಶದ ವಿಶ್ವವಿದ್ಯಾಲಯಗಳಲ್ಲಿ ಮಿಲಿಟರಿ ಶಿಕ್ಷಣ ಕಡ್ಡಾಯವಾಗಬೇಕು. ಇವು ಶಿಕ್ಷಣ ಕ್ಷೇತ್ರದಲ್ಲಿ ಅಯ್ಯನವರ ಹೆಬ್ಬಯಕೆ.

ವ್ಯವಸಾಯ, ಕೈಗಾರಿಕೆ, ಕಮ್ಮಾರ, ಚಮ್ಮಾರ ಮೊದಲಾದ ದೈಹಿಕ ಶ್ರಮದ ಜೀವನೋಪಾಯದಲ್ಲಿ ತೊಡಗಿರುವವರಿಗೆ ವಿದ್ಯೆ ಅನವಶ್ಯಕ. ಅನುಪಯುಕ್ತ. ಈ ಭಾವನೆ ನಮ್ಮ ದೇಶದಲ್ಲಿ ಮಾತ್ರವಲ್ಲದೆ ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಇತ್ತು.

ಈಚೆಗೆ ಈ ದೃಷ್ಟಿಯಲ್ಲಿ ಬದಲಾವಣೆ ಆಗಿದೆ. ಕಲಿಕೆ ಅವನಿಗೆ ಸಹಾಯಕವಾಗುತ್ತವೆ. ಗಳಿಕೆ ಹೆಚ್ಚುತ್ತದೆ. ವಿಜ್ಞಾನದ ಸಂಶೋಧನೆಗಳನ್ನು ಬಳಸಿಕೊಳ್ಳಲು ಉಪಯುಕ್ತವಾಗುತ್ತದೆ. ಈ ದೃಷ್ಟಿಯಿಂದ ಕೆಲವು ನಿರ್ದೇಶಿತ ಪ್ರದೇಶಗಳಲ್ಲಿ ಪ್ರಾಯೋಗಿಕವಾಗಿ ಪ್ರಾಥಮಿಕ ಶಿಕ್ಷಣ ಜಾರಿಗೆ ತರಲಾಯಿತು. ಇದಕ್ಕಾಗಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಶಾಸನ ಬಂತು. ಜೂನ್ 1918ರಲ್ಲಿ ಕಡ್ಡಾಯ ಶಿಕ್ಷಣ ಶಾಸನ 68 ಕೇಂದ್ರಗಳಲ್ಲಿ ಆಚರಣೆಯಲ್ಲಿತ್ತು. ಅಲ್ಲದೆ 170 ಕೇಂದ್ರಗಳಿಗೆ ವಿಸ್ತರಿಸಲು ಮುಂಗಡ ಕ್ರಮ ಕೈಗೊಳ್ಳಲಾಗಿತ್ತು. ಶಿಕ್ಷಣಾರ್ಥಿಗಳ ಸಂಖ್ಯೆ ಬೆಳೆದಂತೆ ಶಿಕ್ಷಕರ ಹಾಗೂ ಶಾಲಾ ಕಟ್ಟಡಗಳ ಅಗತ್ಯವೂ ಬೆಳೆಯಿತು. ಶಾಲಾ ಕಟ್ಟಡಗಳಿಗಾಗಿ ಮತ್ತು ಶಿಕ್ಷಣದ ವೆಚ್ಚಕ್ಕಾಗಿ ಧನಸಹಾಯ ನೀಡುವ ಪದ್ಧತಿ ಜಾರಿಗೆ ಬಂತು. ಗ್ರಾಮಾಂತರ ಪ್ರದೇಶಗಳಲ್ಲಿ ಉತ್ತಮ ಪ್ರತಿಕ್ರಿಯೆ ಕಂಡುಬಂತು.

ಅಸ್ಪೃಶ್ಯರ ಮತ್ತು ಹಿಂದುಳಿದವರ ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿವೇತನ ನೀಡುವ ವ್ಯವಸ್ಥೆ ವಿಶ್ವೇಶ್ವರಯ್ಯನವರು ಮೊಟ್ಟಮೊದಲ ಬಾರಿಗೆ ಮಾಡಿದರು. ಶಾಲೆಗೆ ಹೋಗುತ್ತಿದ್ದ ಇವರ ಪ್ರಮಾಣ ಅತಿ ಕಡಮೆ. ಶಾಲೆಗೆ ಹೋಗುವ ಈ ವರ್ಗದವರ ಸಂಖ್ಯೆ ಐದು ವರ್ಷಗಳಲ್ಲಿ ದ್ವಿಗುಣಿತಗೊಳಿಸುವುದು ಇವರ ಉದ್ದೇಶವಾಗಿತ್ತು. ಸ್ವತಂತ್ರ ಭಾರತ ಸಂವಿಧಾನ ನಿರೂಪಿಸಿರುವ ಸಮಾನ ಅವಕಾಶ ತಮ್ಮ ಕಾಲದಲ್ಲೇ ವಿಶ್ವೇಶ್ವರಯ್ಯನವರು ಕಲ್ಪಿಸಿ ಕೊಟ್ಟಿದ್ದರು.

ಹೆಣ್ಣು ಮಕ್ಕಳು ಶಾಲೆಗೆ ಹೋಗುವುದನ್ನು ಕಂಡರೆ ಜನ ಹುಬ್ಬು ಹಾರಿಸುತ್ತಿದ್ದರು, ಆಚ್ಚರಿಯಿಂದ. ಹೆಣ್ಣುಮಕ್ಕಳು ಶಾಲೆಗೆ ಹೋಗುವುದನ್ನು ಸಮಾಜ ಒಪ್ಪುತ್ತಿರಲಿಲ್ಲ. ಸ್ತ್ರೀಶಿಕ್ಷಣಕ್ಕೆ ವಿಶೇಷ ಗಮನ ಹರಿಯಿತು. ಐದು ವರ್ಷಗಳ ಅವಧಿಯಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಎರಡು ಪಟ್ಟು ಏರಿತು. 1917ರಲ್ಲಿ ಮೈಸೂರಿನ ಮಹಿಳೆಯರ ಮಹಾರಾಣಿ ಕಾಲೇಜನ್ನು ಪ್ರಥಮ ಶ್ರೇಣಿಗೆ ಏರಿಸಲಾಯಿತು. ಇಲ್ಲಿ ಬಿ.ಎ. ಡಿಗ್ರಿ ಶಿಕ್ಷಣಕ್ಕೆ ವ್ಯವಸ್ಥೆ ಮಾಡಲಾಯಿತು. ಇದೇ ವರ್ಷದಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಹಾಸ್ಟೆಲ್, ವಿದ್ಯಾರ್ಥಿನಿಲಯ ಅಸ್ತಿತ್ವಕ್ಕೆ ಬಂತು. ನಗರ ವಾಸಿಗಳಲ್ಲಿ ವಿದ್ಯಾವಂತರ ಸಂಖ್ಯೆ ಅಧಿಕ. ಅಧಿಕವೆನಿಸಿಕೊಳ್ಳುವ ಇದರಲ್ಲಿ ಕೇವಲ ನೂರರಲ್ಲಿ ಹದಿನೈದು ಮಾತ್ರ ಸ್ತ್ರೀಯರು. ಅಲ್ಪಸ್ವಲ್ಪ ಓದುಬರಹ ಬಲ್ಲವರು.

ಅದುವರೆಗೂ ತಾಂತ್ರಿಕ ಶಿಕ್ಷಣ, ಔದ್ಯೋಗಿಕ ಶಿಕ್ಷಣ, ಸಾಮಾಜಿಕ ಶಿಕ್ಷಣ, ವ್ಯಾವಹಾರಿಕ ಶಿಕ್ಷಣ ಇವುಗಳಿಗೆ ಸಾಕಷ್ಟು ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ಯಂತ್ರತಂತ್ರ ಕಲಿಸುವುದು ತಾಂತ್ರಿಕ ಶಿಕ್ಷಣದ ಉದ್ದೇಶ. ವ್ಯಾಪಾರ, ವಾಣಿಜ್ಯ, ಲೆಕ್ಕ ಇಡುವುದು, ಪತ್ರ ಬರೆಯುವುದು, ಶೀಘ್ರಲಿಪಿ, ಬೆರಳಚ್ಚು ಇವು ಔದ್ಯೋಗಿಕ ಶಿಕ್ಷಣದ ಗುರಿ. ಸಮಾಜದಲ್ಲಿ ನಡೆದುಕೊಳ್ಳಬೇಕಾದ ರೀತಿನೀತಿ, ಪೌರ ಕರ್ತವ್ಯ, ರಾಷ್ಟ್ರದ ಏಳ್ಗೆಯಲ್ಲಿ ಪ್ರಜೆಯ ಪಾತ್ರ, ಇವೆಲ್ಲ ಸಾಮಾಜಿಕ ಶಿಕ್ಷಣಕ್ಕೆ ಸೇರಿದ ವಿಭಾಗಗಳು. ದಿನನಿತ್ಯದ

ವ್ಯವಹಾರದಲ್ಲಿ ನಡೆದುಕೊಳ್ಳಬೇಕಾದ ಕ್ರಮ. ವ್ಯಾವಹಾರಿಕ ನೀತಿನಿಯಮಗಳಿಗೆ ಸಂಬಂಧಿಸಿದುವು.

ನಮ್ಮಲ್ಲಿ ನೂರರಲ್ಲಿ ಎಪ್ಪತ್ತೈದು ಜನ ಬೇಸಾಯದಿಂದ ಬದುಕುತ್ತಾರೆ. ಆದರೂ ವ್ಯವಸಾಯದಲ್ಲಿ ತೊಡಗಿರುವವರಿಗೆ ವೈಜ್ಞಾನಿಕ ಶಿಕ್ಷಣದ ವ್ಯವಸ್ಥೆ ಇರಲಿಲ್ಲ. ಶಾಸ್ತ್ರೀಯ ವಿಧಾನ ಬಳಸಿ ಬೇಸಾಯ ಮಾಡುವುದು ಲಾಭದಾಯಕ. ವಿಶ್ವೇಶ್ವರಯ್ಯನವರು ಈ ಕೊರತೆ ನಿವಾರಿಸಲು ಸೂಕ್ತ ಕ್ರಮ ಕೈಗೊಂಡರು. 1913ರಲ್ಲಿ ಬೆಂಗಳೂರಿನ ಬಳಿಯ ಹೆಬ್ಬಾಳದಲ್ಲಿ ವ್ಯವಸಾಯ ಶಿಕ್ಷಣ ಶಾಲೆ ಸ್ಥಾಪಿಸಲ್ಪಟ್ಟಿತು. ಓದಿನ ಜೊತೆಗೆ ಕ್ರಿಯಾತ್ಮಕ ಕೆಲಸವೂ ನಡೆಯಬೇಕು. ನೇಗಿಲು, ಗುಳ, ಗುದ್ದಲಿ ಮೊದಲಾದ ವ್ಯಾವಸಾಯಿಕ ಉಪಕರಣಗಳನ್ನು ಬಳಸಿ, ನೆಲ ಹಸನು ಮಾಡಿ, ಬೀಜ ಬಿತ್ತಿ ಆಧುನಿಕ ವೈಜ್ಞಾನಿಕ ಕ್ರಮ ಅನುಸರಿಸಿ ಬೇಸಾಯ ಮಾಡುವುದನ್ನು ರೈತಮಕ್ಕಳು ಕಲಿಯಬೇಕು. ಪ್ರಯೋಗ ನಡೆಸಲು ತರಿ, ಖುಷ್ಕಿ ಪೈರು ಬೆಳೆಯಲು ವಿಸ್ತಾರವಾದ ಜಮೀನನ್ನು ಶಾಲೆಗೆ ಕೊಡುಗೆಯಾಗಿ ಕೊಡಲಾಯಿತು. ಸಣ್ಣ ಹಿಡುವಳಿದಾರರಿಗೆ ಅಲ್ಪಾವಧಿಯ ಶಿಕ್ಷಣ ಕನ್ನಡದಲ್ಲಿ ಕೊಡುವ ವ್ಯವಸ್ಥೆ ಮಾಡಲಾಯಿತು. ಪ್ರಾಯೋಗಿಕ ಬೇಸಾಯ ಕ್ಷೇತ್ರಗಳು ಸ್ಥಾಪಿಸಲ್ಪಟ್ಟವು. ವೈಜ್ಞಾನಿಕ ರೀತಿಯಲ್ಲಿ ಬೆಳೆ ಬೆಳೆಸಿ, ಅದರಿಂದ ಆಗುವ ಪ್ರಯೋಜನ ಕಣ್ಣಾರೆ ನೋಡಿ ಅರಿಯಲು ರೈತರಿಗಾಗಿ ಸೂಕ್ತ ವ್ಯವಸ್ಥೆ ಮಾಡಲಾಯಿತು. ಸಂಸ್ಥಾನದ ನಾನಾ ಭಾಗಗಳಲ್ಲಿ ವ್ಯವಸಾಯದ ಪ್ರಾಯೋಗಿಕ ಕ್ಷೇತ್ರಗಳನ್ನು ಸ್ಥಾಪಿಸುವುದು ಅವರ ಗುರಿ.

ಎಲ್ಲ ಜಿಲ್ಲಾ ಕೇಂದ್ರಗಳಲ್ಲೂ ಔದ್ಯೋಗಿಕ ಶಿಕ್ಷಣಶಾಲೆಗಳು ಸ್ಥಾಪಿತವಾದುವು. ವ್ಯಾಪಾರದಲ್ಲಿ ತೊಡಗಿರುವವರ ಅನುಕೂಲಕ್ಕಾಗಿ ಸಾಯಂಕಾಲದ ಶಾಲೆಗಳು ತಲೆ ಎತ್ತಿದುವು. ಲೆಕ್ಕ ಇಡುವ ವಿಧಾನ, ಬ್ಯಾಂಕು ವ್ಯವಹಾರ ಪದ್ಧತಿ, ಭೌಗೋಳಿಕ ವಿಷಯಗಳನ್ನು ಈ ಶಾಲೆಗಳಲ್ಲಿ ಕಲಿಸಲಾಗುತ್ತಿತ್ತು. ಪ್ರೌಢಶಾಲೆಗಳಲ್ಲಿ ವಾಣಿಜ್ಯ ಶಾಸ್ತ್ರ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡಲಾಯಿತು. ಪಾಶ್ಚಾತ್ಯ ದೇಶಗಳಿಗೆ ಹೋಗಿ ಆಧುನಿಕ ವಿಧಾನದ ಶಿಕ್ಷಣ ಪಡೆಯಲು ಉದಾರ ವಿದ್ಯಾರ್ಥಿವೇತನ ಕೊಡಲಾಗುತ್ತಿತ್ತು. ವರ್ತಕರ ಪ್ರವಾಸಕ್ಕೂ ವ್ಯವಸ್ಥೆ ಮಾಡಲಾಗಿತ್ತು.

ಕಾಗದ, ಮುದ್ರಣ, ಪುಸ್ತಕ ಇವು ಬಳಕೆಗೆ ಬರುವ ಮೊದಲು ಬಾಯಿಪಾಠ ಮಾಡಿಸುವ ಕ್ರಮ ಅನೂಚಾನದಿಂದ ಭಾರತದಲ್ಲಿ ಅನುಷ್ಠಾನದಲ್ಲಿರುವ ಪದ್ಧತಿ. ಆಧುನಿಕ ಕಾಲದಲ್ಲಿ ವಿದ್ಯೆ ಅಪಾರವಾಗಿ ಬೆಳೆದಿರುವಾಗಲೂ, ಅಂತ್ಯವಿಲ್ಲದಂತೆ ವೃದ್ಧಿಸುತ್ತಿರುವಾಗಲೂ ಹಳೆಯ ಗಿಳಿಯಪಾಠದ ಪದ್ಧತಿ ಅನುಸರಿಸುವುದು ವಿಹಿತವಲ್ಲ. ವಿದ್ಯಾರ್ಥಿಗಳಲ್ಲಿ ಚಿಂತನ, ಚೇತನ, ಸೃಜನಾತ್ಮಕ ಶಕ್ತಿಯ ಬೆಳವಣಿಗೆ ಬೆಳಸುವುದು ಶಿಕ್ಷಣದ ಗುರಿಯಾಗಿರಬೇಕು. ನೂತನ ಶಿಕ್ಷಣ ಪದ್ಧತಿ ರೂಪಿಸಲು ವಿಶೇಷ ಸಮಿತಿ ನೇಮಿಸಿದರು. ಐವತ್ತನಾಲ್ಕು ಯೋಜನೆಗಳು ಈ ಸಮಿತಿಯ ಗಮನಕ್ಕೆ

ಬಂದುವು. ಸುಲಭ ಸರಳ ವೈಜ್ಞಾನಿಕ ಮತ್ತು ತಾಂತ್ರಿಕ ಶಿಕ್ಷಣದ ಪುಸ್ತಕಗಳು ಸಿದ್ಧವಾದುವು. ಮಹಿಳೆಯರಿಗೆ ಪೌರನೀತಿ, ಸಾಮಾಜಿಕ ವಿಷಯಗಳನ್ನು ತಿಳಿಸಲು ಹೊಸ ವಿಧಾನಗಳು ರೂಪಿತವಾದುವು. ಗೃಹಕೈಗಾರಿಕೆ, ಗೃಹಶಿಕ್ಷಣ ಇವು ಆಚರಣೆಗೆ ಬಂದುವು.

ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಸಾರ್ವಜನಿಕ ಪುಸ್ತಕಗಳು ಸ್ಥಾಪಿತವಾದುವು. ನಗರದ ದೂರವಿಭಾಗಗಳಿಗೂ ಗ್ರಾಮಾಂತರ ಪ್ರದೇಶದ ಓದುಗರಿಗೂ ಪುಸ್ತಕಗಳು ದೊರೆಯುವಂತೆ ಗಾಡಿಯ ಮೂಲಕ ಪುಸ್ತಕಗಳನ್ನು ವಿತರಣೆ ಮಾಡುವ ವ್ಯವಸ್ಥೆ ಮಾಡಲಾಯಿತು.

ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ಇದು ವಿಶ್ವೇಶ್ವರಯ್ಯನವರ ದೂರ ದೃಷ್ಟಿಯ ದ್ಯೋತಕವಾಗಿದೆ. ಸರಳ ವಿಜ್ಞಾನ ಬೋಧಕ ಪುಸ್ತಕಗಳನ್ನು ರಚಿಸುವ ಹೊಣೆ ಪರಿಷತ್ತಿಗೆ ವಹಿಸಲಾಯಿತು. ಕನ್ನಡ ನುಡಿಯ, ಕರ್ನಾಟಕ ಸಂಸ್ಕೃತಿಯ ಬೆಳವಣಿಗೆ ಪರಿಷತ್ತಿನ ಹೊಣೆ ಆಯಿತು.

ಮೈಸೂರಿನ ಉನ್ನತ ಶಿಕ್ಷಣದ ಕಾಲೇಜು ವ್ಯಾಸಂಗ ಮದರಾಸು ವಿಶ್ವವಿದ್ಯಾಲಯದ ಅಧೀನದಲ್ಲಿತ್ತು. ಬೆಂಗಳೂರಿನ ಸೆಂಟ್ರಲ್ ಕಾಲೇಜು ವಿಜ್ಞಾನ, ಗಣಿತ ಈ ವಿಭಾಗಗಳಿಗೆ ಮೀಸಲು. ಮೈಸೂರಿನ ಮಹಾರಾಜ ಮತ್ತು ಮಹಾರಾಣಿ ಕಾಲೇಜು ಚರಿತ್ರೆ, ತರ್ಕಶಾಸ್ತ್ರ, ದರ್ಶನಶಾಸ್ತ್ರ, ಅರ್ಥಶಾಸ್ತ್ರ, ರಾಜಕೀಯಶಾಸ್ತ್ರ ಇವುಗಳಿಗೆ ಮೀಸಲು. ಈ ಕಾಲೇಜುಗಳು ಮತ್ತೊಂದು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿದ್ದುದು ಸ್ವಾತಂತ್ರ್ಯಕ್ಕೆ ಶಿಕ್ಷಣದ ಪ್ರಗತಿಗೆ ಆತಂಕವಾಗಿತ್ತು. ತನ್ನ ಸಂಸ್ಕೃತಿಗೆ, ತನ್ನ ನಾಡಿನ ಬೆಳವಣಿಗೆಗೆ ಅಗತ್ಯವಾದ ಶಿಕ್ಷಣ ಪದ್ಧತಿ ರೂಪಿಸಿಕೊಳ್ಳುವ ಸ್ವಾತಂತ್ರ್ಯ ಮೈಸೂರು ಸಂಸ್ಥಾನಕ್ಕೆ ಅಗತ್ಯ. ವಿಶ್ವವಿದ್ಯಾಲಯ ನಮ್ಮ ಸಂಸ್ಕೃತಿಯ ಕೇಂದ್ರವಾಗಬೇಕು. ನಾಡಿನ ಮೂಲೆ ಮೂಲೆಯಲ್ಲೂ ಹರಡಿರುವ ಅಜ್ಞಾನದ ಅಂಧಕಾರವನ್ನು ಜ್ಞಾನಜ್ಯೋತಿಯಿಂದ ಬೆಳಗಬೇಕು. ನಮ್ಮ ಜನತೆಯ ಕ್ರಿಯಾತ್ಮಕ ಶಕ್ತಿ ಬೆಳಸಿ ಪೋಷಿಸುವುದಕ್ಕೆ ವಿಶ್ವವಿದ್ಯಾಲಯ ಸಹಾಯಕವಾಗಿರಬೇಕು. ವರ್ತಕರು, ಉದ್ಯಮಿಗಳು, ಶಾಸ್ತ್ರನಿಪುಣರು, ತಂತ್ರಜ್ಞರು, ವಿಜ್ಞಾನಿಗಳು, ವಕೀಲರು, ಎಂಜಿನಿಯರುಗಳು, ರಾಷ್ಟ್ರದ ಹಿತಚಿಂತಕರು ಇವರನ್ನು ರೂಪಿಸುವುದು ಮೈಸೂರು ವಿಶ್ವವಿದ್ಯಾಲಯದ ಉದ್ದೇಶಿತ ಗುರಿಯಾಗಿರಬೇಕು. ಹತ್ತು ಲಕ್ಷ ಪ್ರಜಾಸಂಖ್ಯೆಗಿಂತ ಕಡಮೆಯಿರುವ ಕೆನಡ, ಆಸ್ಟ್ರೇಲಿಯ ತಮ್ಮದೇ ಆದ ಪ್ರತ್ಯೇಕ ವಿಶ್ವವಿದ್ಯಾಲಯಗಳನ್ನು ಪಡೆದಿವೆ. ಹೀಗಿರುವಲ್ಲಿ ಅರುವತ್ತು ಲಕ್ಷ ಪ್ರಜಾಬಾಹುಳ್ಯವುಳ್ಳ ಮೈಸೂರಿಗೆ ಪ್ರತ್ಯೇಕ ವಿಶ್ವವಿದ್ಯಾಲಯ ಬೇಡವೇ?

ಮೈಸೂರು ಮಹಾರಾಜ ಕಾಲೇಜಿನ ಪ್ರಮುಖ ಪ್ರಾಧ್ಯಾಪಕ ಥಾಮಸ್ ಡೆನ್‌ಹ್ಯಾಂ ಮತ್ತು ಪ್ರಾಧ್ಯಾಪಕ ಸಿ. ಆರ್. ರೆಡ್ಡಿ ಇವರನ್ನು ಪಾಶ್ಚಾತ್ಯ ರಾಷ್ಟ್ರಗಳ ವಿಶ್ವವಿದ್ಯಾಲಯ

ಗಳ ಧ್ಯೇಯ ಧೋರಣೆ, ಶಿಕ್ಷಣಕ್ರಮ, ಆಡಳಿತ ವಿಧಾನ ಮೊದಲಾಗಿ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಅಭ್ಯಸಿಸಿ ಮೈಸೂರಿಗೆ ಹೊಂದಾಣಿಕೆಯಾಗುವ ವಿಶ್ವವಿದ್ಯಾಲಯದ ರೂಪುರೇಷೆ, ಅಂಗರಚನೆ ರಚಿಸಲು ಕಳುಹಿಸಿಕೊಟ್ಟರು. ಅವರು ಹಿಂತಿರುಗಿ ಬಂದು ತಮಗೆ ವಹಿಸಿದ್ದ ಕಾರ್ಯ ನಿರ್ವಹಿಸಿದರು. ವೈಸರಾಯ ಲಾರ್ಡ್ ಹಾರ್ಡಿಂಜ್ ಅವರಿಗೆ ವಿಶ್ವವಿದ್ಯಾಲಯ ಸ್ಥಾಪಿಸಲು ಅನುಮತಿ ಕೊಡಬೇಕೆಂದು ಮನವಿ ಸಲ್ಲಿಸಲಾಯಿತು. ಪ್ರತ್ಯೇಕ ವಿಶ್ವವಿದ್ಯಾಲಯದ ಸ್ಥಾಪನೆಗೆ ಹಲವಾರು ಅಡ್ಡಿ ಆತಂಕಗಳು ಬಂದುವು. ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್ ಟೇಟ್ ಅವರು ಮೈಸೂರು ವಿಶ್ವವಿದ್ಯಾಲಯದ ಅಧೀನ ಕೆಲಸ ಮಾಡಲು ಒಪ್ಪಲಿಲ್ಲ. ಹಿಡಿದ ಕೆಲಸ ಬಿಡದೆ ಸಾಧಿಸುವ ವಿಶ್ವೇಶ್ವರಯ್ಯನವರ ವಿಶ್ವಪ್ರಯತ್ನದಿಂದ ಮೈಸೂರು ವಿಶ್ವವಿದ್ಯಾಲಯ ಜುಲೈ 22, 1916ರಂದು ಜನ್ಮತಾಳಿತು. ದೇಶೀಯ ಸಂಸ್ಥಾನಗಳಲ್ಲಿ ಸ್ವತಂತ್ರ ವಿಶ್ವವಿದ್ಯಾಲಯ ಸ್ಥಾಪಿಸಿದ ಕೀರ್ತಿ ಮೈಸೂರು ಗಳಿಸಿತು.

ವಿಶ್ವೇಶ್ವರಯ್ಯನವರ ಕೀರ್ತಿಕಿರೀಟಕ್ಕೆ ವಜ್ರಾಭರಣವಾದ ಭದ್ರಾವತಿ ಕಬ್ಬಿಣ ಕಾರ್ಖಾನೆಗೆ ಸಂಕಟ ಪರಿಸ್ಥಿತಿಯಲ್ಲಿದ್ದಾಗ, ಸುಸ್ಥಿತಿಗೆ ತರುವ ಹೊಣೆಹೊತ್ತು ಅದರ ಕಾರ್ಯನಿರ್ವಾಹಕ ಮಂಡಲಿಯ ಅಧ್ಯಕ್ಷರಾಗಿ ಆರು ವರ್ಷ ಕಾಲ ಶ್ರಮಿಸಿದರು. ಸಂತೃಪ್ತರಾದ ಮಹಾರಾಜರು ಅಯ್ಯನವರಿಗೆ ಸುಮಾರು ಎರಡು ವರ್ಷಗಳ ಗೌರವ ಸಂಭಾವನೆ ನೀಡಿದರು. ನಿರಾಕರಿಸಲಾರದೆ ಅದನ್ನು ಸ್ವೀಕರಿಸಿ ಬೆಂಗಳೂರಿನಲ್ಲಿ ಜಯಚಾಮರಾಜೇಂದ್ರ ಒಡೆಯರ ಹೆಸರಿನಲ್ಲಿ ತಾಂತ್ರಿಕ ಶಿಕ್ಷಣ ಶಾಲೆ ಸ್ಥಾಪಿತವಾಗಲು ಕೊಡುಗೆಯಾಗಿ ಕೊಟ್ಟರು. ಉದಾರ ದಾನ ನೀಡಿದ ಅವರ ಹೆಸರನ್ನೇ ಈ ತಾಂತ್ರಿಕ ಶಾಲೆಗೆ ಇಡಲು ಅವರು ಒಪ್ಪಲಿಲ್ಲ. ಮಹಾರಾಜರ ಹೆಸರನ್ನೇ ಇರಿಸಿದರು. ಈ ತಾಂತ್ರಿಕ ಶಿಕ್ಷಣ ಶಾಲೆ ಭಾರತದ ಇತರ ಪ್ರದೇಶಗಳಿಗೆ ಆದರ್ಶಪ್ರಾಯವಾಗಿ ಕೀರ್ತಿ ಗಳಿಸಿರುತ್ತದೆ.

# 9. ಕೃಷ್ಣರಾಜ ಸಾಗರ

ಮೈಸೂರಿನಿಂದ 12 ಮೈಲಿ, ಶ್ರೀರಂಗಪಟ್ಟಣದಿಂದ 9 ಮೈಲಿಗಳ ಮೇಲಿರುವ ಕನ್ನಂಬಾಡಿ ಕಟ್ಟೆ ಎಂಬ ಜನಬಳಕೆಯ ಹೆಸರಿನ ಕೃಷ್ಣರಾಜಸಾಗರ ಮತ್ತು ಅದರ ಕೆಳಗಿನ ಸುಮನೋಹರ ಬೃಂದಾವನ ಜನರ ಆಕರ್ಷಣೆಗೆ ಒಳಗಾಗಿರುವ ಸುಂದರ ಸ್ಥಳಗಳು. ಇದರ ಅವಿಸ್ಮರಣೀಯ ಯೋಜಕರು ಮತ್ತು ನಿರ್ಮಾಪಕರು ಸರ್ ಎಂ. ವಿಶ್ವೇಶ್ವರಯ್ಯ.

ಎರಡು ಬೆಟ್ಟಗಳ ನಡುವಿನ ಕಣಿವೆಯಲ್ಲಿ ಹರಿಯುವ ನೀರು ಜಲಾಶಯಗಳ ನಿರ್ಮಾಣಕ್ಕೆ ಯೋಗ್ಯವಾದ ಸ್ಥಳಗಳೆಂದು ಎಂಜಿನಿಯರುಗಳನ್ನು ಪ್ರಚೋದಿಸುತ್ತವೆ. ಟಿಪ್ಪು ಸುಲ್ತಾನನ ಕಾಲದಲ್ಲೇ ಇಲ್ಲಿ ಕಟ್ಟೆ ಕಟ್ಟಲು ಯೋಜಿಸಲಾಗಿತ್ತು. ಅಲ್ಲಿ ದೊರೆತಿರುವ ಪರ್ಷಿಯನ್ ಭಾಷೆಯ ಶಿಲಾಲಿಪಿಯಿಂದ ಇದು ವ್ಯಕ್ತವಾಗಿದೆ. ಆದರೆ ಇದನ್ನು ಕೈಗೂಡಿಸುವ ಸುಯೋಗ ವಿಶ್ವೇಶ್ವರಯ್ಯನವರಿಗೆ ಒದಗಿಬಂತು. ಆದರೆ ಈ ಮಹತ್ಕಾರ್ಯ ಅಷ್ಟು ಸುಲಭವಾಗಿ ಕೈಗೂಡಿ ಬರಲಿಲ್ಲ. ಭಗೀರಥ ಪ್ರಯತ್ನ ವನ್ನೇ ಮಾಡಬೇಕಾಯಿತು.

ಮುಖ್ಯ ಎಂಜಿನಿಯರಾಗಿದ್ದ ವಿಶ್ವೇಶ್ವರಯ್ಯನವರು ಕಟ್ಟೆಯ ವಿನ್ಯಾಸ, ಆಗಬಹು ದಾದ ವೆಚ್ಚ ಇವೆಲ್ಲ ಸಿದ್ಧಪಡಿಸಿ ಸರ್ಕಾರದ ಅಂಗೀಕಾರಕ್ಕಾಗಿ ಒಪ್ಪಿಸಿದರು. ಅಂದಾಜು ವೆಚ್ಚ 253 ಲಕ್ಷ ರೂಪಾಯಿ. ಮೈಸೂರು ಸರ್ಕಾರದ ಆಗಿನ ವಾರ್ಷಿಕ ವರಮಾನ 223 ಲಕ್ಷ. ಇದೇ ಯೋಜನೆಯ ಜೊತೆಗೆ ರೈಲು ರಸ್ತೆಯನ್ನು ವಿಸ್ತರಿಸುವ 94 ಲಕ್ಷ ರೂಪಾಯಿಗಳ ಯೋಜನೆಯನ್ನೂ ಅಯ್ಯನವರು ಒಪ್ಪಿಸಿದ್ದರು. ಸರ್ಕಾರದ ಆರ್ಥಿಕ ಇಲಾಖೆ ಎರಡನೇ ಯೋಜನೆಗೆ ತನ್ನ ಸಮ್ಮತಿ ನೀಡಿತು. ಆದರೆ ಅಪಾರ ವೆಚ್ಚದ ಕಾವೇರಿ ಯೋಜನೆಗೆ ವಿರೋಧ ವ್ಯಕ್ತಪಡಿಸಿತು. ಕನ್ನಂಬಾಡಿ ಕೇವಲ ವ್ಯವಸಾಯಕ್ಕೆ ಉಪಯುಕ್ತವಾದ ನೀರಾವರಿಯ ಯೋಜನೆ ಆಗಿರಲಿಲ್ಲ. ಕೋಲಾರದ ಚಿನ್ನದ ಗಣಿಗೆ ಅಗತ್ಯವಾದ ವಿದ್ಯುಚ್ಛಕ್ತಿ ಒದಗಿಸುವುದೂ ಅದರಲ್ಲಿ ಅಡಕವಾಗಿತ್ತು. ಶಿವನ ಸಮುದ್ರದಲ್ಲಿ ಉತ್ಪನ್ನವಾಗುತ್ತಿದ್ದ ವಿದ್ಯುತ್ತನ್ನು ಕೋಲಾರದ ಗಣಿಗೆ ಒದಗಿಸ ಲಾಗಿತ್ತು. ಇದು ಸಾಕಾಗುತ್ತಿರಲಿಲ್ಲ. ಕಾರಣ ಕಾವೇರಿ ನದಿಯ ನೀರಿನ ಏರಿಳಿತ. ಕನ್ನಂಬಾಡಿಯಲ್ಲಿ ಕಟ್ಟೆ ಕಟ್ಟಿ ನೀರು ಸಂಗ್ರಹಿಸುವುದರಿಂದ ಎಲ್ಲ ಋತುಗಳಲ್ಲೂ ಏಕಪ್ರಕಾರವಾಗಿ ವಿದ್ಯುಚ್ಛಕ್ತಿ ಉತ್ಪಾದನೆಗೆ ಸಹಾಯಕವಾಗಲು ಶಿವನಸಮುದ್ರಕ್ಕೆ ನೀರೊದಗಿಸಬಹುದು. ಇದು ಯೋಜನೆಯ ಒಂದು ಮುಖ್ಯ ಅಂಶ. ಎಂಭತ್ತುಸಾವಿರ

ಅಶ್ವಶಕ್ತಿಯ ವಿದ್ಯುತ್ ಉತ್ಪಾದಿಸಬಹುದಾದ ಅಂದಾಜು. ಚಿನ್ನದ ಗಣಿಯ ಬೇಡಿಕೆ ಇದ್ದುದು ಹತ್ತು ಸಾವಿರ ಅಶ್ವಶಕ್ತಿಯ ವಿದ್ಯುತ್ತಿಗೆ. ಹೆಚ್ಚು ವಿದ್ಯುತ್ ಉತ್ಪಾದಿಸಿ ಶಕ್ತಿ ಮತ್ತು ಹಣ ಪೋಲು ಮಾಡಲೇಕೆ? ಇದು ಅರ್ಥಶಾಖೆಯ ಆಕ್ಷೇಪಣೆ. ಸುಲಭ ದರದಲ್ಲಿ ವಿದ್ಯುತ್ ಒದಗಿಸುವುದರಿಂದ ಅನೇಕ ದೊಡ್ಡ ಕೈಗಾರಿಕೆಗಳನ್ನು ಸಂಸ್ಥಾನದಲ್ಲಿ ಸ್ಥಾಪಿಸಲು ಸಹಾಯವಾಗುತ್ತದೆ. ಸರ್ಕಾರವೇ ಹಲವು ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಬಹುದು. ಬಂಗಾರದ ತತ್ತಿಗಳನ್ನಿಡುವ ರಾಜಹಂಸವನ್ನು ಕೊಲೆ ಮಾಡುವ ಪ್ರಯತ್ನ ಆರ್ಥಿಕ ಇಲಾಖೆ ಮಾಡುತ್ತಿದೆ. ಉತ್ಸಾಹಕ್ಕೆ ತಣ್ಣೀರು ಎರಚುತ್ತಿದೆ. ಹೀಗೆಂದು ವಿಶ್ವೇಶ್ವರಯ್ಯನವರು ದುಃಖಿತರಾದರು. ಈ ಕಾಲಕ್ಕೆ ಟಿ. ಆನಂದ ರಾಯರು ಮೈಸೂರಿನ ದಿವಾನರಾಗಿದ್ದರು. ಅವರು ವಿಶ್ವೇಶ್ವರಯ್ಯನವರ ಯೋಜನೆಗಳಿಗೆ ಪೂರ್ಣ ಬೆಂಬಲವಿತ್ತರು. ಆದರೆ ಆರ್ಥಿಕ ಇಲಾಖೆಯ ಆಕ್ಷೇಪಣೆ ಯಿಂದ ಮಹಾರಾಜರಿಗೆ ಕಟ್ಟೆಯ ನಿರ್ಮಾಣಕ್ಕೆ ಅಂಗೀಕಾರದ ಮುದ್ರೆ ಒತ್ತಲು ಕಠಿಣವಾಯಿತು. ವಿಶ್ವೇಶ್ವರಯ್ಯನವರು ಮುಖ್ಯ ಎಂಜಿನಿಯರ್ ಸ್ಥಾನ ಸ್ವೀಕರಿಸು ವಾಗ ತಮ್ಮ ಯೋಜನೆಗಳನ್ನು ಸುಗಮವಾಗಿ ನಡೆಸಿಕೊಂಡು ಬರಲು ಅಡ್ಡಿ ಆತಂಕ ಗಳು ಅಡ್ಡಬಾರವು ಎಂಬ ಭರವಸೆ ಪಡೆದಿದ್ದರು. ಈ ಭರವಸೆ ಈಡೇರದಿರಲು ಖಿನ್ನರಾದ ವಿಶ್ವೇಶ್ವರಯ್ಯನವರು ಆರು ತಿಂಗಳ ರಜ ಪಡೆದು ಉತ್ತರ ಭಾರತದ ಪ್ರವಾಸಕ್ಕೆ ಮೈಸೂರಿನಿಂದ ನಿರ್ಗಮಿಸಿದರು.

ಪ್ರವಾಸದಿಂದ ಹಿಂತಿರುಗಿ ಬಂದರು. ಕೆಲಸ ವಹಿಸಿಕೊಂಡರು. ಆದರೆ ಕೆಲಸದಲ್ಲಿ ಮೊದಲಿನ ಉತ್ಸಾಹವಿರಲಿಲ್ಲ. ಯಾಂತ್ರಿಕವಾಗಿ ಕಚೇರಿಯ ಕೆಲಸ ನಿರ್ವಹಿಸಿಕೊಂಡು ಬರತೊಡಗಿದರು. ಸರ್ಕಾರದ ಧೋರಣೆಯಲ್ಲಿ ಯಾವ ಬದಲಾವಣೆಯೂ ತೋರಿಬರ ಲಿಲ್ಲ. ಜಿಗುಪ್ಸೆಯಿಂದ ಕೆಲಸಕ್ಕೆ ರಾಜಿನಾಮೆ ಕೊಡುವುದೇ ಲೇಸೆಂಬ ಭಾವನೆ ಬೆಳೆಯತೊಡಗಿತು. ಈ ಬದಲಾವಣೆ ಮಹಾರಾಜರ ಗಮನಕ್ಕೆ ಬಾರದೆ ಹೋಗಲಿಲ್ಲ. ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಂಡು ಕಾರಣ ವಿಚಾರಿಸಿದರು. ತನ್ನ ಮನಸ್ಸಿನ ದುಗುಡ ಮಹಾರಾಜರಿಗೆ ಶ್ರುತಪಡಿಸಿದರು. ಯೋಜನೆಗಳಿಗೆ ಮಂಜೂರಾತಿ ಕೊಡು ವುದಾಗಿ ಮಹಾರಾಜರು ಭರವಸೆ ನೀಡಿದರು.

ಜಲಪಾತದ ನೆರವಿನಿಂದ ವಿದ್ಯುತ್ ಉತ್ಪಾದಿಸುವ ಘಟಕ ಮೊಟ್ಟಮೊದಲು ಸ್ಥಾಪಿತವಾದುದು ಬಂಗಾಳದಲ್ಲಿ. ಆದರೆ ಇದರ ಪ್ರಮಾಣ ಸಣ್ಣದು. ಖಾಸಗಿ ಬಳಕೆಗೆ ಭಾರೀ ಪ್ರಮಾಣದ ಜಲವಿದ್ಯುತ್ ಕಾರ್ಯಾಗಾರ ಸ್ಥಾಪಿಸಿ 90 ಮೈಲಿಗೂ ಹೆಚ್ಚಿನ ದೂರದ ಚಿನ್ನದ ಗಣಿಗೆ ಒದಗಿಸಿದ ಕೀರ್ತಿ ಮೈಸೂರಿಗೆ ಸಲ್ಲುತ್ತದೆ. ಆಗ ಸರ್ ಕೆ. ಶೇಷಾದ್ರಿ ಅಯ್ಯರವರು ದಿವಾನರಾಗಿದ್ದರು. ಜೂನ್ 1902ರಲ್ಲಿ ವಿದ್ಯುತ್ ಪೂರೈಕೆಯ ಕಾರ್ಯ ಫಲಪ್ರದವಾಯಿತು. 11,000 ಅಶ್ವಶಕ್ತಿಯ ವಿದ್ಯುತ್ ಒದಗಿಸುವ ಒಪ್ಪಂದ ಗಣಿಯ ಜಾನ್ ಟೇಲರ್ ಕಂಪೆನಿಯೊಡನೆ ಮಾಡಿಕೊಳ್ಳಲಾಯಿತು. ನಿರ್ದಿಷ್ಟ ಪ್ರಮಾಣದಲ್ಲಿ ವಿದ್ಯುಚ್ಛಕ್ತಿ ಒದಗಿಸಲಾರದೆ ಹೋದಲ್ಲಿ ಮೈಸೂರು ಸರ್ಕಾರ ಕಂಪೆನಿಗೆ

ಪರಿಹಾರ ಕೊಡಬೇಕಾದ ಷರತ್ತಿಗೆ ಸರ್ಕಾರ ಬದ್ಧವಾಗಿತ್ತು. 1903ರಿಂದ 1914ರ ವರೆಗೆ ನಿರ್ದಿಷ್ಟ ಪ್ರಮಾಣದಲ್ಲಿ ವಿದ್ಯುತ್ ಒದಗಿಸಲಾರದೆ ಕಂಪೆನಿಗೆ 38,000 ಪೌಂಡುಗಳ ದಂಡ ತೆತ್ತಿತ್ತು ಸರ್ಕಾರ. ಇವೆಲ್ಲವನ್ನೂ ಗಣನೆಗೆ ತೆಗೆದುಕೊಂಡೇ ವಿಶ್ವೇಶ್ವರಯ್ಯನವರು ಕಾವೇರಿ ಯೋಜನೆ ಸಿದ್ಧಪಡಿಸಿದ್ದುದು. ತನಗೆ ಅಗತ್ಯವಾದ ವಿದ್ಯುಚ್ಛಕ್ತಿ ಒದಗಿಸಲಾರದೆ ಹೋದರೆ ತಾನೇ ಪ್ರತ್ಯೇಕ ವ್ಯವಸ್ಥೆ ಮಾಡಿಕೊಳ್ಳುವುದಾಗಿ ಸರ್ಕಾರಕ್ಕೆ ಕಂಪೆನಿ ತಿಳಿಸಿತ್ತು. ಜುಲೈ 1915ರ ಒಳಗಾಗಿ ವಿದ್ಯುತ್ತನ್ನು ಒದಗಿಸುವ ಭರವಸೆ ಸರ್ಕಾರ ನೀಡಿತ್ತು.

ಹಲವು ರಾಜ್ಯಗಳ ಮೂಲಕ ಹರಿಯುವ ನದಿಗಳಿಗೆ ಕಟ್ಟೆ ಕಟ್ಟಲು ಸಂಬಂಧಿಸಿದ ಎಲ್ಲ ರಾಜ್ಯಗಳ ಅನುಮತಿ ಅಗತ್ಯ. ಕಾವೇರಿಯು ಮದರಾಸು ಪ್ರಾಂತದ ಮೂಲಕ ಹರಿಯುವುದರಿಂದ ಆ ಸರ್ಕಾರದ ಅನುಮತಿ ಅಗತ್ಯವಾಗಿತ್ತು. ಮೆಟ್ಟೂರಿನಲ್ಲಿ ಕಾವೇರಿಗೆ ಅಡ್ಡಲಾಗಿ ಕಟ್ಟೆ ಕಟ್ಟಲು ಮದರಾಸು ಸರ್ಕಾರ ನಿರ್ಧರಿಸಿತ್ತು. ಕನ್ನಂಬಾಡಿಯಲ್ಲಿ 130 ಅಡಿ ಎತ್ತರ, 8,600 ಅಡಿ ಉದ್ದದ 48,000 ಮಿಲಿಯ ಘನ ಅಡಿ ನೀರು ಸಂಗ್ರಹಿಸಬಹುದಾದ ಜಲಾಶಯ ಕಟ್ಟುವ ವಿನ್ಯಾಸ ಸಿದ್ಧಪಡಿಸಿ ಮದರಾಸು ಸರ್ಕಾರಕ್ಕೆ ಕಳುಹಿಸಲಾಗಿತ್ತು. ಇಷ್ಟು ದೊಡ್ಡ ಪ್ರಮಾಣದ ಜಲಾಶಯ ಮೈಸೂರು ನಿರ್ಮಿಸಿದರೆ ತನಗೆ ಸಾಕಷ್ಟು ನೀರು ಒದಗದೆಂದು ಮದರಾಸು ಸರ್ಕಾರ ಆಕ್ಷೇಪಿಸಿತು. ವಿವಾದ ವೈಸರಾಯ ಲಾರ್ಡ್ ಹಾರ್ಡಿಂಜರ ತೀರ್ಮಾನಕ್ಕೆ ಹೋಯಿತು. ಅವರಿಂದ ಅನುಮತಿ ದೊರೆತದ್ದು 80 ಅಡಿ ಎತ್ತರದ ಕಟ್ಟೆ ಕಟ್ಟಲು ಮಾತ್ರ.

ಕಟ್ಟೆ ಕಟ್ಟಲು ಅಗತ್ಯವಾದ ಕಂದಕ ತೋಡಲು ನವಂಬರ್ 1911ರಲ್ಲಿ ಪ್ರಾರಂಭವಾಗಿ, ಈ ಭಾಗದ ಕೆಲಸ ಮುಗಿಸಲು ಎರಡು ವರ್ಷ ಕಾಲ ಬೇಕಾಯಿತು. ಅವಕಾಶ ದೊರೆತಿದ್ದುದು 80 ಅಡಿ ಎತ್ತರದ ಕಟ್ಟೆಗೆ ಆದರೆ ವಿಶ್ವೇಶ್ವರಯ್ಯನವರು ಪ್ರಾರಂಭಿಸಿದ್ದು 125 ಅಡಿ ಎತ್ತರದ ಕಟ್ಟೆಗೆ ಅಗತ್ಯವಾದ 111 ಅಡಿ ಅಗಲದ ಅಡಿಪಾಯ. ಅಡಿಪಾಯಕ್ಕೆ ಆದ ವೆಚ್ಚ 65 ಲಕ್ಷ. ಕಟ್ಟೆಯ ಎತ್ತರವನ್ನು 80 ಅಡಿಗೇ ಪೂರ್ಣಗೊಳಿಸಬೇಕಾಗಿ ಬಂದಿದ್ದರೆ ಬಹಳ ಹಣ ವ್ಯರ್ಥವಾಗುತ್ತಿತ್ತು. ಆದರೆ 125 ಅಡಿ ಎತ್ತರದ ಕಟ್ಟೆ ಕಟ್ಟಲು ಅನುಮತಿ ದೊರೆಯದೆ ಹೋಗಲಾರದು ಎಂಬ ಆತ್ಮ ವಿಶ್ವಾಸ, ತಮ್ಮ ಬೇಡಿಕೆಯ ಸತ್ಯತೆ ಅಗಲದ ಅಡಿಪಾಯ ಕಟ್ಟಿಸಲು ನೀಡಿತ್ತು ಧೈರ್ಯ, ಸಾಹಸ.

ನವೆಂಬರ್ 1912 ವಿಶ್ವೇಶ್ವರಯ್ಯನವರು ದಿವಾನರಾದರು. ಕಟ್ಟೆಯ ಕೆಲಸ ಮುಂದುವರಿಯುತ್ತಲಿತ್ತು. ಕಾವೇರಿ ನದಿಯಲ್ಲಿ ಭಯಂಕರ ಪ್ರವಾಹ. ಮಳೆಗಾಲ ಮುಗಿಯುವ ವರೆಗೆ ಕೆಲಸ ನಿಲ್ಲಿಸಬೇಕೆಂದು ಬಹುಜನಾಭಿಪ್ರಾಯ. ಸಕಾಲದಲ್ಲಿ ಕೆಲಸ ಮುಗಿಸಬೇಕೆಂಬ ಹಟ ದಿವಾನರಿಗೆ. ನಾಸಿಕ್ ಜಿಲ್ಲೆಯ ಪಂಜ್ರಾ ನದಿಯ 'ಸೈಫನ್' ಕಾರ್ಯ ಕೈಗೊಂಡಾಗ ತಮಗೆ ಮೇಲಧಿಕಾರಿ ನೀಡಿದ ಎಚ್ಚರಿಕೆ ವಿಶ್ವೇಶ್ವರಯ್ಯನವರು

ಸ್ಮರಿಸಿಕೊಂಡಿರಬೇಕು. ಇನ್ನೂ ಅಧಿಕ ಉತ್ಸಾಹದಿಂದ ಕೆಲಸ ಮುಂದುವರಿಸುವಂತೆ ಆಜ್ಞಾಪಿಸಿದರು. ಹತ್ತು ಸಾವಿರ ಆಳುಗಳು ಕೆಲಸ ಮಾಡುತ್ತಿದ್ದಲ್ಲಿ ಇನ್ನೂ ಎರಡು ಸಾವಿರ ಜನರನ್ನು ನೇಮಿಸಿಕೊಳ್ಳಲು ತಿಳಿಸಿದರು. ಚಿನ್ನದ ಗಣಿ ಕಂಪೆನಿಯವರು ಸಕಾಲದಲ್ಲಿ ವಿದ್ಯುಚ್ಛಕ್ತಿ ಒದಗಿಸುವುದಾದರೆ, ಪ್ರತಿ ಅಶ್ವಶಕ್ತಿಗೂ ಎರಡು ಪೌಂಡ್ ಹೆಚ್ಚಿನ ದರ ಹತ್ತು ವರ್ಷ ಕಾಲ ನೀಡುವುದಾಗಿ ತಿಳಿಸಿದ್ದರು. ಇದೂ ಒಂದು ಪ್ರಚೋದಕವಾಗಿದ್ದೀತು. ರಾತ್ರಿ ಹಗಲು ಕೆಲಸ ಮಾಡಿ ಎಂದರು. ರಾತ್ರಿಯ ಕೆಲಸಕ್ಕೆ ಪ್ರಕಾಶಮಾನವಾದ 'ವಾಷಿಂಗ್‌ಟನ್' ದೀಪ ಬಳಸುವಂತೆ ತಿಳಿಸಿದರು. ಮಲೇರಿಯ ಜ್ವರಪೀಡಿತರಾದವರಿಗಾಗಿ ವೈದ್ಯರನ್ನು ನೇಮಿಸಿದರು. ಕೆಲಸ ತ್ವರಿತಗತಿಯಿಂದ ಸಾಗಲು ಛೀಫ್ ಇಂಜಿನಿಯರ್, ಕಳ್ಳಕಾಕರ ಕಾಟ ತಡೆಯಲು ಐ.ಜಿ.ಪಿ., ನ್ಯಾಯ ಪಾಲನೆಗೆ ಜಿಲ್ಲಾಧಿಕಾರಿ ಎಲ್ಲರೂ ಕಟ್ಟೆಯ ಬಳಿ ಬಿಡಾರ ಹೂಡುವಂತೆ ಮಾಡಿದರು. ಮೈಸೂರಿನಲ್ಲಿ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನ ನಡೆಯುತ್ತಿತ್ತು. ದಿವಾನರೇ ಅಧ್ಯಕ್ಷರು. ಬೆಳಿಗ್ಗೆ 11ರಿಂದ ಸಂಜೆ 5ರ ವರೆಗೆ ಅಧಿವೇಶನ. ಪ್ರತಿ ಅರ್ಧಘಂಟೆಗೆ ದೂರವಾಣಿಯ ಮೂಲಕ ಕೆಲಸದ ಪ್ರಗತಿಯ ವರದಿ ಮುಟ್ಟುವುದು. ತನ್ನ ನೆರವು ಬೇಕಾದಲ್ಲಿ ನಿಸ್ಸಂಕೋಚವಾಗಿ ತಿಳಿಸಿ, ಬರುತ್ತೇನೆ ಎಂಬ ಅಭಯ. ಅಧಿವೇಶನ ಮುಗಿಯುತ್ತಲೇ ನೇರವಾಗಿ ಮೋಟಾರಿನಲ್ಲಿ ಕಟ್ಟೆಯ ಬಳಿಗೆ ಧಾವಿಸುವರು. ಪ್ರಕೃತಿಯೇ ನಿಮಗೆ ಪ್ರತಿಕೂಲವಾಗಿದೆ. ಆದಕಾರಣ ಕಟ್ಟೋಣ ಮುಗಿಯಲು ತಡವಾದರೂ ಚಿಂತೆಯಿಲ್ಲ ಎಂದು ಜಾನ್ ಟೇಲರ್ ಕಂಪೆನಿಯವರು ಅಭಯವಿತ್ತರು. ಇದಕ್ಕೆ ವಿಶ್ವೇಶ್ವರಯ್ಯನವರು ಕಿವಿಗೊಡಲಿಲ್ಲ. ಭಾರತೀಯರ ಸಾಮರ್ಥ್ಯಕ್ಕೆ ಆದ ಸವಾಲನ್ನು ಎದುರಿಸಲು ದೃಢಸಂಕಲ್ಪ ಮಾಡಿದ್ದರು. ಛಲಗಾರ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಕಟ್ಟೆಯ ಮೊದಲ ಹಂತದ ಕೆಲಸ ಸಕಾಲದಲ್ಲಿ ಪೂರ್ಣಗೊಂಡು ಶಿವನ ಸಮುದ್ರಕ್ಕೆ ಅಗತ್ಯವಾದಷ್ಟು ನೀರು ನಿರಂತರ ಒದಗಿಸಲು ಸಾಧ್ಯವಾಯಿತು. ಬಂದ ಕಷ್ಟ ಸಂಕಟಗಳೆಲ್ಲವನ್ನೂ ಧೈರ್ಯದಿಂದ ಎದುರಿಸಿ ಜುಲೈ 1915ರಲ್ಲಿ ಕೋಲಾರದ ಚಿನ್ನದ ಗಣಿಗೆ ಭರವಸೆ ಇತ್ತಿದ್ದ ವಿದ್ಯುಚ್ಛಕ್ತಿ ಒದಗಿಸಿ ಶಹಭಾಸ್ ಎನಿಸಿಕೊಂಡರು. ಜಾನ್ ಟೇಲರ್ ಕಂಪೆನಿಯವರು ವಿಶ್ವೇಶ್ವರಯ್ಯನವರ ಸಾಮರ್ಥ್ಯ ಪ್ರಶಂಸಿಸಿ ಮಹಾರಾಜರಿಗೆ ತಮ್ಮ ಕೃತಜ್ಞತೆ ಪತ್ರದ ಮೂಲಕ ವ್ಯಕ್ತಪಡಿಸಿದರು.

ಎರಡನೆಯ ಹಂತದ ಕೆಲಸ ಪ್ರಾರಂಭಿಸಲು ಮದರಾಸು ಸರ್ಕಾರ ಆಕ್ಷೇಪಣೆ ಎತ್ತಿತು. ಕೆಲಸ ಮುಂದುವರಿಯದಂತೆ ತಡೆಯಬೇಕೆಂದು ಇಂಡಿಯ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿತು. ವ್ಯಾಜ್ಯ ಬಗೆಹರಿಸಲು ಇಂಡಿಯಾ ಸರ್ಕಾರ ಪಂಚಾಯತಿ ನೇಮಿಸಿತು. ವಿಚಾರಣೆ ಜುಲೈ 18, 1913ರಲ್ಲಿ ಪ್ರಾರಂಭವಾಯಿತು. ಮೈಸೂರು ಸರ್ಕಾರದ ಪರ ವಿಶ್ವೇಶ್ವರಯ್ಯನವರು, ಮದರಾಸು ಸರ್ಕಾರದ ಪರ ಸಿ. ಪಿ. ರಾಮಸ್ವಾಮಿ ಅಯ್ಯರವರು ತಮ್ಮತಮ್ಮ ವಾದ ಮಂಡಿಸಿದರು. ಕನ್ನಂಬಾಡಿ ಕಟ್ಟೆಯ ನಿರ್ಮಾಣದಿಂದ ತಾವು ಮುಂದೆ ಕಟ್ಟಲು ಉದ್ದೇಶಿಸಿರುವ ಮೆಟ್ಟೂರು ಜಲಾಶಯಕ್ಕೆ ಸಾಕಷ್ಟು ನೀರು ಇಲ್ಲದೇ ಹೋದೀತು, ಶಂಕೆ ಮದರಾಸಿಗೆ. ಕಾವೇರಿ ನದಿಯಿಂದ

ಮೈಸೂರು ಬಳಸಿಕೊಳ್ಳುತ್ತಿರುವುದು 1,15,000 ಎಕರೆ ಪ್ರದೇಶ. ಮದರಾಸು ಉಪಯೋಗ ಮಾಡಿಕೊಳ್ಳುತ್ತಿರುವುದು 12,25,000 ಎಕರೆ ಭೂಮಿ. ನದಿಯ ಶೇಕಡ 92 ಅಂಶ ಮದರಾಸು, 8 ಅಂಶ ಮಾತ್ರ ಮೈಸೂರು ಬಳಸಿಕೊಳ್ಳುತ್ತಿವೆ. ಇನ್ನೂ ಹೆಚ್ಚು ನೀರು ಬಳಸಿಕೊಳ್ಳುವ ಅವಕಾಶ ಮೈಸೂರು ಪಡೆಯಬೇಕಾಗಿದೆ. ಇದಕ್ಕಾಗಿ ಕನ್ನಂಬಾಡಿ ಕಟ್ಟೆಯ ಅಗತ್ಯ. ಈ ಕಟ್ಟೆ 48,000 ಮಿಲಿಯ ಘನ ಅಡಿ ನೀರು ಸಂಗ್ರಹಿಸುವ ಸಾಮರ್ಥ್ಯ ಪಡೆಯುತ್ತದೆ. ಇದು 1,15,000 ಎಕರೆ ಜಮೀನಿಗೆ ನೀರುಣಿಸಬಲ್ಲುದು. ಮೆಟ್ಟೂರು ಜಲಾಶಯ 3,20,000 ಎಕರೆಗೆ ನೀರು ಹಾಯಿಸ ಬಲ್ಲುದು. ಅದು 95,660 ಮಿಲಿಯ ಘನ ಅಡಿಗಳ ಸಾಮರ್ಥ್ಯ ಹೊಂದಿದೆ. ಕನ್ನಂಬಾಡಿ ಕಟ್ಟೆ ಕಟ್ಟೋಣದಿಂದ ಮದರಾಸಿಗೆ ಯಾವ ಅನಾನುಕೂಲವೂ ಆಗದು. ಪಂಚಾಯತಿ ನಿಗದಿ ಮಾಡುವಷ್ಟು ಜಲ ನಾವು ವಂಚನೆಯಿಲ್ಲದೆ ಖಾತ್ರಿಯಾಗಿ ಬಿಟ್ಟು ಕೊಡುತ್ತೇವೆ ಎಂಬ ಭರವಸೆ ವಿಶ್ವೇಶ್ವರಯ್ಯನವರು ನೀಡಿದರು.

ಪಂಚಾಯತಿಯು ಕನ್ನಂಬಾಡಿಯಿಂದ ಮದರಾಸಿಗೆ ಬಿಟ್ಟುಕೊಡಬೇಕಾದ ನೀರಿನ ಪ್ರಮಾಣ ನಿರ್ಧರಿಸಿ, 130 ಅಡಿ ಎತ್ತರದ ಕಟ್ಟೆ ಕಟ್ಟಲು ಮೈಸೂರಿಗೆ ಅನುಮತಿ ನೀಡಿತು. ಇಂಡಿಯ ಸರ್ಕಾರ ಇದಕ್ಕೆ ಒಪ್ಪಿಗೆ ನೀಡಿತು. ಮದರಾಸು ಸರ್ಕಾರ ಆಗಲೂ ಆಕ್ಷೇಪಣೆ ಎತ್ತಿತು. ಪಂಚಾಯತಿಯ ತೀರ್ಮಾನ ಒಪ್ಪಿಕೊಳ್ಳಲು ನಿರಾಕರಿಸಿ, ಲಂಡನ್ನಿನಲ್ಲಿರುವ ಇಂಡಿಯ ವಿಭಾಗದ ಕಾರ್ಯದರ್ಶಿಗೆ ಮನವಿ ಒಪ್ಪಿಸಿತು. ಉಭಯ ಪಕ್ಷಗಳೂ ಮಧ್ಯಸ್ಥಗಾರರ ನೆರವಿನಿಂದ ವ್ಯಾಜ್ಯ ಬಗೆಹರಿಸಿಕೊಳ್ಳಲು ಒಪ್ಪಿ ಕೊಂಡುವು. ಮಧ್ಯಸ್ಥಿಕೆ ಬೇಡ, ಇಂಡಿಯ ಸರ್ಕಾರದ ಕಾರ್ಯದರ್ಶಿಗಳು ಉಭಯ ಪಕ್ಷ ವಾದ ಆಲಿಸಿ ತೀರ್ಪು ಕೊಡಲಿ. ಇದು ವಿಶ್ವೇಶ್ವರಯ್ಯನವರ ನಿಲುವಾ ಗಿತ್ತು. ಆದರೆ ಮೈಸೂರು ಸರ್ಕಾರ ಮಧ್ಯಸ್ಥಿಕೆಗೆ ಒಪ್ಪಿಕೊಂಡಿತು. ಅಂತ್ಯ ತೀರ್ಮಾನ ಅನೇಕ ಅಂಶಗಳಲ್ಲಿ ಮೈಸೂರಿಗೆ ಪ್ರತಿಕೂಲವಾಗಿತ್ತು. ಆದರೂ ಒಪ್ಪಿಕೊಳ್ಳ ಬೇಕಾಯಿತು. 1911ರಲ್ಲಿ ಪ್ರಾರಂಭವಾದ ಕಟ್ಟೆಯ ನಿರ್ಮಾಣ ಕಾರ್ಯ ಮುಗಿಯಲು ಈ ಅಡ್ಡಿ ಆತಂಕಗಳ ದೆಸೆಯಿಂದ ಇಪ್ಪತ್ತು ವರ್ಷ ಬೇಕಾಯಿತು.

ಕಟ್ಟೆಯ ನಿರ್ಮಾಣ ಕಾರ್ಯ ಪೂರ್ಣಗೊಳ್ಳುವುದರೊಳಗಾಗಿ ವಿಶ್ವೇಶ್ವರಯ್ಯನವರು ದಿವಾನ್ ಪದವಿಯಿಂದ 1918ರಲ್ಲಿ ನಿವೃತ್ತರಾದರು. ಆದರೂ ಮೈಸೂರಿನ ದಕ್ಷ ಎಂಜಿನಿಯರುಗಳು ಕೆಲಸ ಮುಂದುವರಿಸಿ ಯಶಸ್ವಿಯಾಗಿ ಮುಗಿಸಿದರು. ಕಟ್ಟೆ ಕಟ್ಟಲು ಸಿಮೆಂಟ್ ಬಳಸದಿರುವುದು ಗಮನಾರ್ಹ. ಸಿಮೆಂಟ್ ವಿದೇಶಗಳಿಂದ ತರಿಸಬೇಕಾಗಿತ್ತು. ಸ್ವದೇಶಾಭಿಮಾನಿ ವಿಶ್ವೇಶ್ವರಯ್ಯನವರಿಗೆ ನಮ್ಮ ದೇಶದ ಹಣ ವಿದೇಶಗಳಿಗೆ ಹರಿದುಹೋಗುವುದು ಒಪ್ಪಿಗೆ ಆಗಲಿಲ್ಲ. ಸುಣ್ಣ, ಇಟ್ಟಿಗೆ ಪುಡಿ, ಮರಳು ಇವನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರಸಿ, ನುಣ್ಣಗೆ ಅರೆದು 'ಸುರ್ಕಿ' ಗಾರೆ ತಯಾರಿಸುವುದನ್ನು ಎಂಜಿನಿಯರುಗಳು ಕಂಡುಹಿಡಿದಿದ್ದರು. ಚಿತ್ರದುರ್ಗ ಜಿಲ್ಲೆಯ ಮಾರಿಕಣಿವೆಯ ವಾಣಿವಿಲಾಸ ಸಾಗರದ ನಿರ್ಮಾಣಕ್ಕೆ 'ಸುರ್ಕಿ'ಯನ್ನೇ ಬಳಸ

ಲಾಗಿತ್ತು. ಕನ್ನಂಬಾಡಿ ಕಟ್ಟೆ ಕಟ್ಟಲು ಸುರ್ಕಿಯನ್ನೇ ಉಪಯೋಗಿಸಲಾಗಿದೆ. ಅರ್ಧ ಶತಮಾನ ಕಳೆದರೂ ಎರಡು ಜಲಾಶಯಗಳೂ ಸುಭದ್ರವಾಗಿಯೇ ಉಳಿದಿವೆ. ಕೃಷ್ಣ ರಾಜ ಮಹಾರಾಜರ ಕಾಲದಲ್ಲಿ ನಿರ್ಮಿತವಾದ ಕನ್ನಂಬಾಡಿ ಕಟ್ಟೆ ಕೃಷ್ಣರಾಜಸಾಗರ ಎಂದು ನಾಮಾಂಕಿತವಾಯಿತು. ಆಗಿನ ಕಾಲಕ್ಕೆ ಭಾರತದಲ್ಲಿ ನಿರ್ಮಿತವಾದ ಜಲಾ ಶಯಗಳಲ್ಲಿ ಅತ್ಯಂತ ಭಾರಿಯಾದುದು ಸಾಗರದೋಪಾದಿಯಲ್ಲಿ ಕಂಗೊಳಿಸುವ ಕೃಷ್ಣ ರಾಜಸಾಗರ. ಕಾವೇರಿ ಹುಟ್ಟುವ ಕೊಡಗಿನಿಂದ, ಸಮುದ್ರದಲ್ಲಿ ಲೀನವಾಗುವ ವರೆಗೆ ಉದ್ದ ಗಮನಿಸಿದರೆ, ಕಾವೇರಿ ನದಿಗೆ ಕಟ್ಟಿರುವಷ್ಟು ಕಟ್ಟೆಗಳನ್ನು ಪ್ರಪಂಚದ ಇತರ ಯಾವ ನದಿಗೂ ಕಟ್ಟಿರುವುದಿಲ್ಲ. ಅನೇಕ ದೊಡ್ಡ ನದಿಗಳ ನೀರು ವ್ಯರ್ಥವಾಗಿ ಸಮುದ್ರಕ್ಕೆ ಸೇರುತ್ತದೆ. ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಸೇವೆ ಸಲ್ಲಿಸುತ್ತಿರುವ ಕೀರ್ತಿ ಸಲ್ಲುತ್ತದೆ ಕಾವೇರಿಗೆ. ಭಾರತದ ಪುಣ್ಯನದಿಗಳಲ್ಲಿ ಕಾವೇರಿಯೂ ಒಂದು. ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದ, ಸಿಂಧು ಈ ಪವಿತ್ರ ನದಿಗಳ ಶ್ರೇಣಿಗೆ ಸೇರುತ್ತಾಳೆ ಕಾವೇರಿ.

ಕೃಷ್ಣರಾಜಸಾಗರದ ನಿರ್ಮಾಣದಿಂದ 23,533 ಎಕರೆ ಜಮೀನಿನ 25 ಹಳ್ಳಿಗಳು ಮುಳುಗಡೆಯಾಗಿವೆ. ಈ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಹತ್ತು ಸಾವಿರ ಕುಟುಂಬಗಳು ಮನೆ ಜಮೀನು ಕಳೆದುಕೊಂಡುವು. ಈ ಎಲ್ಲ ಕುಟುಂಬಗಳಿಗೂ ಬೇರೆ ಸ್ಥಳದಲ್ಲಿ ವಸತಿ ಮತ್ತು ಬೇಸಾಯಕ್ಕೆ ಬೇಕಾದ ಜಮೀನು ಕೊಡಲಾಯಿತು. ಪರಿಹಾರಕ್ಕಾಗಿ ರೂ. 46,50,000 ವೆಚ್ಚವಾಯಿತು. ದೊರೆತ ಪರಿಹಾರ ತೃಪ್ತಿಕರವಾಗಿಲ್ಲ ಎಂದು ನ್ಯಾಯಾಲಯದ ಮೊರೆ ಯಾರೂ ಹೋಗಲಿಲ್ಲ. ಇದೂ ಒಂದು ವೈಶಿಷ್ಟ್ಯ. ಕಟ್ಟೆಯ ನಿರ್ಮಾಣಕ್ಕೆ ಆದ ವೆಚ್ಚ, ಎರಡು ಕೋಟಿ ಐವತ್ತು ಲಕ್ಷ ರೂಪಾಯಿಗಳು. ಕಟ್ಟೆಯ ಉದ್ದ 8,600 ಅಡಿಗಳು. ಇದರ ಮೇಲೆ ವಾಹನ ಸಂಚಾರಕ್ಕೆ ಯೋಗ್ಯವಾದ ರಸ್ತೆ ಇದೆ. ತಳಪಾಯದಿಂದ ಅತಿ ಹೆಚ್ಚಿನ ಎತ್ತರ 140 ಅಡಿ. ಜಲಾಶಯದ ಅತಿ ಹೆಚ್ಚಿನ ಆಳ 124 ಅಡಿ. ಜಲಾಶಯ 48,300 ದಶಲಕ್ಷ ಘನ ಅಡಿ ಜಲ ಸಂಗ್ರಹಿ ಸುವ ಸಾಮರ್ಥ್ಯ ಪಡೆದಿದೆ. ಜಲಾಶಯದಲ್ಲಿ 163 ಬಾಗಿಲುಗಳೂ ತೂಬುಗಳೂ ಇವೆ. 136 ಕವಾಟಗಳು ಭದ್ರಾವತಿಯ ವಿಶ್ವೇಶ್ವರ ನಾಮಾಂಕಿತ ಕಾರ್ಖಾನೆಯಲ್ಲಿ ತಯಾರಾದುವು. ಮಿಕ್ಕ ಕವಾಟಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳಲಾಗಿದೆ. ಈ ಸಿಹಿನೀರಿನ ಜಲಾಶಯದ ವಿಸ್ತೀರ್ಣ 50 ಚದರ ಮೈಲಿ, ಸುತ್ತಳತೆ 25 ಮೈಲಿ.

ಕಟ್ಟೆ ಕಟ್ಟುವುದರಿಂದ ಕೆಲಸ ಮುಗಿಯದು. ನಾಲೆಗಳನ್ನು ತೋಡಿ ಸಂಗ್ರಹವಾದ ನೀರನ್ನು ಪೈರುಪಚ್ಚೆ ಬೆಳೆಸಲು ಬಳಸಿಕೊಳ್ಳಬೇಕು. ಕಟ್ಟೋಣ ಕೆಲಸ ಪೂರ್ಣಗೊಳ್ಳುವ ಒಳಗಾಗಿಯೇ ಕೆಳಮಟ್ಟದ ಎರಡು ನಾಲೆಗಳು ಸಿದ್ಧವಾದುವು. ಇವು 5,000 ಎಕರೆ ಭೂಮಿಗೆ ನೀರೊದಗಿಸುತ್ತವೆ. ಸಂಗ್ರಹವಾಗುವ ನೀರಿನ ಪೂರ್ಣ ಪ್ರಯೋಜನ ಪಡೆಯಲು ಮೇಲ್ದಂಡೆಯ ಕಾಲುವೆ ಸಿದ್ಧವಾಗುವುದು ಅಗತ್ಯ. ಈ ನಾಲೆಯ ನಿರ್ಮಾಣ ಕಷ್ಟಕರ. ಈ ಕಷ್ಟಸಾಧ್ಯವಾದ ಕೆಲಸ ನಿರ್ವಹಿಸಲು ವಿಶ್ವೇಶ್ವರಯ್ಯನವ

ರನ್ನು ಬರಮಾಡಿಕೊಳ್ಳಲು ಮಹಾರಾಜರು ತೀರ್ಮಾನಿಸಿದರು. ಬೊಂಬಾಯಿಯಲ್ಲಿದ್ದ ಅಯ್ಯನವರನ್ನು ಪತ್ರ ಬರೆದು ಬರಮಾಡಿಕೊಂಡರು. ಅರವತ್ತು ಮೈಲಿ ಉದ್ದದ ನಾಲೆಯ ನಿರ್ಮಾಣ ನೋಡಿಕೊಳ್ಳಲು ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿ ರಚಿತವಾಯಿತು. ಮೂರು ಹಂತಗಳಲ್ಲಿ ನಾಲೆ ನಿರ್ಮಿಸಲು ತೀರ್ಮಾನಿಸಲಾಯಿತು. ಈ ನಾಲೆಯಿಂದ ಎಂಟುನೂರು–ಒಂಭೈನೂರು ಚದರ ಮೈಲಿ ವಿಸ್ತೀರ್ಣದ ಪ್ರದೇಶ ನೀರಾವರಿ ಆದೀತು. ನಾಲೆ ನಿರ್ಮಿತವಾಗದಿದ್ದರೆ ಕಟ್ಟೆ ಕಟ್ಟಲು ಸುರಿದ ಹಣ ನೀರಿನಲ್ಲಿ ಮಾಡಿದ ಹೋಮದಂತೆ ವ್ಯರ್ಥವಾದೀತು. ಈ ರೀತಿಯ ತೀರ್ಮಾನ ತೆಗೆದುಕೊಳ್ಳಲಾಯಿತು.

ಎರಡನೆಯ ಹಂತದ ನಾಲೆ 9,680 ಅಡಿ ಎಂದರೆ, ಸುಮಾರು ಒಂದೂಮುಕ್ಕಾಲು ಮೈಲಿ ಉದ್ದದ ಸುರಂಗದಲ್ಲಿ ಹರಿದು ಹೊರಬರುತ್ತದೆ. ಹುಲಿಕೆರೆ ಸುರಂಗವೆಂದು ಇದು ಪ್ರಸಿದ್ಧವಾಗಿದೆ. ಇದರಲ್ಲಿ ಹರಿಯುವಾಗ ನೀರು ಕಣ್ಣಿಗೆ ಗೋಚರಿಸದು. ಅದೃಶ್ಯವಾಗುತ್ತದೆ. ಅನುಭವಿ ಆಫ್ಘನರ ನೆರವಿನಿಂದ ಈ ತ್ರಾಸದಾಯಕ ಕೆಲಸ ಸಾಧಿತವಾಯಿತು. ಇದು ಆಗಿನ ಕಾಲಕ್ಕೆ ಭಾರತದಲ್ಲೇ ಅತಿ ಉದ್ದನೆಯ ಸುರಂಗದ ಜಲಮಾರ್ಗ. ಅದ್ಭುತ ಸಾಧನೆ. ಈ ನಾಲೆಗೆ ವೈಸರಾಯಿ ಇರ್ವಿನ್ನರ ಹೆಸರು ಇಡಲಾಗಿತ್ತು. ಈಗ ವಿಶ್ವೇಶ್ವರ ನಾಲೆ ಎಂದು ನಾಮಾಂಕಿತವಾಗಿ ಅವರ ಸೇವೆಯನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತಿದೆ. ಕೃಷ್ಣರಾಜಸಾಗರದಿಂದ ಹರಿದುಬರುವ ನಾಲೆಗಳು ಬೊಕ್ಕ ಬರಡು ಪ್ರದೇಶಗಳನ್ನು ನಕ್ಕುನಲಿಯುವ ನಾಡಾಗಿ ಮಾಡಿ ದೇಶವನ್ನು ಶ್ರೀಮಂತಗೊಳಿಸಿವೆ. ಇಲ್ಲಿಯ ಜಮೀನು ಅತ್ಯಂತ ಫಲವತ್ತಾದ ಪ್ರದೇಶವಾಗಿದೆ. ಪ್ರಯೋಜನವಾಗುತ್ತಿರುವುದು ವ್ಯವಸಾಯಕ್ಕೆ ಮಾತ್ರವಲ್ಲ. ಅನೇಕ ಗಿರಣಿಗಳು ಹಲವಾರು ಕಾರ್ಖಾನೆಗಳು ತಲೆಎತ್ತಿವೆ. ಭತ್ತದ ಗಿರಣಿ, ಸಕ್ಕರೆ ಕಾರ್ಖಾನೆ, ರಾಸಾಯನಿಕ ಗೊಬ್ಬರದ ಕಾರ್ಖಾನೆ, ಕಾಗದದ ಕಾರ್ಖಾನೆ, ಅಸಿಟೇಟ್ ಕಾರ್ಖಾನೆ, ಮದ್ಯಸಾರದ ಕಾರ್ಖಾನೆ ಇನ್ನೂ ಅನೇಕ ಕಾರ್ಖಾನೆಗಳು ಸ್ಥಾಪಿತವಾಗಿವೆ. ಕೃಷ್ಣನ ಕೃಪೆಯಿಂದ ಕೃಷ್ಣರಾಜಸಾಗರವು ಮಹಾ ಸಾಧಕ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಭವಿಷ್ಯ ವಾಣಿಯಂತೆ ಕಾಮಧೇನು ಆಗಿ ಬೇಡಿದ ಫಲ ನೀಡುತ್ತಿದೆ. ಕಟ್ಟೆಯ ಕೆಳಗೆ ಕವೇರ ಋಷಿಯ ವರಪುತ್ರಿ ಕಾವೇರಿಯ ಪುತ್ಥಳಿ ನಿರ್ಮಿತವಾಗಿದೆ. ಋಷಿವಾಣಿಯಂತೆ ಕಾವೇರಿಯು ಅವಿರತ ಹರಿಯುವ ಅಮೃತವರ್ಷಿಣಿಯಾಗಿ ಅಮೃತಧಾರೆಯಾಗಿ ಲೋಕಪಾವನಿ ಆಗಿದ್ದಾಳೆ. ಕೃಷ್ಣರಾಜಸಾಗರವು ಎದುವರೆಗೆ ಜಲಸಮೃದ್ಧವಾಗಿರುತ್ತದೆಯೋ ಅದುವರೆಗೂ ವಿಶ್ವೇಶ್ವರಯ್ಯನವರ ಕೀರ್ತಿ ಶೋಭಿಸುತ್ತಿರುವುದರಲ್ಲಿ ಸಂದೇಹವೇನು?

ಜಗತ್ಪ್ರಸಿದ್ಧ ಬೃಂದಾವನ ಕೃಷ್ಣರಾಜಸಾಗರದ ಕೆಳಭಾಗದಲ್ಲಿದ್ದು ನಯನಮನೋಹರ ಕಾರಂಜಿಗಳಿಂದಲೂ ಹೂದೋಟಗಳಿಂದಲೂ ಬಣ್ಣಬಣ್ಣದ ದೀಪಾಲಂಕಾರದಿಂದಲೂ ಲಕ್ಷಾಂತರ ಪ್ರವಾಸಿಗರನ್ನು ಪ್ರಪಂಚದ ನಾನಾ ಭಾಗಗಳಿಂದ ಆಕರ್ಷಿಸುತ್ತಿದೆ.

# 10. ಕೃಷಿಯ ಸ್ಥಾನ

ಭಾರತದಲ್ಲಿ ಪ್ರತಿ ನಾಲ್ವರಲ್ಲಿ ಮೂವರು ವ್ಯವಸಾಯವನ್ನು ಅವಲಂಬಿಸಿರುತ್ತಾರೆ. ರೈತ ನಾಡಿನ ಬೆನ್ನೆಲುಬು. ಮಳೆ ಬೆಳೆ ಅವನ ಜೀವನಾಧಾರ. ಬೇಸಾಯಕ್ಕೆ ಮುಖ್ಯ ಆಧಾರ ನೀರು. ನೀರಿಗೆ ಅಗತ್ಯ ಮಳೆ. ಮಳೆಯ ನೀರು ಹರಿಯುವ ನದಿಯಲ್ಲಿ ಹರಿದುಹೋಗುತ್ತದೆ. ಆದರೆ ಆಫ್ರಿಕದಲ್ಲಿನಂತೆ ಮಳೆ ಸದಾ ಹುಯ್ಯುವುದಿಲ್ಲ. ಮಳೆ ಬಂದಾಗ ನೀರು ಸಂಗ್ರಹಿಸಿ ಇಡುವುದು ಬುದ್ಧಿವಂತಿಕೆ. ಇದಕ್ಕಾಗಿ ಕೆರೆಕುಂಟೆ ಗಳು ಜಲಾಶಯಗಳು ನಿರ್ಮಿತವಾದುವು. ಇವುಗಳ ಆಶ್ರಯದಲ್ಲಿ ಕೃಷಿ ಮಾಡುವ ರೈತ ಸುಖವಾಗಿ ಬಾಳಬಲ್ಲ. ಮಳೆಯನ್ನೇ ನಂಬಿ ಬೆಳೆ ಬೆಳೆಯುವ ರೈತ ಮಳೆ ಯಾವಾಗ ಬಂದೀತು ಎಂದು ಮುಗಿಲನ್ನೇ ನೋಡುತ್ತಿರುತ್ತಾನೆ. ಮಳೆ ಬಾರದಿದ್ದರೆ ಅವನ ಬದುಕು ತುಂಬ ಕಷ್ಟಕರವಾಗುತ್ತದೆ. ಎರಡು ವರ್ಷ ಮಳೆ ಬೀಳದಿದ್ದರೆ ದೇಶ ಕ್ಷಾಮದ ದವಡೆಯಲ್ಲಿ ಸಿಲುಕಿ ತತ್ತರಿಸುತ್ತದೆ. ಆದಕಾರಣ ಮಳೆಯ ನೀರು ವ್ಯರ್ಥವಾಗಿ ಹೋಗದಂತೆ ನಾನಾ ವಿಧಾನಗಳಿಂದ ಸಂಗ್ರಹಿಸಿ ನೀರಾವರಿ ಪ್ರದೇಶ ಹೆಚ್ಚಿಸಿ ಅಧಿಕ ಬೆಳೆ ಬೆಳೆಯುವಂತೆ ಮಾಡಬೇಕಾದುದು ಅಗತ್ಯ. ಎಲ್ಲಕ್ಕೂ ಮೂಲ ವ್ಯವಸಾಯ. ಕಾಳುಕಡ್ಡಿಯಿಲ್ಲದೆ ಯಾವ ದೇಶವೂ ಬದುಕದು. ಎಲ್ಲ ದೇಶಗಳ ಭೂಗುಣ, ವಾಯುಗುಣ ಬೇಸಾಯಕ್ಕೆ ಯೋಗ್ಯವೆಂದು ಹೇಳಲು ಸಾಧ್ಯವಿಲ್ಲ. ಆದರೆ ಪ್ರತಿಯೊಂದು ದೇಶವೂ ಸ್ವಯಂಪೂರ್ಣವಾಗಿರಲು ಪ್ರಯತ್ನಿಸುತ್ತದೆ. ಎಲ್ಲ ದೇಶ ಗಳಲ್ಲೂ ಸ್ವಲ್ಪ ಜನರಾದರೂ ಬೇಸಾಯದಲ್ಲಿ ತೊಡಗಿರುತ್ತಾರೆ.

ಈ ದೃಷ್ಟಿಯಲ್ಲಿ ಪ್ರಕೃತಿಯ ಕೃಪೆಗೆ ಪಾತ್ರವಾಗಿರುವ ದೇಶ ಭಾರತ ಎಂದು ಹೇಳ ಬಹುದು. ಆದರೂ ನಮ್ಮ ಗ್ರಾಮಗಳು ಬಡತನದ ಬವಣೆಯಿಂದ ಪರಿತಪಿಸುತ್ತಿವೆ. ವಿಶ್ವೇಶ್ವರಯ್ಯನವರ ದೃಷ್ಟಿಯಲ್ಲಿ—ಕೃಷಿಯನ್ನೇ ಅವಲಂಬಿಸಿರುವ ಜನರ ಸಂಖ್ಯೆ ಅಪಾರವಾಗಿ ಬೆಳೆಯುತ್ತಿರುವುದು; ಸಣ್ಣ ಸಣ್ಣ ಹಿಡುವಳಿ; ಗೊಬ್ಬರದ ವ್ಯರ್ಥ; ಕಳಪೆ ಬೀಜ; ವ್ಯವಧಾನವಿಲ್ಲದ ವ್ಯವಸಾಯ ಕ್ರಮ; ಅಜ್ಜ ನೆಟ್ಟ ಆಲದ ಮರದ ಪುರಾತನ ಪದ್ಧತಿಯನ್ನೇ ಅನುಸರಿಸುತ್ತಿರುವುದು; ಹೆಂಗಸರಿಂದ ಸಾಕಷ್ಟು ಯೋಗ್ಯ ಕೆಲಸ ಪಡೆಯದಿರುವುದು—ಇವು ಮುಖ್ಯ ಕಾರಣಗಳು.

ಗ್ರಾಮಗಳ ಅಭಿವೃದ್ಧಿಗೆ ಈಗಿನ ವಾತಾವರಣ ಬದಲಾಗಬೇಕು. ಜನರಲ್ಲಿ ಆತ್ಮ ವಿಶ್ವಾಸ, ನಂಬಿಕೆ, ಸಹಕಾರ ಮನೋಧರ್ಮ ಬೆಳೆಯಬೇಕು. ಇಷ್ಟಾದರೆ ನೂರಾರು ಮುಖಗಳಲ್ಲಿ ಪ್ರಗತಿಯ ಪ್ರವಾಹ ಹರಿಯುವುದರಲ್ಲಿ ಸಂಶಯವಿಲ್ಲ. ಕ್ಷಾಮ

ತಲೆದೋರದಂತೆ ಮಾಡಬೇಕಾದುದು ಮೊದಲ ಕರ್ತವ್ಯ. ಪ್ರತಿಯೊಂದು ಕುಟುಂಬ ತಾವು ಬೆಳೆದ ದವಸದಲ್ಲಿ ಎರಡು ವರ್ಷಗಳಿಗೆ ಸಾಕಾಗುವಷ್ಟು ಧಾನ್ಯ ಕಣಜದಲ್ಲಿ ತುಂಬಿಡಬೇಕು. ಪರಾವಲಂಬಿಯಾಗಿರಲಾಗದು. ಆದರೆ ಸಣ್ಣ ತಾಕುಗಳ ಕೃಷಿಕ ಬೆಳೆಯುವುದು ಅವನಿಗೇ ಸಾಲದು. ಒಂದು ವರ್ಷಕ್ಕೂ ಬಾರದು. ಹೀಗಿರುವಲ್ಲಿ ಕಷ್ಟಕಾಲಕ್ಕೆ ಅವನು ಏನು ಕೂಡಿಡಬಲ್ಲ? ವಿಶ್ವೇಶ್ವರಯ್ಯನವರು ಇದನ್ನು ಅರಿಯದೆ ಇಲ್ಲ. ಇಂಥ ಬಡ ಕುಟುಂಬಗಳಿಗೂ ಮಿತವ್ಯಯ ಕಲಿಸಿಕೊಡಬೇಕು. ದುಡಿಮೆಗೆ ದೇಶದಲ್ಲಿ ಸಾಕಷ್ಟು ಅವಕಾಶವಿದೆ. ಉತ್ತಮ ಪ್ರತಿಫಲವಿದೆ. ಅಭಾವದ ದುಷ್ಪರಿಣಾಮದಿಂದ ಪಾರಾಗಲು ದೇಹ ದಂಡಿಸಿ ದುಡಿಯಬೇಕು. ಹೆಚ್ಚು ಕಾಲ ದುಡಿಯುವ ಅಭ್ಯಾಸ ಬೆಳಸಿಕೊಳ್ಳಬೇಕು. ಕೈಗಾರಿಕೆ, ವಾಣಿಜ್ಯ. ವ್ಯಾಪಾರ ಇವುಗಳಲ್ಲಿ ಅಧಿಕ ಆಸಕ್ತಿ ವಹಿಸಬೇಕು. ಆಗ ಕ್ಷಾಮವಿರುದ್ಧದ ಸಮರ ಯಶಸ್ವಿ ಆದೀತು.

ಜೀವನಾಧಾರಕ್ಕೆ ಅಗತ್ಯವಾದ ಅನ್ನ, ಕೈಗಾರಿಕೆಗೆ ಬೇಕಾಗುವ ಕಚ್ಚಾಮಾಲು, ರಫ್ತು ಮಾಡಲು ಸರಕು ವ್ಯವಸಾಯದಿಂದ ದೊರಕುತ್ತದೆ. ಸ್ವಯಂಪರಿಪೂರ್ಣ ರಾಷ್ಟ್ರ ಬೇಸಾಯವಿಲ್ಲದೆ ಬಾಳದು. ಅದಿಲ್ಲದಿದ್ದರೆ ಬದುಕಿಗೇ ಅವು ಪರದೇಶಗಳನ್ನು ಅವಲಂಬಿಸಿರಬೇಕಾಗುತ್ತದೆ. ಯುದ್ಧಕಾಲದಲ್ಲಿ ಇದರ ಅರಿವು ಚೆನ್ನಾಗಿ ಆಗುತ್ತದೆ. ಶತ್ರುರಾಜ್ಯವನ್ನು ಸುತ್ತುವರಿದು, ಸರ್ಪಕಾವಲು ಹಾಕಿ, ಹೊರಗಿನಿಂದ ಸರಕುಸಾಮಗ್ರಿ ಆಹಾರ ಪದಾರ್ಥ ಹೋಗದಂತೆ ಮಾಡಿ ಉಪವಾಸ ಕೆಡವಿ ಶರಣಾಗತವಾಗುವಂತೆ ಮಾಡುವುದು ಹಳೆಯ ಕಾಲದಿಂದ ಆಚರಣೆಯಲ್ಲಿರುವ ಸಮರ ಕೌಶಲ್ಯ. ಆದಕಾರಣ ಪ್ರತಿಯೊಂದು ರಾಷ್ಟ್ರವೂ ಆಹಾರದಲ್ಲಿ ಸ್ವಾವಲಂಬಿಯಾಗಿರಬೇಕಾದುದು ಅತಿ ಮುಖ್ಯ. ಆದರೆ ಈ ಆಧುನಿಕ ಕಾಲದಲ್ಲಿ ದೇಶ ಬೇಸಾಯದಿಂದ ಮಾತ್ರವೇ ಸಿರಿವಂತವಾಗದು. ಇದು ಎಲ್ಲ ದೇಶಗಳಿಗೂ ಅನ್ವಯಿಸುವ ಸಿದ್ಧಾಂತ. ನಾಗರೀಕತೆ ಬೆಳೆದಂತೆ ಮಾನವನ ನಿತ್ಯ ಜೀವನದ ಅಗತ್ಯಗಳು ಅಧಿಕವಾಗುತ್ತವೆ. ಭೋಗವಸ್ತುಗಳು ನಿತ್ಯಾವಶ್ಯಕಗಳಾಗುತ್ತವೆ. ಆವಶ್ಯಕತೆಗಳು ಹೆಚ್ಚಿದಂತೆ ಕೈಗಾರಿಕೆ ಮತ್ತು ಯಂತ್ರೋತ್ಪಾದನೆಯ ಉದ್ಯಮಗಳಿಗೆ ಹೆಚ್ಚು ಪ್ರಾಮುಖ್ಯತೆ ದೊರೆಯುತ್ತದೆ. ಆಧುನಿಕ ನಾಗರೀಕತೆ ಕೈಗಾರಿಕೋದ್ಯಮಗಳನ್ನು ಅವಲಂಬಿಸಿರುತ್ತದೆ. ನಾಗಾಲೋಟದಿಂದ ಮುಂದುವರಿಯುತ್ತಿರುವ ರಾಷ್ಟ್ರಗಳೊಡನೆ ಪೈಪೋಟಿ ಮಾಡಲು ನಮ್ಮ ದೇಶವೂ ಕೈಗಾರಿಕೋದ್ಯಮಗಳಲ್ಲಿ ಹೆಚ್ಚುಹೆಚ್ಚಾಗಿ ತೊಡಗಬೇಕು. ಬಹುಸಂಖ್ಯಾತರು ಬೇಸಾಯವನ್ನೇ ನಂಬಿಕೊಂಡು ಬಾಳುವುದು ನಾಗರೀಕತೆಯ ಲಕ್ಷಣವಲ್ಲ. ಭಾರತವು ನಾಗರೀಕತೆಯ ಈ ಲಕ್ಷಣವನ್ನು ಇನ್ನೂ ಮನದಟ್ಟು ಮಾಡಿಕೊಂಡಿಲ್ಲ. ಇದು ವಿಶ್ವೇಶ್ವರಯ್ಯನವರ ಖಚಿತಾಭಿಪ್ರಾಯ.

ಪ್ರಗತಿಪರ ದೇಶಗಳು ಕೈಗಾರಿಕೋದ್ಯಮಗಳಿಗೆ ಒಲಿಯುತ್ತಿವೆ. ನಮ್ಮ ಧೋರಣೆ ತದ್ವಿರುದ್ಧ. ವ್ಯವಸಾಯವನ್ನೇ ಜೀವನಾಧಾರವಾಗಿ ಮಾಡಿಕೊಳ್ಳುತ್ತಿರುವವರ

ಪ್ರಮಾಣ ಬೆಳೆಯುತ್ತಿದೆ. ಜನಗಣತಿಯ ವರದಿಯಂತೆ 1891ರಲ್ಲಿ ವ್ಯವಸಾಯದಲ್ಲಿ ತೊಡಗಿದ್ದವರ ಶೇಕಡ ಪ್ರಮಾಣ 59.8; ಇಪ್ಪತ್ತು ವರ್ಷಗಳಲ್ಲಿ ಈ ಪ್ರಮಾಣ 71.3 ಆಯಿತು. 1931ರಲ್ಲಿ 73ಕ್ಕೆ ಏರಿತು. ನಮ್ಮ ಕುಟುಂಬ ಪದ್ಧತಿಯೂ ಇದಕ್ಕೊಂದು ಕಾರಣ. ಅಪ್ಪನ ಆಸ್ತಿ ಮಕ್ಕಳು ಮೊಮ್ಮಕ್ಕಳಿಗೆ ವಿಭಜಿತವಾಗುತ್ತ ಭೂಆಸ್ತಿ ಸಣ್ಣ ತಾಕುಗಳಾಗಿ ಒಡೆಯುತ್ತದೆ. ವ್ಯವಸಾಯವನ್ನೇ ಅವಲಂಬಿಸಿರುವವರ ಸಂಖ್ಯೆ ಬೆಳೆಯುತ್ತಾ ಹೋಗುತ್ತದೆ. ಐದು ಜನರಿಗೆ ಅನ್ನ ನೀಡುತ್ತಿದ್ದ ಭೂತಾಯಿ ಹತ್ತು ಹದಿನೈದು ಜನರ ಉದರ ಪೋಷಣೆ ಮಾಡಬೇಕಾಗುತ್ತದೆ. ತುತ್ತಿನ ಚೀಲ ದೊಡ್ಡದಾಗುತ್ತಾ ಬಡತನದ ಬೇನೆ ಅಸಹನಾಶೀತವಾಗುತ್ತದೆ.

ಕೃಷಿಯ ಹೀನ ಸ್ಥಿತಿಗೆ ಅಪಾರ ಅಜ್ಞಾನ ಮೂಲ ಕಾರಣ. ಇದರ ನಿವಾರಣೆಗೆ ವಿದ್ಯೆ ಅಗತ್ಯ. ವಿದ್ಯೆ ಇಲ್ಲದವನು ಆಧುನಿಕ ವೈಜ್ಞಾನಿಕ ಪದ್ಧತಿ ಅರಿಯಲು ಅನುಕರಿಸಲು ಅಸಮರ್ಥ. ಹಳೆಯ ಪದ್ಧತಿಯ ಅಂಧಾನುಕರಣೆ ಸಾಗುತ್ತದೆ. ಕಾಲ ನಿಯಮವಿಲ್ಲ, ಕಾಲಕ್ಕೆ ಬೆಲೆ ಇಲ್ಲ. ಸೂರ್ಯೋದಯ ಸೂರ್ಯಾಸ್ತಮ ಇವನ ಗಡಿಯಾರ. ಸೂರ್ಯಾಸ್ತಮವಾಗುತ್ತಲೇ ಹೊಲದಿಂದ ಮನೆಗೆ ಬಂದು ಹಿಟ್ಟುಂಡು ಹಾಸಿಗೆ ಹಿಡಿದು ಮಲಗುತ್ತಾನೆ. ರಾತ್ರಿ ದೀಪ ಉರಿಸಲು ಎಣ್ಣೆಯ ಕೊರತೆ. ಎಣ್ಣೆಗೆ ಆಗುವ ಅಲ್ಪ ವೆಚ್ಚ ಉಳಿಸುವ ದುಸ್ಥಿತಿ. ಕಾಲ ವ್ಯರ್ಥ. ಶಿಸ್ತಿನ ಅಭಾವ. ಶಿಸ್ತು ಸಂಘಟನೆ ಸಂಯಮಗಳ ಬೆಲೆ ಅರಿಯ. ಹಣದ ಕೊರತೆ. ಹೊರ ಲಾಗದ ಸಾಲದ ಹೊರೆ. ಅಗತ್ಯವಿದ್ದಾಗ ದೊರೆಯದು ಧನಸಹಾಯ. ಯಾವುದೋ ಪದಾರ್ಥ ಅಡವಿಟ್ಟು ಒಂದಕ್ಕೆ ನಾಲ್ಕರಷ್ಟು ಬಡ್ಡಿ ತೆತ್ತು ಸಾಲ ಮಾಡಿಕೊಂಡು ಋಣಬಾಧೆಗೆ ಸಿಲುಕುತ್ತಾನೆ.

ನಮ್ಮ ಗ್ರಾಮಗಳು ವ್ಯವಸ್ಥಿತವಾಗಿ ಬೆಳೆದಿಲ್ಲ. ಗುಡಿಸಿಲು ಮನೆ ಸಾಲಾಗಿ ನೀಟಾಗಿ ರಚಿತವಾಗಿರುವುದಿಲ್ಲ. ಒಂದು ಹಿಂದು ಇನ್ನೊಂದು ಮುಂದು. ವಾಹನ ಸಂಚಾರಕ್ಕೆ ಅನುಕೂಲವಿಲ್ಲದ ಕಿರಿದಾದ ಬೀದಿಗಳು. ಒಪ್ಪವಿಲ್ಲದ ಓಣಿಗಳು. ಮನೆಯ ಕಸ ಗಂಜಲ ರೊಚ್ಚು ಎಲ್ಲ ಹರಿಯುವುದು ಬೀದಿಗೇ. ಬೀದಿಯ ಕಸ ಗುಡಿಸುವ, ಗ್ರಾಮ ಸಾರ ಹರಿದುಹೋಗುವ ಮೋರಿಯ ವ್ಯವಸ್ಥೆ ಇಲ್ಲ. ಕುಡಿಯುವ ನೀರಿನ ಕೊರತೆ. ಮನೆಯ ಪಕ್ಕದಲ್ಲೇ ಗೊಬ್ಬರದ ಗುಂಡಿ. ನಗರನೈರ್ಮಲ್ಯಕ್ಕೆ ತಾನೂ ಹೊಣೆ ಎಂಬ ಅರಿವಿಲ್ಲ. ದೇಹಬಾಧೆ ತೀರಿಸಿಕೊಳ್ಳುವ ವ್ಯವಸ್ಥೆ ಮನೆಗಳಲ್ಲಿ ಇರದು. ಮಕ್ಕಳು ಬೀದಿಯಲ್ಲಿಯೇ ಕೂಡುವರು. ಈತಿ ಬಾಧೆಗೆ ಮತ್ತೊಂದು ಹೆಸರು ಹೊರಕ್ಕೆ ಹೋಗುವುದು, ಬಹಿರ್ದೇಶ. ದಿನವಹಿ ಸ್ನಾನ ಮಾಡಿ ಮಡಿ ಉಟ್ಟುಕೊಳ್ಳುವ ರೂಢಿ ಇಲ್ಲ. ಎತ್ತು ಎಮ್ಮೆ ತೊಳೆಯುವ ಕೆರೆಯ ನೀರೇ ಸ್ನಾನಕ್ಕೂ ಪಾನಕ್ಕೂ. ಕಾಯಿಲೆಗೆ ಮೂಲ. ಸೂರ್ಯನ ಚಲನವಲನೆಯಿಂದ ಕಾಲ ಅಳೆಯು ವರು. ದೂರ ಅಳೆಯುವುದೂ ಹೀಗೆಯೇ. ಕೊಂಬಿನ ಕೂಗಿನ ದೂರ, ಕವಣೆಕಲ್ಲಿನ ದೂರ. ಹರದಾರಿ. ಹರದಾರಿ ಎಂದರೆ ಒಂದು ಮೈಲಿ ಆಗಬಹುದು ಮೂರು

ಮೈಲಿಯೂ ಆದೀತು. ಬಿಡುವಿನ ವೇಳೆಯನ್ನು ಹರಟೆ, ಹಲವು ಬಗೆಯ ಒಳಆಟ ಗಳಲ್ಲಿ ಕಳೆಯುವರು. ಹಣ ಕಟ್ಟಿ ಆಡುವ ಇಸ್ಪೀಟು ಜೂಜುಗಾರಿಕೆಯೂ ಜಾರಿಗೆ ಬಂದಿದೆ. ವಿರಾಮವನ್ನು ಉಪಯುಕ್ತವಾಗಿ ಬಳಸಿಕೊಳ್ಳುವ ಮಾರ್ಗ ಅರಿಯರು. ಪಂಚಪಾಂಡವರು ಜೂಜಾಡಿ ರಾಜ್ಯವನ್ನೇ ಕಳೆದುಕೊಂಡು ವನವಾಸ ಅನುಭವಿಸಿದ ಕಥೆ ಎಲ್ಲರೂ ಬಲ್ಲರು. ಆದರೆ ಅದರಿಂದ ಪಾಠ ಕಲಿಯರು.

ಕೃಷಿ ಒಂದನ್ನೇ ನಂಬಿ ಬದುಕುವ ನಾಡು ಶ್ರೀಮಂತವಾಗದು. ಬೇಸಾಯ ಕೈಗಾರಿಕೆ ಎರಡೂ ಕೂಡಿ ಬಾಳಬೇಕು, ಬೆಳೆಯಬೇಕು. ಅರಣ್ಯದಲ್ಲಿ ಬೆಳೆಯುವ ಉತ್ತಮ ಜಾತಿಯ ವೃಕ್ಷಗಳನ್ನು ಕಡಿದು ಉರುವಲಾಗಿ ಉರಿಸುವುದಕ್ಕಿಂತ ಉಪಯುಕ್ತ ವಾದ ಮೇಜು ಕುರ್ಚಿ ಬೆಂಚು ಇವುಗಳನ್ನು ಮಾಡುವುದು ಲಾಭದಾಯಕ. ಒಂದು ಮರ ಕಡಿದರೆ ಅದರ ಸ್ಥಾನದಲ್ಲಿ ಎರಡು ಬೆಳೆಸಬೇಕು. ಅರಣ್ಯದ ಐಶ್ವರ್ಯ ಪೋಲುಮಾಡ ಲಾಗದು. ಪ್ರತಿ ಸಂಸಾರವೂ ಉಪಕಸುಬು ಅನುಷ್ಠಾನಕ್ಕೆ ತರಬೇಕು. ಮಳೆಬೆಳೆಯ ಕೊರತೆ ಇದರಿಂದ ಸ್ವಲ್ಪ ಮಟ್ಟಿಗಾದರೂ ನಿವಾರಿತವಾದೀತು. ಹೈನುಗಾರಿಕೆ, ಕೋಳಿ ಸಾಕಣೆ ಇವುಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ಹಳ್ಳಿಗಳು ಕೆರೆಯ, ನಾಲೆಯ ಹೂಳು ತೆಗೆಯುವುದು, ಗ್ರಾಮನೈರ್ಮಲ್ಯ, ದೇವಾಲಯ ಮಂಟಪಗಳ ದುರಸ್ತಿ ಇವೇ ಮೊದಲಾದ ಸಾಮೂಹಿಕ ಕಾರ್ಯ ಕೈಗೊಳ್ಳಬೇಕು. ಇದರಿಂದ ಪರಸ್ಪರ ಪರಿಚಯ ಐಕ್ಯತೆ ಬೆಳೆಯುತ್ತದೆ. ಸೋಮವಾರದ ಉತ್ತಮ ಪದ್ಧತಿ ಮತ್ತೆ ಆಚರಣೆಗೆ ಬರುವಂತೆ ಮಾಡಿದರು. ಶ್ರಮದಾನ ಮಾಡಲಾಗದ, ಸಾಮೂಹಿಕ ಕಾರ್ಯಗಳಲ್ಲಿ ಕಾರಣಾಂತರ ಗಳಿಂದ ಸಾಧ್ಯವಾಗದ ವ್ಯಕ್ತಿ ಅಥವಾ ಕುಟುಂಬ ತದನುಗುಣ ಪರಿಹಾರ ಕೊಡಲಿ ಎಂದರು. ಬಡವ ಭಾಗ್ಯವಂತ ಭೇದವಿಲ್ಲದೆ ಎಲ್ಲರೂ ಒಟ್ಟಾಗಿ ಕಾರ್ಯನಿರತರಾಗ ಬೇಕು. ಇದು ಅವರ ಉದ್ದೇಶ. ಪರಿಹಾರ ಪ್ರಮಾಣ ಗ್ರಾಮವಾಸಿಗಳೇ ಗೊತ್ತು ಮಾಡಬಹುದು. ವಸೂಲಾದ ಹಣ ಗ್ರಾಮದ ಕ್ಷೇಮಕ್ಕೇ ವಿನಿಯೋಗವಾಗಬೇಕು.

ಗ್ರಾಮ ಹೇಗಿರಬೇಕು, ಇದರ ಚಿತ್ರ ವಿಶ್ವೇಶ್ವರಯ್ಯನವರು ಕೊಟ್ಟಿರುತ್ತಾರೆ. 'ಮಾದರಿ ಗ್ರಾಮ' ಪದ ಅವರು ಬಳಸಲಿಲ್ಲ. ಅವರು ಬಯಸುತ್ತಿದ್ದುದು 'ಆತ್ಮ ಗೌರವದ' ಗ್ರಾಮ. ಪರಾವಲಂಬಿಯಾಗಿರದೆ ಸ್ವಪರಿಪೂರ್ಣವಾಗಿ ಬಾಳುತ್ತಿದ್ದೇವೆ ಎಂದು ಹೆಮ್ಮೆ ಪಡುವ ಗ್ರಾಮ. ಗ್ರಾಮದ ನೂರರಲ್ಲಿ ಹತ್ತು ತರುಣರಾದರೂ ಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿರಬೇಕು. ಕೂಲಿ ಕೊಡಲಾಗದೆ ಮಕ್ಕಳನ್ನು ದನಕುರಿ ಕಾಯುವುದಕ್ಕೆ ಬಳಸಿಕೊಳ್ಳುತ್ತಾರೆ. ತೋಟ ಕಾಯಲು, ಕಳೆ ಕೀಳಲು ಹೆಂಗಸರು ಮಕ್ಕಳನ್ನು ಉಪಯೋಗಿಸಿಕೊಳ್ಳುತ್ತಾರೆ. ಶಾಲೆಗೆ ಹೋಗದ ಮಕ್ಕಳನ್ನು ಕೆಲಸಕ್ಕೆ ತೊಡಗಿಸಿರುತ್ತಾರೆ. ಚಿಕ್ಕವರನ್ನು ಅಕ್ಕರೆಯಿಂದ ಪಾಲಿಸಿ ಪೋಷಿಸಿ ಅಕ್ಷರ ಕಲಿಸದೆ ಅವರು ಅವಿದ್ಯಾವಂತರಾಗಿಯೇ ಬೆಳೆಯುತ್ತಾರೆ. ಇಂಥವರಿಗೆ ವಯಸ್ಕರ ಶಿಕ್ಷಣದ ವ್ಯವಸ್ಥೆ ಆಗಬೇಕು. ರುಂಜು (ರುಜು) ಮಾಡಲು ನನ್ನ ಮಗನಿಗೆ ಬರುತ್ತೆ ಎಂದು ಹಿರಿಯರು ಹೆಮ್ಮೆ ಪಡುವ ಕಾಲ ಹೋಗಬೇಕು. ಪ್ರತಿ ಗ್ರಾಮದಲ್ಲೂ ಕಮ್ಮಾರ,

ಚಮ್ಮಾರ, ಬಡಗಿ ಇರಬೇಕು. ಗಾಡಿಯ ಗಾಲಿ ಗ್ರಾಮದಲ್ಲೇ ಆಗಬೇಕು. ಪಾತ್ರೆಗಳ ಕಲಾಯಿ ರಿಪೇರಿ ಕಲಿತಿರಬೇಕು. ಪಾದರಕ್ಷೆಗಳು ಹಳ್ಳಿಯಲ್ಲೇ ತಯಾರಾಗಬೇಕು. ಪ್ರತಿಯೊಂದು ಕುಟುಂಬವೂ ಉಪಕಸುಬು ಕಲಿತಿರಬೇಕು. ಇನ್ನೂರಐವತ್ತು ಪ್ರಜಾ ಸಂಖ್ಯೆಗೆ ಒಂದು ಕೈಗಾರಿಕೆ. ಪ್ರತಿ ಸಂಸಾರವೂ ಎರಡು ವರ್ಷಗಳಿಗೆ ಸಾಕಾಗುವ ಧಾನ್ಯ ಸಂಗ್ರಹಿಸಿ ಇಡಬೇಕು. ಪ್ರತಿಫಲ ಕೊಡುವ ಉದ್ದೇಶಗಳಿಗಲ್ಲದೆ ಸಾಲ ಮಾಡ ಲಾಗದು. ಗ್ರಾಮದ ವಾರ್ಷಿಕ ಉತ್ಪಾದನಾ ಸಾಮರ್ಥ್ಯ ಅಳೆಯಬೇಕು. ಸರಾಸರಿ ತಲಾ ಮೂವತ್ತಮೂರು ರೂಪಾಯಿ ವರಮಾನ ಕೊಡಲಾರದ ಗ್ರಾಮ ಆರ್ಥಿಕವಾಗಿ ಸುರಕ್ಷಿತವಲ್ಲ. ಇದು ಅವರ ನಿಶ್ಚಿತ ಅಭಿಪ್ರಾಯ. ವರ್ಷಾಂತ್ಯದಲ್ಲಿ ಪ್ರತಿ ಗ್ರಾಮವೂ ಜನನ–ಮರಣ ಸಂಖ್ಯೆ, ಜನಸಂಖ್ಯೆ, ದನಗಳ ಸಂಖ್ಯೆ, ಪ್ರಮುಖ ಕೈಗಾರಿಕೆ, ಗ್ರಾಮದ ಹೆಸರು, ವಿಸ್ತೀರ್ಣ ಇವುಗಳನ್ನು ಫಲಕಗಳ ಮೇಲೆ ಬರೆಯಿಸಿ ಗ್ರಾಮದ ಹೊರಗೆ ಪ್ರದರ್ಶಿಸಬೇಕು. ಅಭಿವೃದ್ಧಿ ಕಾರ್ಯಗಳ ವರದಿ ಪ್ರಕಟಿಸಬೇಕು. ಕನಿಷ್ಠ ಎರಡು ವರ್ತಮಾನ ಪತ್ರಿಕೆಗಳನ್ನು ತರಿಸಿಕೊಂಡು ಪ್ರಪಂಚದ ಆಗುಹೋಗುಗಳ ಅರಿವು ಮಾಡಿಕೊಳ್ಳಬೇಕು.

ಆತ್ಮಗೌರವ ಗ್ರಾಮದ ಚಿತ್ರ ಮೇಲಿಂದ ಮೇಲೆ ಜನರ ಗಮನಕ್ಕೆ ತರುತ್ತ ತಮ್ಮ ಗ್ರಾಮ ಹೀಗಾಗಬೇಕು ಎಂಬ ಉತ್ಸಾಹ ಮೂಡುವಂತೆ ಮಾಡಿದರು. ಗ್ರಾಮಾಭಿವೃದ್ಧಿ ಕಾರ್ಯ ಕೈಗೂಡಲು ಯೋಜನೆಗಳನ್ನು 1912ರಲ್ಲಿ ಸಿದ್ಧಗೊಳಿಸಿದರು. ಗ್ರಾಮ ಸಮಿತಿ, ವ್ಯವಸಾಯಾಭಿವೃದ್ಧಿ ಸ್ಥಾಪಿತವಾದುವು. ಗ್ರಾಮದ ಕೆಲಸವನ್ನು ಆರು ಮುಖ್ಯ ಭಾಗಗಳಾಗಿ ವಿಂಗಡಿಸಿದರು. ವ್ಯವಸಾಯ, ಉಪಕಸುಬು, ಶಿಕ್ಷಣ, ಕೈಗಾರಿಕೆ, ವ್ಯಾಪಾರೋದ್ಯಮ ಇವುಗಳಿಗೆ ಪ್ರತ್ಯೇಕ ಸಮಿತಿಗಳು. ಆಡಳಿತ ನಿರ್ವಹಣೆ, ಶಾಂತಿ ಪಾಲನೆ, ನ್ಯಾಯವಿತರಣೆ ಇವು ಗ್ರಾಮಪಂಚಾಯತಿಯ ಹೊಣೆ. ಪ್ರತಿಯೊಂದು ಗ್ರಾಮಸಮೂಹವೂ ತನ್ನ ಅಭಿವೃದ್ಧಿಗೆ ಅಗತ್ಯವಾದಂತೆ ಯೋಜನೆ ರೂಪಿಸಿಕೊಳ್ಳುವ ಸ್ವಾತಂತ್ರ್ಯ ಪಡೆಯಿತು. ಪ್ರತಿಯೊಂದಕ್ಕೂ ಸರ್ಕಾರವನ್ನೇ ಅವಲಂಬಿಸಿರದೆ ಸ್ವಂತ ಜವಾಬ್ದಾರಿಯ ಮೇಲೆ ಕೆಲಸ ನಡೆಸುವಂತೆ ಗ್ರಾಮೀಣರನ್ನು ವಿಶ್ವೇಶ್ವರಯ್ಯನವರು ಹುರಿದುಂಬಿಸುತ್ತಿದ್ದರು.

ವ್ಯವಸಾಯ ಇಲಾಖೆ ಅಸ್ತಿತ್ವಕ್ಕೆ ಬಂತು. ಮದರಾಸು ಸರ್ಕಾರದಿಂದ ನಿವೃತ್ತರಾದ ವ್ಯವಸಾಯ ತಜ್ಞ ಲೆಸ್ಲಿ ಕೋಲ್‌ಮನ್ ಅವರನ್ನು ವ್ಯವಸಾಯ ಇಲಾಖೆಯ ಮುಖ್ಯಾಧಿಕಾರಿಯಾಗಿ ನೇಮಿಸಲಾಯಿತು. ವೈಜ್ಞಾನಿಕ ಬೇಸಾಯ ಪದ್ಧತಿ, ರಸ ಗೊಬ್ಬರದ ಬಳಕೆ ಇವರ ಕಾಲದಲ್ಲಿ ಬಂತು. ಆಧುನಿಕ ಸಂಶೋಧನೆಗಳನ್ನು ಪ್ರಾಯೋ ಗಿಕವಾಗಿ ಆಚರಣೆಗೆ ತರಲು ಹೆಬ್ಬಾಳದಲ್ಲಿ ವ್ಯವಸಾಯ ಪರೀಕ್ಷಣ ಕ್ಷೇತ್ರ ಸ್ಥಾಪಿತ ವಾಯಿತು. ರೋಗರಹಿತ ಬೀಜ ಉತ್ಪಾದಿಸಿ ರೈತರಿಗೆ ಒದಗಿಸುವುದು; ರೈತರ ಜಮೀನಿನಲ್ಲಿಯೇ ಪ್ರಯೋಗ ನಡೆಸುವುದು, ಉತ್ತಮ ಬೀಜ ಉತ್ಪಾದಿಸುವುದು; ಸುಧಾರಿತ ವ್ಯವಸಾಯೋಪಕರಣಗಳನ್ನು ಬಳಸುವುದು; ಕಾಡು ಮತ್ತು ತೋಪು

ಬೆಳೆಸುವುದು; ಬಾಳೆಹೊನ್ನೂರಿನ ಕಾಫಿ ಪ್ರಯೋಗ ಕ್ಷೇತ್ರವನ್ನು ವಿಸ್ತರಿಸಿ ಅಭಿವೃದ್ಧಿ ಗೊಳಿಸಲಾಯಿತು; ಸಂಶೋಧನೆಗೆ ಇದು ಇಡೀ ಭಾರತಕ್ಕೇ ಪ್ರಮುಖ ಕ್ಷೇತ್ರವಾಯಿತು. ಮೈಸೂರಿನ ಸಮೀಪದ ರಾಯನಕೆರೆ ಉತ್ತಮ ರಾಸುಗಳಿಗೆ ಮೀಸಲಾಯಿತು. ಸೇಬು, ಮಾವು, ತೆಂಗು, ಕಾಫಿ ತೋಟಗಳ ಅಭಿವೃದ್ಧಿಗೆ ವಿಶೇಷ ಪ್ರೋತ್ಸಾಹ ನೀಡಲಾಯಿತು. ಕೆರೆಗಳ ನೀರು ಪೋಲಾಗದಂತೆ ಎಲ್ಲರಿಗೂ ಸಮನಾಗಿ ದೊರೆಯುವಂತೆ ನೋಡಿ ಕೊಳ್ಳುವ ಜವಾಬ್ದಾರಿ ಗ್ರಾಮ ಪಂಚಾಯತಿಗಳಿಗೆ ವಹಿಸಿಕೊಡಲಾಯಿತು. ಲೆಸ್ಲಿ ಕೋಲ್ಮನ್ ಅವರು ವ್ಯವಸಾಯದ ಮುನ್ನಡೆಗೆ ಮಾರ್ಗದರ್ಶಕರಾದರು ಎಂದರೆ ಅತಿಶಯೋಕ್ತಿಯಾಗದು. ಎರಡು ವರ್ಷಗಳಲ್ಲಿ 13,360 ಗ್ರಾಮಗಳಲ್ಲಿ 7,745 ಗ್ರಾಮಸಮಿತಿಗಳಾದುವು. ಇದರಿಂದ ನೂರರಲ್ಲಿ 79 ಗ್ರಾಮಗಳು ಸಮಿತಿಯ ವ್ಯಾಪ್ತಿಗೆ ಒಳಗಾದುವು. ಮೂರನೆಯ ವರ್ಷಕ್ಕೆ ಇದು 8,171 ಆಯಿತು. ಹಳ್ಳಿ ಯವರಿಗೆ ಹಣ ಕೊಡಲು ಸಾಧ್ಯವಾಗದಿರಬಹುದು. ಆದರೆ ಗ್ರಾಮದ ಕೆರೆಕುಂಟೆ ನಾಲೆ ಬಾವಿ ರಸ್ತೆ ಇವುಗಳನ್ನು ಉತ್ತಮ ಸ್ಥಿತಿಯಲ್ಲಿರಿಸಲು ಶ್ರಮದಾನ ಮಾಡ ಬಹುದು. ಧನಸಹಾಯ ನೀಡಲಾರದ ಕುಟುಂಬಗಳು ವಾರದಲ್ಲಿ ಅರ್ಧದಿನ ಸಾರ್ವ ಜನಿಕ ಸೇವೆಗೆ ಶ್ರಮಿಸಬೇಕು ಎಂದರು ವಿಶ್ವೇಶ್ವರಯ್ಯನವರು. ಅರ್ಧ ದಿನದ ಶ್ರಮ ದಾನ ನೀಡಲು ಸಮ್ಮತಿಸಿದ ಗ್ರಾಮಗಳ ಸಂಖ್ಯೆ 1914ರಲ್ಲಿ 6,126 ಆಗಿತ್ತು.

ಕೃಷಿಯೂ ಒಂದು ವಿಜ್ಞಾನ. ವ್ಯವಸಾಯ ಎಂದರೆ ದೇಹಶ್ರಮದ ವ್ಯಯವಲ್ಲ. ವೈಜ್ಞಾನಿಕವಾಗಿ ವ್ಯವಸಾಯ ಮಾಡುವುದರಿಂದ ಒಂದಕ್ಕೆ ನಾಲ್ಕರಷ್ಟು ಬೆಳೆಬೆಳೆಯ ಬಹುದು. ವ್ಯವಸಾಯದಲ್ಲಿ ತೊಡಗಿರುವವರು ಇದನ್ನು ಅನುಭವದಿಂದ ಅರಿತಿರು ವರು. ಕೇವಲ ಕೃಷಿ ಒಂದರಿಂದಲೇ ದೇಶ ಸಂಪದ್ಭರಿತವಾಗದು ಎಂದು ಎಚ್ಚರಿಸುತ್ತಿದ್ದ ವಿಶ್ವೇಶ್ವರಯ್ಯನವರು ಕೃಷಿಯ ಉಪಾಂಗಗಳ ಬೆಳವಣಿಗೆಯಲ್ಲೂ ಆಸಕ್ತಿ ವಹಿಸಿದರು. ಭಾರತದಲ್ಲಿ ಅತಿ ಹೆಚ್ಚಿನ ರೇಷ್ಮೆ ಉತ್ಪಾದಿಸುವ ರಾಜ್ಯ ಮೈಸೂರು. ಇದರ ಅಭಿ ವೃದ್ಧಿಗಾಗಿ ಇಟಲಿಯಿಂದ ವಾಷಿಂಗ್‌ಟನ್ ಮಾರಿ ಎಂಬ ತಜ್ಞರನ್ನು ಬರಮಾಡಿ ಕೊಂಡರು. ಚನ್ನಪಟ್ಟಣದಲ್ಲಿ ರೇಷ್ಮೆ ಫಾರಂ ಸ್ಥಾಪಿಸಿದರು. ರೇಷ್ಮೆ ಹುಳುಗಳಿಗೆ ಬರುವ ವ್ಯಾಧಿಗಳನ್ನು ತಡೆಗಟ್ಟುವುದು, ಉಪಶಮನ ವಿಧಾನಗಳ ಸಂಶೋಧನೆ ನಡೆಸುವುದು, ರೋಗರಹಿತ ಮೊಟ್ಟೆಗಳನ್ನು ಒದಗಿಸುವುದು, ಹಿಪ್ಪನೇರಳೆ ಸಸಿಗಳನ್ನು ಚೆನ್ನಾಗಿ ಕೃಷಿ ಮಾಡುವ ವಿಧಾನ ಇವೆಲ್ಲ ರೇಷ್ಮೆ ಫಾರಂನ ಹೊಣೆ ಆಯಿತು.

ಹೈನುಗಾರಿಕೆ, ಕುರಿ ಕೋಳಿ ಇವುಗಳನ್ನು ವೈಜ್ಞಾನಿಕವಾಗಿ ಅಭಿವೃದ್ಧಿಗೊಳಿಸಲು ತಜ್ಞ ಡೇವಿಸನ್ ಅವರ ನೆರವು ಪಡೆಯಲಾಯಿತು. ಆಸ್ಟ್ರೇಲಿಯದಿಂದ ಡಂಬ್ರ ಮತ್ತು ಮೆರಿನೋ ಟಗರುಕುರಿಗಳನ್ನು ತರಿಸಿದರು. ಬೆಂಗಳೂರಿನ ಸಮೀಪದ ಗೊಟ್ಟಿಗೆರೆ ಮತ್ತು ಹೆಸರುಘಟ್ಟದಲ್ಲಿ ಕುರಿ ಮತ್ತು ದನಗಳ ತಳಿ ಅಭಿವೃದ್ಧಿಪಡಿಸುವ ಕ್ರಮ ಕೈಗೊಳ್ಳಲಾಯಿತು. ಬೆಂಗಳೂರಿನ ಹವಾಗುಣ ಹಣ್ಣುಹಂಪಲು, ತರಕಾರಿ ಫಲಪುಷ್ಪ ಬೆಳೆಗೆ ಉತ್ತಮವಾದುದು. ಶಾಸ್ತ್ರೀಯವಾಗಿ ಇವುಗಳನ್ನು ಅಭಿವೃದ್ಧಿ

ಪಡಿಸಲು ಜರ್ಮನಿಯಿಂದ ತಜ್ಞ ಕ್ರಂಬಿಗಲ್ ಅವರನ್ನು ಆಹ್ವಾನಿಸಿ ಇಲಾಖೆಯ ಅಧಿಕಾರಿಯಾಗಿ ನೇಮಿಸಿಕೊಳ್ಳಲಾಯಿತು. ಟಿಪ್ಪುಸುಲ್ತಾನನ ಕಾಲದಲ್ಲಿ ಮೈವೆತ್ತ ಲಾಲ್‌ಬಾಗ್ ಕೆಂಪುತೋಟ ಸಸ್ಯಕಾಶಿ ಎಂದು ಜಗತ್ಪ್ರಸಿದ್ಧವಾಗಿ, ಇತ್ತ ಬನ್ನಿ, ಇಲ್ಲಿ ತಳಿರಿನ ತಂಗಾಳಿಯಲ್ಲಿ ಸ್ವಲ್ಪ ವಿಶ್ರಮಿಸಿ ಶಾಂತಿಸುಖ ಅನುಭವಿಸಿ ಎಂದು ಕರೆಯು ವಂತೆ ಮಾಡಿದವರು ಕ್ರಂಬಿಗಲ್. ಬೆಂಗಳೂರು ಮತ್ತು ಮೈಸೂರು ನಗರಗಳು ಉದ್ಯಾನವನಗಳ ನಗರಗಳೆಂಬ ಖ್ಯಾತಿ ಗಳಿಸಲು ಕಾರಣರಾದವರು ವಿದೇಶೀಯ ತಜ್ಞ ಕ್ರಂಬಿಗಲ್. ಬೆಂಗಳೂರಿನ ಸೇಬು, ದ್ರಾಕ್ಷಿ, ದಾಳಿಂಬೆ, ಸಮಶೀತೋಷ್ಣವಲಯದ ಕೋಸು, ಬೀಟ್‌ರೂಟ್, ಕ್ಯಾರೆಟ್, ಮೊದಲಾದ ತರಕಾರಿ; ಗುಲಾಬಿ, ಸೇವಂತಿ, ಸಂಪಿಗೆ, ಮಲ್ಲಿಗೆ, ಜಾಜಿ ಮೊದಲಾದ ಪುಷ್ಪಗಳಿಗೆ ತರುಲತೆಗಳಿಗೆ ಪ್ರಸಿದ್ಧವಾಗಿರಲು ಕ್ರಂಬಿಲ್ ಅವರ ನೇತೃತ್ವದಲ್ಲಿ ಸ್ಥಾಪಿತವಾದ ತೋಟಗಾರಿಕೆ ಇಲಾಖೆಯ ಸಾಹಸ ಪ್ರಯತ್ನಗಳು ಆಧಾರ.

ಸ್ವಾವಲಂಬನೆ, ಆತ್ಮಗೌರವ, ಆತ್ಮಸ್ಥೈರ್ಯ ಸ್ವಭಾವಗಳನ್ನು ನಮ್ಮ ಜನ ಬೆಳೆಸಿ ಕೊಳ್ಳಬೇಕು. ಎಲ್ಲಕ್ಕೂ ಸರ್ಕಾರದತ್ತ ನೋಡುವ ಕೈಚಾಚುವ ಪ್ರವೃತ್ತಿ ಬಿಡಬೇಕು. ಇದು ಅವರ ಅಭಿಲಾಷೆ. ಈ ಮನೋಧರ್ಮ ವೃದ್ಧಿಸಲು ಸಹಾಯವಾಗುವಂತೆ ಸಹಕಾರ ಸಂಘ, ಗ್ರಾಮ ಸಮಿತಿ, ವ್ಯವಸಾಯಾಭಿವೃದ್ಧಿ ಸಮಿತಿ ಸ್ಥಾಪಿತವಾದುವು. 'ಸಕಲ ಲೋಕ ಸನ್ಮಂಗಳಾನಿ ಭವಂತು' ಎಂದು ಪ್ರತಿದಿನ ಲೋಕಕಲ್ಯಾಣ ಬಯಸು ವುದು ಹಿಂದೂಗಳ ವಾಡಿಕೆ. ಮಂತ್ರದಿಂದ ಮಾವಿನ ಕಾಯಿ ಉದುರದು. ಮರ ಹತ್ತಿ ಕೀಳಬೇಕು, ಕಲ್ಲು ಬೀರಿ ಉರುಳಿಸಬೇಕು. ಸರ್ವರ ಕ್ಷೇಮಕ್ಕಾಗಿ ಸಾಮೂಹಿಕವಾಗಿ ದುಡಿಯುವ ಕ್ರಿಯಾತ್ಮಕ ಶಕ್ತಿ ಬೆಳೆಸಿಕೊಳ್ಳಬೇಕು. ಗ್ರಾಮಾಭಿವೃದ್ಧಿ ಯೋಜನೆ ಗಳನ್ನು ಆಯಾ ಗ್ರಾಮದವರೇ ಸಿದ್ಧಪಡಿಸಿಕೊಳ್ಳಬೇಕು. ಸೋಮವಾರದ ಉಚಿತ ಸೇವೆ ಸಲ್ಲಿಸಲು ಒಪ್ಪದ ಗ್ರಾಮಗಳಿಂದ ಕಡ್ಡಾಯದ ಸೇವಾ ತೆರಿಗೆ ವಿಧಿಸಬೇಕೆಂದು ಉಲ್ಲಸಿತ ಪ್ರಜಾಪ್ರತಿನಿಧಿ ಸಭಾ ಸದಸ್ಯರು ಸೂಚಿಸಿದರು. 1915ರ ಗ್ರಾಮಾಭಿವೃದ್ಧಿ ಯೋಜನೆಗೆ ಶಾಸನದ ಬೆಂಬಲ ನೀಡಬಯಸಿದರು ಅಧಿಕಾರಿಗಳು. ಸ್ವಪ್ರೇರಣೆಯಿಂದ ಸ್ವಇಚ್ಛೆಯಿಂದ ಯೋಜನೆಗಳು ಕಾರ್ಯಗತವಾಗಬೇಕು. ಬಲವಂತಿಕೆಯ ಕೆಲಸ ಬಾಳದು. ಉದ್ದೇಶ ಅರಿತು ಶ್ರಮಿಸಬೇಕು.

ಪ್ರಕೃತಿಯ ಕೃಪೆಗೆ ಪಾತ್ರವಾಗಿ, ಜಲಸಮೃದ್ಧವಾಗಿ, ಫಲವದ್ಭರಿತವಾಗಿ, ಜಲಪಾತ ಗಳಿಂದಲೂ, ಕಾಡುಮೇಡುಗಳಿಂದಲೂ ಶೋಭಿಸುವ ಸಂಸ್ಥಾನದ ಭಾಗವಾದ ಮಲೆ ನಾಡು ಭಯಂಕರ ಮಲೇರಿಯ ಪಿಡುಗು ಪೀಡಿತವಾಗಿ ಅಧಿಕಾರಿಗಳು ಅಲ್ಲಿಗೆ ಹೋಗಲು ಹೇಸುತ್ತಿದ್ದರು. ಅವು ಉಪೇಕ್ಷಿತ ವಿಭಾಗಗಳಾಗಿದ್ದುವು. ನಿಸರ್ಗದ ಕೊಡುಗೆ ಬಳಸಿಕೊಳ್ಳಲು 1914ರಲ್ಲಿ ಮಲೆನಾಡು ಅಭಿವೃದ್ಧಿ ಸಮಿತಿ ಸ್ಥಾಪಿಸಿದರು. ಗೇರುಸೊಪ್ಪೆ ಜಲಪಾತದಿಂದ ವಿದ್ಯುಚ್ಛಕ್ತಿ ಉತ್ಪಾದಿಸುವ ಸಮೀಕ್ಷೆ ನಡೆಯಿತು. ಮಹಾರಾಜರೂ, ಯುವರಾಜರೂ ಶಂಕರ ಭಗವತ್ಪಾದಾಚಾರ್ಯರಿಂದ ಸ್ಥಾಪಿತವಾದ

ಮಲೆನಾಡಿನ ಶಾರದೆಯ ಪೀಠವಾದ ಶೃಂಗೇರಿಗೆ ಹೋಗಿಬರುವಂತೆ ದಿವಾನ್ ವಿಶ್ವೇಶ್ವರಯ್ಯನವರು ಮಾಡಿದರು.

1949ರಲ್ಲಿ ವಿಶ್ವೇಶ್ವರಯ್ಯನವರು ಗ್ರಾಮ ಔದ್ಯೋಗೀಕರಣದ ಯೋಜನೆ ತಯಾರಿಸಿ ಭಾರತ ಸರ್ಕಾರದ ಅನುಮೋದನೆಗೆ ಒಪ್ಪಿಸಿದರು. ಕೇಂದ್ರ ಸರ್ಕಾರ ಇದನ್ನು ಅಚ್ಚು ಹಾಕಿಸಿ ರಾಜ್ಯ ಸರ್ಕಾರಗಳಿಗೆ ಕಳುಹಿಸಿತು. ಸರ್ಕಾರ 1951ರಲ್ಲಿ ಯೋಜನೆಯನ್ನು ಕಾರ್ಯಗತ ಮಾಡಲು ಸೂಕ್ತ ಕ್ರಮ ಕೈಗೊಂಡಿತು. ಐ.ಸಿ.ಎಸ್. ಪದವಿಯ ಅಧಿಕಾರಿಯನ್ನು ನೇಮಿಸಿತು. ಕೆ. ಚೆಂಗಲರಾಯ ರೆಡ್ಡಿಯವರು ಮೈಸೂರಿನ ಮುಖ್ಯ ಮಂತ್ರಿಗಳಾದ ಶೈಶವದಲ್ಲಿಯೇ ಎರಡು ಜಿಲ್ಲೆಗಳಲ್ಲಿ ಪ್ರಾಯೋಗಿಕವಾಗಿ ಯೋಜನೆಯನ್ನು ಜಾರಿಗೆ ತರಲಾಯಿತು. ದುಡಿಮೆಯ ಶಕ್ತಿ ಸಾಮರ್ಥ್ಯ ವೃದ್ಧಿಸಿ ವ್ಯಕ್ತಿ ಹಾಗೂ ಗ್ರಾಮ ಸಮೂಹದ ವರಮಾನ ಕೈಗಾರಿಕೆಯಿಂದ ಹೆಚ್ಚಿಸುವುದು ಮುಖ್ಯ ಉದ್ದೇಶ.

ಒದಗಬಹುದಾದ ಬಂಡವಾಳ ಮತ್ತು ಪ್ರದೇಶಗಳಿಗೆ ಹೊಂದಿಕೊಳ್ಳುವಂತೆ ಕೈಗಾರಿಕೆಗಳನ್ನು ಮೂರು ಮುಖ್ಯ ವಿಭಾಗಗಳಾಗಿ ವಿಂಗಡಿಸಿರುತ್ತಾರೆ. ಮೊದಲ ಶ್ರೇಣಿಯದು ಮೂಲ ಅಥವಾ ದೊಡ್ಡ ಕೈಗಾರಿಕೆ; ಎರಡನೆಯದು ಮಧ್ಯಮ ಶ್ರೇಣಿಯದು; ಮೂರನೆಯದು ಸಣ್ಣ ಅಥವಾ ಗ್ರಾಮೋದ್ಯೋಗ. ಗಣಿಯಿಂದ ಅದುರು ತೆಗೆದು ಲೋಹವಾಗಿ ಪರಿವರ್ತಿಸುವುದು; ಕಬ್ಬಿಣ, ಉಕ್ಕು ತಯಾರಿಕೆ; ಎಂಜಿನ್, ಪಂಪ್, ಮತ್ತು ಇತರ ಯಂತ್ರಗಳು, ರೈಲುಗಾಡಿ ಮತ್ತು ಇದರ ಉಪಕರಣಗಳು; ಮದ್ದು ಗುಂಡು ಮತ್ತು ಇತರ ಯುದ್ಧೋಪಕರಣಗಳು; ಮೋಟಾರು, ವಿಮಾನ, ಮತ್ತು ಜಹಜು; ವಿದ್ಯುದುತ್ಪಾದನೆಯ ಯಂತ್ರಸಾಧನಗಳು ಮತ್ತು ಉಪಕರಣಗಳು; ರಾಸಾಯನಿಕ ವಸ್ತುಗಳು; ವ್ಯವಸಾಯದ ನೇಗಿಲು, ಗುಳ ಮೊದಲಾದ ಸಾಧನಗಳು; ಹತ್ತಿ ಉಣ್ಣೆ ಸೆಣಬು ಇವುಗಳಲ್ಲಿ ಬಳಕೆಯಾಗುವ ಯಂತ್ರಗಳು ಇವು ಮೂಲ ಕೈಗಾರಿಕೆಯ ವರ್ಗಕ್ಕೆ ಸೇರುತ್ತವೆ. ಮೂಲ ಉದ್ಯಮಗಳಿಗೆ ಅಧಿಕ ಧನ, ಅರಿತ ನುರಿತ ಮಾರ್ಗದರ್ಶನ ಮೇಲ್ವಿಚಾರಣೆ, ಸರ್ಕಾರದ ಸಹಾಯ ಅಗತ್ಯ. ಅನುಭವಿ ಪಾಶ್ಚಾತ್ಯ ತಜ್ಞರ ನೆರವು ಶೈಶವಾವಸ್ಥೆಯಲ್ಲಿ ಅಗತ್ಯವಾದೀತು.

ಕಬ್ಬಿಣ ಕರಗಿಸುವ ಕುಲುಮೆ; ಉಕ್ಕಿನ ಸಾಮಾನು, ಲೋಹದ ಪದಾರ್ಥಗಳು; ಬಣ್ಣ ಮತ್ತು ರಾಸಾಯನಿಕ ವಸ್ತುಗಳು; ಕಾಗದ, ಸಕ್ಕರೆ, ಬೆಂಕಿಕಡ್ಡಿ, ಸಾಬೂನು, ಮೇಣದ ಬತ್ತಿ, ರಬ್ಬರ್ ಮತ್ತು ಚರ್ಮದ ಸಾಮಾನುಗಳು; ಫೋಟೋ ಮತ್ತು ಮುದ್ರಣ ಸಾಮಗ್ರಿಗಳು; ಗಡಿಯಾರ, ಟೈಪ್‌ರೈಟರ್ (ಬೆರಳಚ್ಚು), ಮೊದಲಾದುವು ಮಧ್ಯಮ ವರ್ಗಕ್ಕೆ ಸೇರಿದುವು. ಮೂರನೆಯ ವರ್ಗಕ್ಕೆ ಸೇರಿದ್ದು ಗ್ರಾಮೋದ್ಯೋಗ ಮತ್ತು ಗೃಹಕೈಗಾರಿಕೆ. ಸ್ಥಳೀಯ ಸಂಸ್ಥೆ, ಗ್ರಾಮ ಪಂಚಾಯತಿ ಮತ್ತು ಖಾಸಗಿ ವ್ಯಕ್ತಿಗಳ ಸಹಾಯದಿಂದ ಇವನ್ನು ಹೆಚ್ಚಿಸಬಹುದು. ನೂಲುವುದು,

ಕೈಮಗ್ಗ, ನೇಯ್ಗೆ; ಕಂಬಳಿ, ಜಮಖಾನ, ಸೀರೆ ನೇಯುವುದು; ಬತ್ತ ಕುಟ್ಟುವ, ಹಿಟ್ಟು ಬೀಸುವ, ಎಣ್ಣೆ ಇಳಿಸುವ ಗಿರಣಿಗಳ ಸ್ಥಾಪನೆ; ಬೀಡಿ, ಸಿಗರೇಟು, ಗಂಧದ ಕಡ್ಡಿ; ಚಾಪೆ ಹೆಣೆಯುವುದು; ಪೆನ್ಸಿಲ್, ಸಾಬೂನು, ಗುಂಡಿ, ಗಾಜಿನ ಸಾಮಾನು, ಮುದ್ರಣ, ಬೈಂಡಿಂಗ್ ಮೊದಲಾದುವು ಮೂರನೆಯ ವರ್ಗಕ್ಕೆ ಸೇರಿದುವು. ಈ ಶ್ರೇಣಿಯ ಉದ್ಯಮಕ್ಕೆ ಅಧಿಕ ಬಂಡವಾಳ ಅನವಶ್ಯಕ. ಇದೇನೂ ಪರಿಪೂರ್ಣ ಪಟ್ಟಿಯಲ್ಲ. ಭಾರತ ಕೈಗೊಳ್ಳಬಹುದಾದ ಕೈಗಾರಿಕೆಗಳನ್ನು ಉದಹರಿಸಲು, ಸಹಾಯಕವಾಗಲು ಕೊಟ್ಟ ಪಟ್ಟಿ. ಮೇಲ್ಕಾಣಿಸಿರುವ ಪಟ್ಟಿಯಲ್ಲಿ ಬಹುತೇಕವನ್ನು ವಿದೇಶಗಳಿಂದ ಭಾರತ ಆಮದು ಮಾಡಿಕೊಳ್ಳುತ್ತಿದ್ದ ಕಾಲವದು. ಈ ಬಗೆಯ ಯಂತ್ರೋಪಕರಣ ಗಳನ್ನು, ಸಾಮಗ್ರಿಗಳನ್ನು ಭಾರತೀಯರು ಉತ್ಪಾದಿಸಲಾರರು ಎಂಬ ಭಾವನೆ ಬಲ ವಾಗಿದ್ದ ಕಾಲ. ಬ್ರಿಟಿಷ್ ಪ್ರಭುತ್ವ ಉದ್ಯಮದ ಬೆಳವಣಿಗೆಗೆ ಪ್ರೋತ್ಸಾಹ ನೀಡದೆ ಅಡ್ಡಿ ಆತಂಕ ಒಡ್ಡುತ್ತಿದ್ದ ಕಾಲ. ಇಂಥ ನಿರುತ್ಸಾಹದ ವಾತಾವರಣದಲ್ಲಿ ಭಾರತೀ ಯರು ಬುದ್ಧಿಚಾತುರ್ಯದಲ್ಲಿ ಯಾರಿಗೂ ಕಡೆ ಇಲ್ಲ. ತಕ್ಕ ಶಿಕ್ಷಣ, ಯೋಗ್ಯ ವಾತಾವರಣ, ಅಗತ್ಯ ಸೌಲಭ್ಯ ಕಲ್ಪಿಸಿ ಕೊಟ್ಟಲ್ಲಿ ನಮ್ಮವರು ವಿದೇಶೀಯರನ್ನೂ ಮೀರಿಸಬಲ್ಲರು. ಪ್ರೋತ್ಸಾಹದ ಅಭಾವದಿಂದ ಸುಪ್ತ ಕ್ರಿಯಾ ಸಾಮರ್ಥ್ಯ ವಿಕಸಿತ ಗೊಂಡು ವೃದ್ಧಿಸಲು ಸಾಧ್ಯವಿಲ್ಲದಾಗಿದೆ. ಇದು ವಿಶ್ವೇಶ್ವರಯ್ಯನವರ ವಿಶ್ವಾಸ. ವಿದೇಶಗಳಿಗೆ ಹೋಗಿ ಬಂದವರ ಅಭಿಪ್ರಾಯ ಇದೇ ಆಗಿದೆ. ಏಕೋಭಾವದಿಂದ ಕಲೆತು ಕೆಲಸ ಮಾಡುವುದನ್ನು ಕಲಿಯಬೇಕಾಗಿದೆ.

ಪ್ರಾಯೋಗಿಕವಾಗಿ ಎರಡು ಜಿಲ್ಲೆಗಳಲ್ಲಿ ಕೈಗೊಂಡ ಯೋಜನೆ ಯಶಸ್ವಿಯಾದುದರಿಂದ ಇಡೀ ಸಂಸ್ಥಾನಕ್ಕೇ ಯೋಜನೆಯನ್ನು ವಿಸ್ತರಿಸಲಾಯಿತು. ಯೋಜನೆ ಕಾರ್ಯಗತ ಗೊಳಿಸುವ ಪ್ರಯತ್ನದಲ್ಲಿ ಮಾರ್ಗದರ್ಶನ ನೀಡಲು, ಮೇಲ್ವಿಚಾರಣೆ ಮಾಡಲು ತಾನು ಸಿದ್ಧನೆಂದು ಸರ್ಕಾರಕ್ಕೆ ಬರೆದು ತಿಳಿಸಿದರು. ತೊಂಭತ್ತೆರಡು ವಯಸ್ಸಿನ ವೃದ್ಧನಿಗೆ ಅದೆಷ್ಟು ಅದಮ್ಯ ಉತ್ಸಾಹ. ಅಧಿಕಾರಿಗಳು ಮತ್ತು ಮಂತ್ರಿಗಳ ಜೊತೆ ಮೋಟಾರಿನಲ್ಲಿ ಕುಳಿತು ಕಾರ್ಯ ನಡೆಯುತ್ತಿರುವುದನ್ನು ನೋಡಲು ಹೋಗುತ್ತಿದ್ದರು. ಎಂಭತ್ತು ಮೈಲಿ ಪ್ರವಾಸ ಕೈಗೊಂಡದ್ದೂ ಉಂಟು. ಅಧಿಕಾರಿಗಳ ವರದಿಗಳಿಂದ ತೃಪ್ತರಾಗದೆ ಗ್ರಾಮದ ಜನರನ್ನು ಪ್ರಶ್ನಿಸಿ ಲೋಪದೋಷಗಳ ಅರಿವು ಮಾಡಿ ಕೊಂಡು ಸ್ಥಳದಲ್ಲೇ ಸೂಕ್ತ ಸಲಹೆ ನೀಡುತ್ತಿದ್ದರು. ನಿರ್ವಹಿಸುತ್ತಿದ್ದ ಕಾರ್ಯಕ್ಕೆ ಗೌರವ ಸಂಭಾವನೆ ಪಡೆಯಲು ಒಪ್ಪಲಿಲ್ಲ. ಅವರ ಸಲಹೆಯಂತೆ ಕೈಗಾರಿಕೆಗಳಿಗೆ ಧನ ಸಹಾಯ ನೀಡಲು ಪ್ರತ್ಯೇಕ ಬ್ಯಾಂಕ್ ಸ್ಥಾಪಿತವಾಯಿತು. 1960ರಲ್ಲಿ ಈ ಬ್ಯಾಂಕಿನ ಷೇರು ಬಂಡವಾಳ ರೂ. 119.40 ಲಕ್ಷ ಆಗಿತ್ತು. 26,486 ಉದ್ಯಮಿಗಳು 137.51 ಲಕ್ಷ ಸಾಲ ಪಡೆದಿದ್ದರು.

ಈ ಕಾರ್ಯದಲ್ಲಿ ತತ್ಪರರಾಗಿದ್ದಾಗ ವಿಶ್ವೇಶ್ವರಯ್ಯನವರ ಋಜುತ್ವ ನಿದರ್ಶಿಸುವ ಘಟನೆಯೊಂದನ್ನು ಉಲ್ಲೇಖಿಸುವುದು ಅಪ್ರಕೃತವಾಗದು. ಒಮ್ಮೆ ಒಂದು ಗ್ರಾಮಕ್ಕೆ

ತಮ್ಮ ಕಾರ್ಯದರ್ಶಿ ಮತ್ತು ಸಚಿವರೊಡನೆ ಹೋಗಿದ್ದರು. ಮಾನ್ಯ ಅತಿಥಿಗಳ ಗೌರವಾರ್ಥ ಭೋಜನದ ವ್ಯವಸ್ಥೆ ಮಾಡಿದ್ದರು. ಭೋಜನ ಮುಗಿಯಿತು. ಮೇಜಿನ ಮೇಲೆ ವ್ಯಂಜನಗಳ ಪಟ್ಟಿ ಮತ್ತು ಬೆಲೆಸೂಚಿ ಇತ್ತು. ತಮ್ಮ ಕಿಸೆಯಿಂದ ಹತ್ತು ರೂಪಾಯಿ ನೋಟು ತೆಗೆದು ತನ್ನ ಮತ್ತು ತನ್ನ ಕಾರ್ಯದರ್ಶಿಯ ಭೋಜನದ ವೆಚ್ಚ ವೆಂದು ಮೇಜಿನ ಮೇಲಿಟ್ಟರು. ಅತಿಥಿಗಳಿಂದ ಹಣ ತೆಗೆದುಕೊಳ್ಳುವುದಿಲ್ಲವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಮಂತ್ರಿಗಳು ಹಣ ಕೊಡುವ ಅಭ್ಯಾಸ ಅರಿಯರು. ಆದರೂ ಹಿರಿಯರ ಮಾರ್ಗದರ್ಶನದಿಂದ ಪೇಚಿಗೆ ಸಿಕ್ಕಿಕೊಂಡು ಹಣ ಕೊಡಬೇಕಾ ಯಿತು.

## 11. ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

ಕರ್ನಾಟಕದ ಕೊಡಚಾದ್ರಿ ಪರ್ವತ ಶ್ರೇಣಿಯ ಬಾಬಾಬುಡನ್ ಬೆಟ್ಟದಲ್ಲಿ ಉತ್ತಮ ದರ್ಜೆಯ ಕಬ್ಬಿಣದ ಅದಿರು ದೊರೆಯುವುದು ಸರ್ವವಿದಿತ. ಕಬ್ಬಿಣದ ಅದಿರಿಗೆ ನೀರು ಬೆರಸಿ ಕೆಸರಿನ ರೊಚ್ಚೆಯಾಗಿ ಮಾಡಿ ಬೆಟ್ಟದ ಮೇಲಿಂದ ದೊಡ್ಡ ನಳಿಗೆಗಳ ಮೂಲಕ ಮಂಗಳೂರು ಬಂದರಿಗೆ ಸಾಗಿಸಿ, ಜಹಜುಗಳಲ್ಲಿ ತುಂಬಿ ವಿದೇಶಗಳಿಗೆ ರವಾನಿಸಲಾಗುತ್ತಿದೆ. ಅದಿರನ್ನು ಉಂಡೆಗಳಾಗಿ ಮಾಡಿ ಕಳುಹಿಸುವ ಯೋಜನೆಯೂ ಇದೆ. ಇರಾನ್ ದೇಶ ಈ ಯೋಜನೆಗೆ ಧನಸಹಾಯ ನೀಡಿದೆ. ಇಲ್ಲಿ ಹೊರ ತೆಗೆಯುವ ಅಷ್ಟೂ ಅದಿರನ್ನು ಇರಾನ್ ಕೊಳ್ಳುವುದಾಗಿ ತಿಳಿಸಿತ್ತು. ಆದರೆ ಇರಾಕ್, ಇರಾನ್‌ಗಳ ನಡುವೆ ತಲೆದೋರಿದ ಯುದ್ಧದ ಪರಿಣಾಮವಾಗಿ ಅಧಿಕ ಅದಿರು ಇರಾನ್ ಕೊಳ್ಳುತ್ತಿಲ್ಲ. ಜಪಾನ್ ಮತ್ತು ಇತರ ರಾಷ್ಟ್ರಗಳು ಅದಿರು ಕೊಳ್ಳುತ್ತಿವೆ. ಇದು ಇಂದಿನ ಸ್ಥಿತಿ.

ಬಾಬಾಬುಡನ್‌ಗಿರಿ, ಕಲ್ಲತ್‌ಗಿರಿ, ಕುದುರೆಮುಖ ಇವು ಈ ಪರ್ವತ ಶ್ರೇಣಿಯ ಉನ್ನತ ಶಿಖರಗಳು. ಈಗ ಅದಿರು ತೆಗೆಯುತ್ತಿರುವ ಕಾರ್ಯ ಕುದುರೆಮುಖ ಯೋಜನೆ ಎಂದೇ ಪ್ರಸಿದ್ಧವಾಗಿದೆ. ಬಾಬಾಬುಡನ್ ಕಾಫಿಗೂ ಪ್ರಸಿದ್ಧವಾದುದು. ಕಾಫಿ ಬೆಳೆಯ ವ್ಯವಸಾಯ ಭಾರತದಲ್ಲಿ ಮೊಟ್ಟಮೊದಲು ಪ್ರಾರಂಭವಾದುದು ಇಲ್ಲಿಯೇ. ಈ ಬೆಟ್ಟ ದತ್ತಾತ್ರೇಯ ಪೀಠವೆಂದೂ ಪ್ರಸಿದ್ಧವಾಗಿದೆ. ಇಸ್ಲಾಂ ಸಂತರ ಗೋರಿಗಳೂ, ಹಿಂದೂ ದೇವಾಲಯುಗಳೂ ಅಕ್ಕಪಕ್ಕದಲ್ಲಿದ್ದು ಹಿಂದೂ–ಮುಸ್ಲಿಂ ಸೌಹಾರ್ದದ ಕುರುಹಾಗಿ ಉಳಿದಿವೆ. ಬೆಟ್ಟದ ಮೇಲೆ ಕೆಮ್ಮಣ್ಣುಗುಂಡಿ ಬೇಸಿಗೆಯ ವಿಹಾರಸ್ಥಾನವಿದೆ. ಬೆಟ್ಟದ ತಪ್ಪಲಿನಲ್ಲಿ ಭದ್ರಾವತಿ ಕಬ್ಬಿಣ ಕಾರ್ಖಾನೆ ಇದೆ. ಒಂದು ಕಾಲಕ್ಕೆ ಭದ್ರಾವತಿ ಬೆಂಕಿಪುರ ಎನಿಸಿಕೊಂಡಿತ್ತು. ಹಿಂದಿನ ಕಾಲದಿಂದಲೂ ಅಲ್ಪ ಪ್ರಮಾಣದಲ್ಲಿ ಅದಿರು ಕರಗಿಸಿ ಕಬ್ಬಿಣವಾಗಿ ಪರಿವರ್ತಿಸುತ್ತಿದ್ದರು. ಬೆಂಕಿ ಉರಿಯುತ್ತಿದ್ದುದಕ್ಕಾಗಿ ಬೆಂಕಿಪುರ ಎನಿಸಿಕೊಂಡಿತು. ಭದ್ರಾನದಿ ಸಮೀಪದಲ್ಲಿ ಹರಿಯುವುದರಿಂದ ಭದ್ರಾವತಿ ಎಂಬ ಹೆಸರು ಪಡೆಯಿತು. ಅನಂತರ ಇದು ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಆಯಿತು. ಕಾರ್ಖಾನೆಯ ಮೂಲಪುರುಷರಾದ ವಿಶ್ವೇಶ್ವರಯ್ಯನವರ ಸೂಕ್ತ ಹೆಸರು ಗಳಿಸಿ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಎಂಬ ಸಾರ್ಥಕ ಹೆಸರು ಗಳಿಸಿದೆ.

ಅದಿರನ್ನು ಕಬ್ಬಿಣವಾಗಿ ಪರಿವರ್ತಿಸಲು ಕಲ್ಲಿದ್ದಲು ಮತ್ತು ಸುಣ್ಣಕಲ್ಲು ಅಗತ್ಯ. ಸಮೀಪದಲ್ಲಿ ಎರಡೂ ದುರ್ಲಭ. ದೂರದಿಂದ ತರಿಸಿ ಬಳಸುವುದು ಲಾಭದಾಯಕ

ವಲ್ಲ. ಹೀಗಾಗಿ ಅದಿರನ್ನು ದೊಡ್ಡ ಪ್ರಮಾಣದಲ್ಲಿ ಬಳಸಿಕೊಳ್ಳುವ ಪ್ರಯತ್ನ ನಡೆಯಲಿಲ್ಲ. ಧಾರಾಕಾರವಾಗಿ ಮಳೆ ಸುರಿಯುವ ಈ ಪ್ರದೇಶ ದಟ್ಟ ಅರಣ್ಯದಿಂದ ಆವೃತವಾಗಿದೆ. ದೊಡ್ಡ ಮರಗಳಿಂದ ತುಂಬಿದೆ. ಮರ ಕಡಿದು ಇದ್ದಿಲಾಗಿ ಪರಿವರ್ತಿಸುವುದು ಹಳೆಯ ಕಾಲದಿಂದ ನಡೆದು ಬಂದಿರುವ ಉದ್ಯಮ. ದೊಡ್ಡ ಪ್ರಮಾಣದಲ್ಲಿ ಮರ ಇದ್ದಿಲು ತಯಾರಿಸಿ ಬಳಸಬಹುದಲ್ಲ ಎನಿಸಿತು ವಿಶ್ವೇಶ್ವರಯ್ಯ ನವರಿಗೆ. ಸ್ವೀಡನ್, ಜರ್ಮನಿ, ಜಪಾನ್ ಈ ದೇಶಗಳಲ್ಲಿ ಈ ವಿಧಾನ ಬಳಕೆಯಲ್ಲಿರುವುದನ್ನು ಅಯ್ಯನವರು ಗಮನಿಸಿದ್ದರು. ಮಣ್ಣು ಮುಚ್ಚಿ ಇದ್ದಿಲಾಗಿ ಪರಿವರ್ತಿಸುವುದು ಭಾರತ ಅನುಸರಿಸುತ್ತಿದ್ದ ಪದ್ಧತಿ. ಮರವನ್ನು ಇದ್ದಿಲಾಗಿ ರೂಪಿಸುವಾಗ ಕೆಲವು ಉಪಪದಾರ್ಥಗಳು ಉತ್ಪನ್ನವಾಗುತ್ತವೆ. ಇಲ್ಲಿ ಅನುಸರಿಸುತ್ತಿದ್ದುದು ಅವೈಜ್ಞಾನಿಕ ಪದ್ಧತಿ. ಈ ಪದ್ಧತಿಯಲ್ಲಿ ಬೆಲೆಬಾಳುವ ಉಪಉತ್ಪನ್ನಗಳನ್ನು ಶೇಖರಿಸಲು ಸಾಧ್ಯವಾಗದು. ಕಬ್ಬಿಣದ ದೊಡ್ಡ ಭಟ್ಟಿಗಳನ್ನು ಬಳಸಿ ಇದ್ದಿಲು ತಯಾರಿಸಿದರೆ ಉಪಪದಾರ್ಥಗಳನ್ನು ಸಂಗ್ರಹಿಸಬಹುದು. ಜಪಾನ್, ಸ್ವೀಡನ್ ಈ ದೇಶಗಳು ಅನುಸರಿಸುತ್ತಿದ್ದುದು ಇದೇ ವಿಧಾನ. ನಾವೂ ಇದೇ ಪದ್ಧತಿ ಅನುಸರಿಸಬಹುದು. ಹೀಗೆಂದು ಯೋಚಿಸಿದ್ದೇ ತಡ ಯೋಜನೆ ಸಿದ್ಧವಾಯಿತು.

ವಿಶ್ವೇಶ್ವರಯ್ಯನವರು ತಯಾರಿಸಿದ ಯೋಜನೆಯ ಪರಿಶೀಲನೆ 1915–16ರಲ್ಲಿ ಮೊದಲಾಯಿತು. ಜಂಷೇದ್‌ಪುರದಲ್ಲಿ ಭಾರಿ ಕಬ್ಬಿಣ ಮತ್ತು ಉಕ್ಕು ತಯಾರಿಸುವ ಸುಪ್ರಸಿದ್ಧ ಟಾಟಾ ಕಂಪನಿ ಇದೆ. ಸಿ. ಪಿ. ಪೆರಿನ್ ಇದರ ಸಲಹೆಗಾರ. ಅವರಿಗೆ ತಮ್ಮ ಯೋಜನೆ ಪರಿಶೀಲನೆಗಾಗಿ ಕಳುಹಿಸಲಾಯಿತು. ಯೋಜನೆ ಅವರ ಒಪ್ಪಿಗೆ ಪಡೆಯಿತು. ವಿವರವಾದ ಯೋಜನೆಯ ಮುಖ್ಯಾಂಶಗಳು ಹೀಗಿವೆ: 756 ಚದರ ಮೈಲಿ ವಿಸ್ತೀರ್ಣದ ಕಾಡಿನಿಂದ ಮರಗಳನ್ನು ಟ್ರಾಂ ಮತ್ತು ರೈಲುಗಳ ಮೂಲಕ ಭದ್ರಾವತಿಗೆ ಸಾಗಿಸುವುದು. ಟ್ರಾಂ ಮತ್ತು ರೈಲು ಹಳಿಗಳಿಗೆ, ಎಂಜಿನ್ ಮತ್ತು ಸರಕು ಸಾಗಾಣಿಕೆ ವ್ಯಾಗನ್, ಬಿಡಿಭಾಗ ಇವೆಲ್ಲಕ್ಕೂ ಸೇರಿ ಆಗುವ ಅಂದಾಜು ವೆಚ್ಚ ರೂ. 20,40,500. ಊದುಕುಲುಮೆ, ಇದ್ದಿಲು ತಯಾರಿಸುವ ಭಟ್ಟಿಗಳು, ಉಪಪದಾರ್ಥಗಳ ತಯಾರಿಕೆಗೆ, ಕಾರ್ಬೈಡ್ ಅನಿಲ ತಯಾರಿಸುವ ಯಂತ್ರೋಪಕರಣಗಳ ವೆಚ್ಚ ರೂ. 43,19,340. ಒಟ್ಟು ಮೂಲ ವೆಚ್ಚ ರೂ. 63,59,840. 73,000 ಟನ್ ಮರ ಸುಡುವುದರಿಂದ 30,000 ಟನ್ ಅದಿರನ್ನು ಕಬ್ಬಿಣವಾಗಿ ಪರಿವರ್ತಿಸಬಹುದು. ಚಾಲ್ತಿ ವೆಚ್ಚ ಇದರಲ್ಲಿ ಸೇರಿಲ್ಲ. ಬೀಡು ಕಬ್ಬಿಣ ಮತ್ತು ಉಪವಸ್ತುಗಳಿಂದ ಬರುವ ಆದಾಯ ರೂ. 15,98,726. ಈ ಯೋಜನೆಯನ್ನು ಆದಾಯ ವೆಚ್ಚದ ವಿವರವಾದ ಅಂಕಿಸಂಖ್ಯೆಗಳೊಡನೆ, ಮತ್ತು ಪೆರಿನ್ ಅಭಿಪ್ರಾಯದೊಡನೆ ಹಲವಾರು ತಜ್ಞರ ಅವಗಾಹನೆಗೆ ಕಳುಹಿಸಿ ಕೊಡಲಾಯಿತು. ತಜ್ಞರಿಂದ ಏಕಾಭಿಪ್ರಾಯ ನಿರೀಕ್ಷಿಸಲಾದೀತೆ? ನಿರೀಕ್ಷಿಸುವ ಆದಾಯ ಲಾಭಾಂಶಗಳಲ್ಲಿ ಭಿನ್ನತೆ ತೋರಿಬಂದರೂ, ಇದು ಉತ್ತಮ ಯೋಜನೆ, ಭವಿಷ್ಯ ಆಶಾದಾಯಕ ಎಂಬ ಏಕಮುಖ ಅಭಿಮತ ದೊರೆಯಿತು.

ತಜ್ಞರಿಂದ ಭಿನ್ನ ಅಭಿಪ್ರಾಯಗಳು ತಲೆದೋರಿದುವು. ಮೂಲ ಬಂಡವಾಳ ಅಂದಾಜಿಗಿಂತ ಇಪ್ಪತ್ತು ಲಕ್ಷ ಅಧಿಕವಾದೀತು ಎಂದು ಒಬ್ಬ ತಜ್ಞ. ಲಾಭಾಂಶ 12ರಿಂದ 16 ಆದೀತು ಎಂದು ಹಲವರ ಎಣಿಕೆ. ಇಲ್ಲಿ ಎಂಟರ ಮೇಲೆ ಬರಲಾರದೆಂದು ಆರ್ಥಿಕ ತಜ್ಞರ ಅಭಿಪ್ರಾಯ. ಕನ್ನಂಬಾಡಿ ಕಟ್ಟೆ ಕಟ್ಟಲು ವಿರೋಧಿಸಿದ್ದ ಆರ್ಥಿಕ ವಿಭಾಗದ ಕಾರ್ಯದರ್ಶಿ ಚಕ್ರವರ್ತಿ ಅವರೂ ಯೋಜನೆ 12ರಷ್ಟು ಲಾಭಾಂಶ ನೀಡ ಬಲ್ಲುದೆಂದರು. ಇದಕ್ಕಾಗಿ ಸರ್ಕಾರ ಸಾಲ ಎತ್ತಬೇಕಾದ್ದಿಲ್ಲ. ಉಳಿತಾಯ ನಿಧಿ ಮತ್ತು ಬರುವ ಲಾಭಾಂಶದಿಂದ ಬಂಡವಾಳ ಸರಿದೂಗಿಸಬಹುದು ಎಂದರು. ಸಾಮಾನ್ಯ ವಾಗಿ ನೂತನ ಯೋಜನೆಗಳಿಗೆ ಕೊಕ್ಕೆ ಹಾಕುವವರು ಆರ್ಥಿಕ ಇಲಾಖೆಯವರು. ಇಲಾಖೆಯ ಅಭಿಮತ ಅನುಕೂಲವಾಗಿದ್ದುದು ವಿಶ್ವೇಶ್ವರಯ್ಯನವರ ಉತ್ಸಾಹ ಇಮ್ಮಡಿ ಸಿತು. ಭದ್ರಾವತಿಗಿಂತ ಲಕ್ಕವಳ್ಳಿ ಸೂಕ್ತ ಸ್ಥಳ. ಇದರಿಂದ ಸಾಗಾಣಿಕೆ ವೆಚ್ಚ ಕಡಿಮೆ ಆದೀತು ಎಂದು ಅವರ ಅಭಿಮತ. ಉತ್ತಮ ದರ್ಜೆಯ ಸುಣ್ಣಕಲ್ಲು ಸಮೀಪದಲ್ಲಿ ದೊರೆಯದು. ಆದಕಾರಣ ಕ್ಯಾಲ್ಸಿಯಂ ಕಾರ್‌ಬೈಡ್ ಉತ್ಪಾದನೆ ಬೇಡ ಎಂದರು ಮತ್ತೆ ಕೆಲವರು. ಸಂಸ್ಥಾನದ ವಿಶೇಷ ಆರ್ಥಿಕ ತಜ್ಞ ಬಂಡವಾಳ ಒಂದು ಕೋಟಿ ಬೇಕು ಎಂದರು. ಜಂಷೇಡ್‌ಪುರದ ಕಾರ್ಖಾನೆ ಹೊರತು ಇಷ್ಟು ದೊಡ್ಡ ಪ್ರಮಾಣದಲ್ಲಿ ಕಬ್ಬಿಣ ಎಲ್ಲೂ ತಯಾರಾಗುತ್ತಿಲ್ಲ. ಅದರಲ್ಲೂ ಮರದ ಇದ್ದಿಲಿನಿಂದ ಅದಿರು ಕರಗಿಸುವ ಕಾರ್ಯ ಭಾರತದಲ್ಲಿ ಎಲ್ಲೂ ನಡೆಯುತ್ತಿಲ್ಲ. ಜಪಾನಿನಲ್ಲಿ ಸಣ್ಣ ಪ್ರಮಾಣ ದಲ್ಲಿ ಈ ಬಗೆಯ ಕಾರ್ಯವಿಧಾನ ಜಾರಿಯಲ್ಲಿ ಮಾತ್ರ ಇದೆ. ಈ ಯೋಜನೆ ಯಶಸ್ವಿ ಆದೀತೆ? ಅಗ್ನಿದೇವನಿಗೆ ಅರ್ಪಿಸಿದ ಹೋಮ ಆದೀತೆ? ಸಂಶಯಾತ್ಮರಿಗೆ ಅಭಾವ ಇರಲಿಲ್ಲ.

ಆಲ್ಬಿಯನ್ ಬ್ಯಾನರ್ಜಿ ಇಂಡಿಯನ್ ಸಿವಿಲ್ ಸರ್ವಿಸ್ಸಿನ ಅಧಿಕಾರಿ. ಮೈಸೂರು ಮಂತ್ರಿಸಂಪುಟದ ದ್ವಿತೀಯ ಸದಸ್ಯ. ಇದೇ ಕಾಲಕ್ಕೆ ಪ್ರಥಮ ವಿಶ್ವಸಂಗ್ರಾಮ ಭಯಂಕರ ಭರದಿಂದ ಸಾಗುತ್ತಿತ್ತು. ಹದಗೆಟ್ಟ ಈ ವಾತಾವರಣದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಿಂದ ಯಂತ್ರಸಾಧನಗಳನ್ನು ತರಿಸಿಕೊಳ್ಳಲು ಸಾಧ್ಯವಾಗದು. ಬೆಲೆಯೂ ಹೆಚ್ಚಿದೆ. ಯುದ್ಧ ನಿಂತರೆ ಯಂತ್ರಗಳನ್ನು ಆಮದು ಮಾಡಿಕೊಂಡು ಕೆಲಸ ಪ್ರಾರಂಭಿಸ ಬಹುದು. ಮನಸ್ವೀ ಮರ ಕಡಿಯುವುದು ಅರಣ್ಯ ರಕ್ಷಣೆಯ ನಿಬಂಧನೆಗಳಿಗೆ ವಿರೋಧವಾದುದು. ಗಣಿ ಮತ್ತು ಭೂಗರ್ಭ ಇಲಾಖೆಯ ಡೈರೆಕ್ಟರ್ ಡಾಕ್ಟರ್ ಸ್ಮಿತ್ ಅವರು ಕಾರ್ಖಾನೆಯನ್ನು ಸರ್ಕಾರ ನಡೆಸುವುದು ಸೂಕ್ತವಲ್ಲ. ಖಾಸಗಿ ಕಂಪೆನಿಗೆ ಬಿಡಿ. ಇಂಗ್ಲೆಂಡಿನ ವರ್ಕಿಂಗ್‌ಟನ್ ಕಬ್ಬಿಣ ಕಾರ್ಖಾನೆಯೊಡನೆ ಒಪ್ಪಂದ ಮಾಡಿಕೊಳ್ಳುವುದು ಉಚಿತ ಎಂದರು.

ಮೇಲ್ಕಾಣಿಸಿರುವ ಅಂದಾಜು ಪೆರಿನ್ ಅವರಿಂದ ಸಿದ್ಧಗೊಳಿಸಲ್ಪಟ್ಟದ್ದು. ಇದನ್ನು ಸರ್ಕಾರ ಒಪ್ಪಿತು. ಅಂದಾಜಿಗಿಂತ ವೆಚ್ಚ ಅಧಿಕವಾದೀತು. ಇದೂ ಸರ್ಕಾರಕ್ಕೆ ತಿಳಿಯದೇ ಇರಲಿಲ್ಲ. ಯುದ್ಧದ ದೆಸೆಯಿಂದ ಯಂತ್ರೋಪಕರಣಗಳ ಬೆಲೆ ಏರೀತು.

ಆದರೆ ಇದನ್ನು ಸರಿದೂಗಿಸಲು ಕಬ್ಬಿಣದ ಬೆಲೆಯೂ ಏರು ಧೋರಣೆಯ ದಾರಿ ಹಿಡಿದಿದೆ. ಯುದ್ಧಾಂತ್ಯದಲ್ಲೂ ಕೆಲಕಾಲ ಏರುಮಟ್ಟದಲ್ಲೇ ಇದ್ದೀತು. ಯುದ್ಧದ ಪರಿಣಾಮವಾಗಿ ನಾಶವಾಗಿರುವ ಕೈಗಾರಿಕೆಗಳು ಚೇತರಿಸಿಕೊಳ್ಳಲು ದೀರ್ಘಕಾಲ ಬೇಕು. ಇದನ್ನು ಗ್ರಹಿಸಿ ತಾತಾ ಕಂಪೆನಿಯೂ ತನ್ನ ಉತ್ಪಾದನೆಯ ಸಾಮರ್ಥ್ಯ ಬೆಳಸಿಕೊಳ್ಳುತ್ತಿದೆ. ಇದೊಂದು ಮುಖ್ಯವಾದ ಮೂಲ ಕೈಗಾರಿಕೆ. ಇದರ ಸ್ಥಾಪನೆಯಿಂದ ಇತರ ಕೈಗಾರಿಕೆಗಳು ತಲೆಯೆತ್ತಲು ಅನುಕೂಲವಾದೀತು. ಈ ರೀತಿಯ ತೀರ್ಮಾನಕ್ಕೆ ಬಂದ ಮೈಸೂರು ಸರ್ಕಾರ ತಾತಾ ಕಂಪೆನಿಯನ್ನು ಭದ್ರಾವತಿಗೆ ತನ್ನ ಮ್ಯಾನೇಜಿಂಗ್ ಏಜಂಟರಾಗಿ ನೇಮಿಸಿತು. ಸಮೀಪದ ಗೇರುಸೊಪ್ಪೆಯಿಂದ ವಿದ್ಯುತ್ ಉತ್ಪಾದಿಸಿ ಬಳಸಿಕೊಳ್ಳಬಹುದು. ಆದ್ದರಿಂದ ಭದ್ರಾವತಿಯೇ ಕಾರ್ಖಾನೆಗೆ ಸೂಕ್ತ ಸ್ಥಳವೆಂದು ನಿರ್ಧರಿಸಲಾಯಿತು. ಬ್ರಿಟಿಷ್ ಪ್ರಭುತ್ವದ ಒಪ್ಪಿಗೆಯೂ ಅಗತ್ಯವಿತ್ತು. ಅದೂ ದೊರೆಯಿತು. 1918ರ ಮೇ ಮಾಹೆಯಲ್ಲಿ ತಾತಾ ಕಂಪೆನಿಯೊಡನೆ ಒಪ್ಪಂದವಾಯಿತು.

ಜಂಷೇದ್‌ಪುರದ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಕಟ್ಟಿಕೊಟ್ಟವರು ನ್ಯೂಯಾರ್ಕಿನ ಪೆರಿನ್ ಮತ್ತು ಮಾರ್ಷಲ್ ಕಂಪೆನಿ. ಭದ್ರಾವತಿಯ ಕಾರ್ಖಾನೆಯ ಸ್ಥಾಪನೆಯನ್ನೂ ಇವರಿಗೇ ಒಪ್ಪಿಸಲಾಯಿತು. ಕಾರ್ಖಾನೆಗೆ ಅಗತ್ಯವಾದ ಕಬ್ಬಿಣದ ಅದಿರು, ಸುಣ್ಣಕಲ್ಲು, ಸೌದೆ, ನೀರು, ವಿದ್ಯುತ್ ಇವನ್ನು ಒದಗಿಸುವುದು ಸರ್ಕಾರದ ಹೊಣೆ. ಯಂತ್ರೋಪಕರಣಗಳನ್ನು ತರಿಸಿ, ಸಿದ್ಧಪಡಿಸಿ, ಸ್ಥಾಪಿಸಿ, ಕೆಲಸ ಪ್ರಾರಂಭಿಸಿ ಒಪ್ಪಿಸಿಕೊಡುವುದು ಪೆರಿನ್ ಮತ್ತು ಮಾರ್ಷಲ್ ಕಂಪೆನಿಯ ಹೊಣೆ. ಆಡಳಿತ ವ್ಯವಹಾರ ತಾತಾ ಕಂಪೆನಿಯ ಜವಾಬ್ದಾರಿ. ಮೊದಲ ಅಂದಾಜಿನಂತೆ ವೆಚ್ಚ 63.59 ಲಕ್ಷ. ಆದರೆ ಏರು ಧೋರಣೆಯೇ ಇದ್ದುದರಿಂದ ಸರ್ಕಾರ 94 ಲಕ್ಷ ಮಂಜೂರು ಮಾಡಿತು. 1917–18ರಲ್ಲಿ ನಿರ್ಮಾಣ ಕೆಲಸ ಪ್ರಾರಂಭವಾಯಿತು. 1922ಕ್ಕೆ ಅಂದಾಜು ವೆಚ್ಚ 211 ಲಕ್ಷಕ್ಕೆ ಏರಿತು. ಮೇಲ್ವಿಚಾರಣೆಗೆ ಒಂದು ಸಮಿತಿ ನೇಮಿಸಿತು ಸರ್ಕಾರ. ಸಮಿತಿಯ ಸಲಹೆ ಮನ್ನಿಸುವವರು ಯಾರು? ಪೆರಿನ್ ಮತ್ತು ಮಾರ್ಷಲ್ ತಜ್ಞ ಎಂಜಿನಿಯರುಗಳ ಕಂಪೆನಿ. ತಜ್ಞರೆನಿಸಿಕೊಂಡವರ ಸಲಹೆ ಉಪೇಕ್ಷಿಸುವ ಸ್ಥಿತಿಯಲ್ಲಿರಲಿಲ್ಲ ಸರ್ಕಾರ. ವೆಚ್ಚ ಏರುತ್ತಲೇ ಇತ್ತು. 1919ರಲ್ಲಿ ಅಂತ್ಯವಾಗಬೇಕಾಗಿದ್ದ ನಿರ್ಮಾಣ ಕಾರ್ಯ 1923ಕ್ಕೆ ಮುಕ್ತಾಯವಾಯಿತು. ಜನವರಿ 1923ರಲ್ಲಿ ಪ್ರಪ್ರಥಮ ಊದುಕುಲುಮೆಯ ಕಾವೇರಿಸಿ ಅದಿರು ಸುಣ್ಣಕಲ್ಲಿನ ಮಿಶ್ರಣ ಕುಂಭಕರ್ಣನ ಹೊಟ್ಟೆಗೆ ಸುರಿಯಲು ಸಾಧ್ಯವಾಯಿತು.

ಸಾಮಾನ್ಯವಾಗಿ ಅದಿರು ಭೂಗರ್ಭದಲ್ಲಿ ಅಡಗಿರುತ್ತದೆ. ಅಗಿದು ಹೊರತೆಗೆಯುತ್ತಾರೆ. ಆದರೆ ಭದ್ರಾವತಿಯಿಂದ 36 ಮೈಲಿಗಳ ಸಮೀಪದ ಕೆಮ್ಮಣ್ಣುಗುಂಡಿ ತುಂಡಿಯಲ್ಲ. ಅದೊಂದು ಅದುರಿನ ಬೆಟ್ಟ. ಅಂತೆಯೇ ಕುದುರೆಮುಖ. ಅದಿರು ಗಗೆದು ತೆಗೆದು ಈ ಬೆಟ್ಟವೇ ಈಗ ಅದೃಶ್ಯವಾಗಿದೆ. ಮೊದಲ ಯೋಜನೆಯಂತೆ

100 ಚದರ ಮೈಲಿ ವಿಸ್ತೀರ್ಣದ 12 ಮೈಲಿ ಉದ್ದ 6 ಮೈಲಿ ಅಗಲದ ದಟ್ಟ ಕಾನನದಿಂದ ದೊಡ್ಡ ವೃಕ್ಷಗಳನ್ನು ಕಡಿದು ಭದ್ರಾವತಿಗೆ ಸಾಗಿಸುವುದು. ಈ ಅರಣ್ಯ ವಿಭಾಗ ವರ್ಷಕ್ಕೆ 3,000 ಟನ್ ಸೌದೆ ಒದಗಿಸುವ ಅಂದಾಜು. ಸುತ್ತಲಿನ ಅರಣ್ಯ ಪ್ರದೇಶದ ವಿಸ್ತೀರ್ಣ 756 ಚದರ ಮೈಲಿ. ಮರವನ್ನು ಟ್ರಾಂ ಮತ್ತು ರೈಲು ಮುಖೇನ ಕಾರ್ಖಾನೆಗೆ ಸಾಗಿಸುವುದು. ಇದಕ್ಕೆ ಅಗತ್ಯವಾದ್ದು 125 ಮೈಲಿಗಳ ಉದ್ದದ ಖಾಯಂ ರೈಲುಮಾರ್ಗ; 45 ಮೈಲಿಗಳ ತಾತ್ಕಾಲಿಕ ಮಾರ್ಗ. 12 ಎಂಜಿನ್ ಮತ್ತು 250 ವ್ಯಾಗನ್. ಅದಿರು ಪ್ರದೇಶದ ಕೆಮ್ಮಣ್ಣುಗುಂಡಿ ಸಮುದ್ರಮಟ್ಟದಿಂದ 5,000 ಅಡಿ ಎತ್ತರ ಮತ್ತು ಭದ್ರಾವತಿಯಿಂದ 36 ಮೈಲಿ. ಅದಿರನ್ನು ಅಂಕುಡೊಂಕು ಬಳಸುಮಾರ್ಗದ ರಸ್ತೆಯಿಂದ ಸಾಗಿಸುವಂತೆ ಯೋಜಿಸಲಾಗಿತ್ತು. ಇದಕ್ಕೆ ಬದಲಾಗಿ 'ರೋಪ್ ವೇ' ತೂಗು ತೊಟ್ಟಿಲಿನ ನೆರವಿನಿಂದ ನೇರವಾಗಿ ಸಾಗಿಸುವುದು ಸುಲಭ. ವೆಚ್ಚ ಕಡಮೆ. ಬೆಟ್ಟದ ಮೇಲಿನಿಂದ, ಕೆಳಗಿನ ತಣಿಗೆಬೈಲ್ ಅಂತರ 3 ಮೈಲಿ. ಸಮಾನ ಅಂತರದ ಎರಡು ಬಲವಾದ ಉಕ್ಕಿನ ಹಗ್ಗಗಳು ಮೇಲಿನಿಂದ ಕೆಳಕ್ಕೆ ವಿದ್ಯುತ್ತಿನ ಸಹಾಯದಿಂದ ಚಲಿಸುತ್ತವೆ. 300 ಅಡಿಗಳ ಅಂತರದಲ್ಲಿ ತೊಟ್ಟಿಲುಗಳನ್ನು ತೂಗಿ ಹಾಕಲಾಗಿದೆ. ಘಂಟೆಗೆ 10 ಟನ್ ಅದಿರನ್ನು ತಣಿಗೆಬೈಲಿಗೆ ಸುರಿಯುತ್ತವೆ. ಅಲ್ಲಿಂದ ಟ್ರಾಂ ಗಾಡಿಗಳು ಭದ್ರಾವತಿಗೆ ಒಯ್ಯುತ್ತವೆ. ಚಲಿಸುವ ತೊಟ್ಟಿಲುಗಳ ದೃಶ್ಯ ಮನಮೋಹಕ. ಭರ್ತಿಯಾದ ಟ್ರಾಂ ವಾಗೀನುಗಳನ್ನು ಭಟ್ಟಿ ಆಲಯಗಳಿಗೆ ಅನಾಮತ್ ದೂಡಲಾಗುತ್ತೆ. ಒಂದೆರಡು ದಿನಗಳಲ್ಲಿ ಉತ್ತಮ ದರ್ಜೆಯ ಮರದ ಇದ್ದಿಲು ಸಿದ್ಧ. ಜೊತೆಗೆ ಫಾರ್ಮಿಕ ಆಮ್ಲ, ತೀಕ್ಷ್ಣ ಮದ್ಯಸಾರ, ಮರದ ಎಣ್ಣೆ, ಇಂಗಾಲಾಮ್ಲ ಮೊದಲಾದ ಉಪವಸ್ತುಗಳು ದೊರೆಯುತ್ತವೆ. ಇಂಗಾಲಾಮ್ಲ ಬಳಸಿ ಕ್ಯಾಲ್ಸಿಯಂ ಕಾರ್ಬೈಡ್ ತಯಾರಿಸಬಹುದು. ಇದ್ದಿಲು ಕುಲುಮೆಯಿಂದ ಹೊರಬರುವ ಬಿಸಿ ಅನಿಲ ಬಳಸಿ ವಿದ್ಯುತ್ ಉತ್ಪಾದಿಸಬಹುದು. ಮರದ ಎಣ್ಣೆಯಿಂದ ಬೀದಿಗೆ ಬಳಸುವ ಡಾಂಬ್ರು, ಕೀಲುಎಣ್ಣೆ ತಯಾರಿಸಬಹುದು. ಟಾರ್ ಅಥವಾ ಕೀಲೆಣ್ಣೆಗೆ ಗಿರಾಕಿ ಅಧಿಕ. ಮರದ ಇದ್ದಿಲಿನಿಂದ ತಯಾರಾಗುವ ವಿಶೇಷ ಬಗೆಯ ಕಬ್ಬಿಣಕ್ಕೆ ಬೇಡಿಕೆ ಅಪಾರ. ಉಕ್ಕು ತಯಾರಿಸುವ ಶ್ರೇಷ್ಠ ಜಪಾನಿನ ಒಂದು ಕಂಪೆನಿ ಇಲ್ಲಿ ಉತ್ಪನ್ನವಾಗುವ ಎಲ್ಲ ಕಬ್ಬಿಣ ಉಪಯೋಗಿಸಿಕೊಳ್ಳಬಲ್ಲುದು. ಕಾರ್ಖಾನೆಗೆ ಪ್ರತಿನಿತ್ಯ 30 ಲಕ್ಷ ಗ್ಯಾಲನ್ ನೀರೊದಗಿಸಬೇಕು. ಭದ್ರೆಯ ಕೃಪೆಯಿಂದ ಜಲದ ಕ್ಷಾಮವಿಲ್ಲ.

ಬೃಹತ್ ಕಾರ್ಖಾನೆಯ ಎಲ್ಲ ವಿಭಾಗಗಳ ನಿರ್ಮಾಣ ಇನ್ನೂ ಮುಗಿದಿರಲಿಲ್ಲ. ಆದರೂ ದೊಡ್ಡ ಊದುಕುಲುಮೆಗೆ ಕಾವೇರಿಸಿ ಅದಿರು ಕರಗಿಸುವ ಕೆಲಸ ಪ್ರಾರಂಭಿಸ ಲಾಯಿತು. ಮೊದಲು ಎರಕ ಹೊಯ್ದದ್ದು ವಿಘ್ನರಾಜ ವಿಘ್ನೇಶ್ವರನ ವಿಗ್ರಹ. ಈ ವಿಗ್ರಹ ವಿಶ್ವೇಶ್ವರಯ್ಯನವರ ಮೇಜನ್ನು ಸದಾ ಅಲಂಕರಿಸಿತ್ತು. ಪ್ರತಿ ಟನ್ ಕಬ್ಬಿಣ ತಯಾರಿಸಲು ಆಗುವ ವೆಚ್ಚ 30 ರೂಪಾಯಿ. ಬೀಡುಕಬ್ಬಿಣದ ಪೇಟೆಧಾರಣೆ 60 ರೂಪಾಯಿ. ಲಾಭ ಟನ್ನಿಗೆ 30 ರೂಪಾಯಿ. ಇದು ಕಾರ್ಖಾನೆ ಸ್ಥಾಪನೆಯ ಮೂಲ ಆಧಾರ. ನಿರೀಕ್ಷಿಸಿದ್ದುದು ಧಾರಣೆ ಏರೀತು ಎಂದು. ಯುದ್ಧ ಮುಗಿಯಿತು.

ಧಾರಣೆ ಇಳಿಯತೊಡಗಿತು. ಟನ್ನಿಗೆ 100 ರೂಪಾಯಿ ಇದ್ದುದು ಕ್ರಮೇಣ 45ಕ್ಕೆ ಇಳಿಯಿತು. ಉತ್ಪಾದನೆ ನಿರೀಕ್ಷಣೆಯ ಅರ್ಧದಷ್ಟೂ ಆಗಲಿಲ್ಲ. ಮರದ ದಿಮ್ಮಿಗಳನ್ನು ತುಂಡರಿಸಿ ಕುಯ್ಯುವ ಗರಗಸದ ಯಂತ್ರ ಗಟ್ಟಿ ಮರಗಳನ್ನು ಕುಯ್ಯಲು ಆಗುತ್ತಿರಲಿಲ್ಲ. ಬಾಷ್ಪಪಾತ್ರೆ ಬಾಯಿಲರ್ ಸಾಕಷ್ಟು ಆವಿ ಒದಗಿಸುತ್ತಿರಲಿಲ್ಲ. ಮರವನ್ನು ಇದ್ದಿಲಾಗಿ ಪರಿವರ್ತಿಸುವ 'ರಿಟಾರ್ಟ್'ಗಳು ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿರಲಿಲ್ಲ. ಸೌದೆ ವ್ಯರ್ಥ. ಉಪಉತ್ಪನ್ನಗಳ ಬಳಕೆ ವೈಜ್ಞಾನಿಕವಾಗಿರಲಿಲ್ಲ. ಕಾರ್ಖಾನೆಯ ಅಂಗಾಂಗಗಳಿಗೆ ಹೊಂದಾಣಿಕೆ ಇಲ್ಲ, ಸಾಮರಸ್ಯ, ಸಹಕಾರವಿಲ್ಲ. ಕೆಲಸಗಾರರಿಗೆ ಅನುಭವ ಸಾಲದು. ಕಡೆಗೆ ಲೆಕ್ಕಪತ್ರದ ವಿಭಾಗವೂ ತೃಪ್ತಿಕರ ಲೆಕ್ಕ ಇಟ್ಟಿರಲಿಲ್ಲ. ಕಬ್ಬಿಣದ ಧಾರಣೆಯ ಇಳಿತದಿಂದ ಹಲವಾರು ಕಾರ್ಖಾನೆಗಳು ನಷ್ಟ ಅನುಭವಿಸುತ್ತ ಮುಚ್ಚುವ ಸ್ಥಿತಿಯಲ್ಲಿದ್ದುವು. ದಿನವಹಿ 57 ಟನ್ ಬೀಡುಕಬ್ಬಿಣ, 200 ಟನ್ ಇದ್ದಿಲು ಉತ್ಪಾದನೆ ಮೊದಲ ಹಂತದ ನಿರೀಕ್ಷಣೆ. ಉತ್ಪನ್ನ ಅರ್ಧದಷ್ಟೂ ಆಗುತ್ತಿರಲಿಲ್ಲ. ಮರದಿಂದ ಭಟ್ಟಿ ಇಳಿಸಿ ಇದ್ದಿಲಾಗಿ ಮಾಡಿ ಕಬ್ಬಿಣ ತಯಾರಿಸುವುದು ಭದ್ರಾವತಿ ಕಾರ್ಖಾನೆಯ ವೈಶಿಷ್ಟ್ಯ. ಅದಕ್ಕೆ ತಕ್ಕಂತೆ 'ಮೈಸೂರು ವುಡ್ ಡಿಸ್ಟಿಲೇಷನ್ ಅಂಡ್ ಐರನ್ ವರ್ಕ್ಸ್' ಎಂಬ ಅರ್ಥಗರ್ಭಿತ ಹೆಸರು ಇಡಲಾಯಿತು. ಜನಸಾಮಾನ್ಯರಿಗೆ ಇದು ಭದ್ರಾವತಿಯ ಕಬ್ಬಿಣ ಕಾರ್ಖಾನೆ. ನಷ್ಟ ಪ್ರಾರಂಭದಲ್ಲೇ ಅನುಭವಿಸುವುದಕ್ಕಿಂತ ಕುಲುಮೆಯ ಕೆಲಸ ಸ್ಥಗಿತಗೊಳಿಸುವುದೇ ಸೂಕ್ತ. ಈ ರೀತಿಯ ಸಲಹೆ ನೀಡಿದರು ತಜ್ಞ ಪೆರಿನ್ ಮತ್ತು ಮಾರ್ಷಲ್ ಕಂಪೆನಿಯವರು ಮತ್ತು ಸರ್ಕಾರದ ಉನ್ನತ ಅಧಿಕಾರಿಗಳು. ಭದ್ರಾವತಿ ಕಾರ್ಖಾನೆಯ ಆಡಳಿತ ನಿರ್ವಾಹಕ ಮಂಡಲಿ ಅನುಮೋದಿಸಿತು.

ಉತ್ಪಾದನೆಯ ಕೆಲಸ ಸ್ಥಗಿತಗೊಳಿಸಬೇಕೆಂಬ ಸಲಹೆ ಮಹಾರಾಜರನ್ನು ಕಳವಳಕ್ಕೆ ಈಡುಮಾಡಿತು. ಮಂಡಳಿ ಕಾರ್ಯ ನಿರ್ವಹಿಸುವ ಸಾಮರ್ಥ್ಯ ಪಡೆದಿಲ್ಲವೆಂದು ಮಹಾರಾಜರು ಗ್ರಹಿಸಿದರು. ತಂತಿ ಕಳುಹಿಸಿ ಬೊಂಬಾಯಿಯಲ್ಲಿದ್ದ ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಳ್ಳಿ ಎಂದು ಮಹಾರಾಜರು ದಿವಾನ್ ಬ್ಯಾನರ್ಜಿ ಅವರಿಗೆ ಆಜ್ಞಾಪಿಸಿದರು. ಕಾರ್ಖಾನೆ ಅಸ್ತಿತ್ವಕ್ಕೆ ಬರಲು ಕಾರಣನಾದವನು ತಾನು. ಇದನ್ನು ಸುಸ್ಥಿತಿಗೆ ತರುವುದು ತನ್ನ ಕರ್ತವ್ಯ ಎಂದು ಗ್ರಹಿಸಿದ ವಿಶ್ವೇಶ್ವರಯ್ಯನವರು ಬೊಂಬಾಯಿಯಿಂದ ಹೊರಟುಬಂದರು. ಉತ್ತಮ ಸ್ಥಿತಿಗೆ ತರಲು ತನಗೆ ಪೂರ್ಣ ಸ್ವಾತಂತ್ರ್ಯ ಬೇಕೆಂದು ದೃಢಪಡಿಸಿದರು. ನಿರ್ಮಾಣಕಾರ್ಯ ಪೂರ್ಣಗೊಳಿಸದೆ ಅಮೇರಿಕಾಗೆ ಹಿಂತಿರುಗಿ ಹೋಗಿದ್ದ ಪೆರಿನ್ ಅವರಿಗೆ ಕೂಡಲೇ ಬಂದು ಕೆಲಸ ಪೂರ್ಣಗೊಳಿಸುವಂತೆ ತಂತಿ ಹೋಯಿತು. ಕೂಡಲೇ ಅವರು ಹದಿನಾರು ಉತ್ತಮ ಕೆಲಸಗಾರರೊಡನೆ ವಿಮಾನದಲ್ಲಿ ಹಾರಿಬಂದರು. ಅಪೂರ್ಣವಾಗಿದ್ದ ನಿರ್ಮಾಣ ಪೂರ್ಣಗೊಳಿಸಿ ಮೂವರು ದಕ್ಷ ಕೆಲಸಗಾರರನ್ನು ಇಲ್ಲಿಯೇ ಬಿಟ್ಟು ಸ್ವದೇಶಕ್ಕೆ ಮರಳಿದರು.

ವಿಶ್ವೇಶ್ವರಯ್ಯನವರು ಪ್ರಜಾಪ್ರಭುತ್ವದಲ್ಲಿ ವಿಶ್ವಾಸವುಳ್ಳವರು. ಸರ್ವಾಧಿಕಾರಿಯಂತೆ ನಡೆದುಕೊಳ್ಳುವ ಅಧಿಕಾರ ಪಡೆದುಕೊಂಡರೂ ಅವರು ಹಾಗೆ ವರ್ತಿಸಲಿಲ್ಲ.

ಹೊಸ ಆಡಳಿತ ಮಂಡಲಿ ರಚಿಸಿದರು. ಯಾವ ಕೆಲಸವೇ ಆಗಲಿ ಆಡಳಿತ ಮಂಡಳಿಯ ಅವಗಾಹನೆಗೆ ಬಾರದೆ ಕೈಗೊಳ್ಳಲಾಗದೆಂದು ನಿರ್ಬಂಧಿಸಿದರು. ಕಾರ್ಖಾನೆಗೆ ಸೇರಿದ ಆಸ್ತಿಪಟ್ಟಿ ಸಿದ್ಧವಾಯಿತು. ಅದಕ್ಕೆ ಬೆಲೆಕಟ್ಟಲಾಯಿತು. ಹರಿದು ಹಂಚಿಹೋಗಿದ್ದ ವಿಭಿನ್ನ ಭಾಗಗಳನ್ನು ಭದ್ರಾವತಿಯಲ್ಲಿ ಕೇಂದ್ರೀಕರಿಸಿದರು. ಕಾರ್ಖಾನೆಯ ಸಮಸ್ತ ಕಾರ್ಯಗಳನ್ನು ಆಡಳಿತ ವಿಭಾಗ, ಕೇಂದ್ರ ಕಾರ್ಖಾನೆಯ ವಿಭಾಗ, ಸಂಶೋಧನೆಯ ವಿಭಾಗ, ನಗರ ವಿಭಾಗ, ಗಣಿ ವಿಭಾಗ ಎಂದು ಏಳು ವಿಭಾಗಗಳಾಗಿ ಮಾಡಿ ಪ್ರತಿಯೊಂದು ವಿಭಾಗದ ಕೆಲಸ ನಿರ್ದಿಷ್ಟಗೊಳಿಸಿದರು. ಎಲ್ಲ ವಿಭಾಗಗಳ ಕೆಲಸಕಾರ್ಯ ಸಮನ್ವಯಗೊಳಿಸಿದರು. ಆಡಳಿತ ಮಂಡಲಿಗೆ ಸರ್ಕಾರದ ಅಧಿಕಾರಿಯೊಬ್ಬರು ಕಾರ್ಯದರ್ಶಿಗಳಾದರು. ಪ್ರತಿಯೊಂದು ವಿಭಾಗದ ಮುಖ್ಯಾಧಿಕಾರಿ ಆಯಾ ವಿಭಾಗಗಳು ದಕ್ಷತೆಯಿಂದ ಕಾರ್ಯ ನಿರ್ವಹಿಸುವಂತೆ ಜವಾಬ್ದಾರಿಯಾಗಿ ಮಾಡಿದರು. ಪ್ರತಿ ಸೋಮವಾರ ಮತ್ತು ಪ್ರತಿ ತಿಂಗಳು ವಿಭಾಗದ ಕಾರ್ಯನಿರ್ವಹಣೆಯ ವರದಿ ಮಂಡಲಿಗೆ ಒಪ್ಪಿಸುವಂತೆ ಮಾಡಿದರು. ಉತ್ಪನ್ನ ಆದಾಯ ವೆಚ್ಚ, ಜಮಾ–ಖರ್ಚು, ಕೊಂಡ ಮಾಲಿನ ಪಟ್ಟಿ, ಅವುಗಳ ಬೆಲೆ ಈ ಎಲ್ಲ ವಿವರಗಳನ್ನೂ ವರದಿಯಲ್ಲಿ ಕೊಡಬೇಕಾಗಿತ್ತು. ವಿಶ್ವೇಶ್ವರಯ್ಯನವರೇ ಮಂಡಲಿಯ ಅಧ್ಯಕ್ಷರು. ವರದಿಗಳನ್ನು ಮಂಡಲಿ ಕೂಲಂಕಷವಾಗಿ ಪರಿಶೀಲಿಸಿ, ಲೋಪದೋಷ ಗಮನಿಸಿ ಅಧಿಕಾರಿಗಳನ್ನು ಬರಮಾಡಿಕೊಂಡು ಸಮಜಾಯಿಷಿ ಕೇಳುತ್ತಿತ್ತು. ಇದರಿಂದ ಅಧಿಕಾರಿಗಳು ಜವಾಬ್ದಾರಿ ಅರಿತು ಕೆಲಸ ಮಾಡುತ್ತಿದ್ದರು. ತಮ್ಮ ಮನ ಬಂದಂತೆ ವೆಚ್ಚ ಮಾಡುತ್ತಿದ್ದ ಅವಕಾಶ ವಿಭಾಗಗಳಿಗೆ ತಪ್ಪಿಹೋಯಿತು. ವೆಚ್ಚ ಕಡಮೆ ಆಯಿತು. ಉತ್ತಮ ಸಲಹೆ ಎಲ್ಲರಿಂದಲೂ ಸ್ವಾಗತಿಸುತ್ತಿದ್ದುದು ವಿಶ್ವೇಶ್ವರಯ್ಯನವರ ತೆರೆದ ಮನಸ್ಸಾಗಿತ್ತು. ಸಾಮಾನ್ಯ ಕಾರ್ಮಿಕನೂ ಗಳಿಸಿದ ಅನುಭವದಿಂದ ಸೂಕ್ತ ಸಲಹೆ ನೀಡಲು ಪ್ರೋತ್ಸಾಹ ನೀಡಿತು, ಇವರ ಈ ಉದಾರ ಧೋರಣೆ. ಉಪಯುಕ್ತ ಸಲಹೆಗೆ ಬಹುಮಾನ ಲಭಿಸುತ್ತಿತ್ತು.

ವಿಶ್ವೇಶ್ವರಯ್ಯನವರ ದೇಶಾಭಿಮಾನ, ಸ್ವಾಭಿಮಾನ, ಭಾರತೀಯರ ಸಾಮರ್ಥ್ಯದಲ್ಲಿದ್ದ ಅವರ ವಿಶ್ವಾಸ, ದಕ್ಷತೆ, ಪ್ರಾಮಾಣಿಕತೆ, ಕಾಲನಿಯಮ ಇವೆಲ್ಲ ಇಡೀ ಕಾರ್ಖಾನೆಯ ಮೇಲೆ ಪ್ರಭಾವ ಬೀಳದೆ ಹೋಗಲಿಲ್ಲ. ಕಾರ್ಖಾನೆ ತಾತ್ಕಾಲಿಕ ಮುಚ್ಚಿಬಿಡಿ ಎಂಬ ತಜ್ಞರ ಸಲಹೆ ನಿರಾಕರಿಸಿ, ಇದರಿಂದ ಸಾವಿರಾರು ಉದ್ಯೋಗಿಗಳೂ ಕಾರ್ಮಿಕರೂ ನಿರುದ್ಯೋಗಿಗಳಾಗಿ ಪಡಬೇಕಾಗಿದ್ದ ಬವಣೆ ಗಮನಿಸಿ, ಕೆಲಸ ಮುಂದುವರಿಸಿಕೊಂಡು ಬರಲು ಅವರು ತೆಗೆದುಕೊಂಡ ಎದೆಗಾರಿಕೆಯ ತೀರ್ಮಾನ ಎಲ್ಲರನ್ನೂ ಋಣಿಯಾಗಿ ಮಾಡಿತ್ತು. ಇದರಿಂದ ಪ್ರತಿಯೊಬ್ಬ ನೌಕರನೂ ತನ್ನ ಜವಾಬ್ದಾರಿ ಅರಿತು ಮನಃಪೂರ್ವಕ ಶ್ರಮಿಸುತ್ತಿದ್ದ. ಒಮ್ಮೆ ಕುಲುಮೆಗೆ ಸಾಕಷ್ಟು ಇಂಧನ ಇಲ್ಲದಂತಾಯಿತು. ಕುಲುಮೆ ನಂದಿಹೋದರೆ ಮತ್ತೆ ಕಾವೇರಿಸಲು ಅಪಾರ ಇಂಧನ ಮತ್ತೆ ಕಾಲ ಅನಿವಾರ್ಯ. ಕಾರ್ಮಿಕರು ಇದನ್ನು ಅರಿತಿದ್ದರು. 'ರಿಟಾರ್ಟ್'ಗೆ ಸೌದೆ ಭರ್ತಿ ಮಾಡಬೇಕಾಗಿತ್ತು. ಸೌದೆ ಕಡಿದು ತುಂಬಿದರು. ಇದ್ದಿಲು ಸಕಾಲದಲ್ಲಿ ದೊರೆಯುವಂತೆ ಹೆಚ್ಚು ಕಾಲ ದುಡಿದರು. ಬೆವರು ಸುರಿಸಿದರು. ಈ ದುಡಿಮೆಗೆ

ಪ್ರತಿಫಲ ಬೇಡವೆಂದರು. ಅಲ್ಲದೆ ಕಾರ್ಖಾನೆಗೆ ಆಗುತ್ತಿದ್ದ ವೆಚ್ಚ ಗಮನಿಸಿ ತಮ್ಮ ವೇತನದಲ್ಲಿ ರೂಪಾಯಿಗೆ ಒಂದೆರಡಾಣೆಯಂತೆ ಸ್ವಇಚ್ಛೆಯಿಂದ ಕಡಮೆ ಮಾಡಿ ಕೊಂಡರು. ಇದಲ್ಲವೇ ದೇಶಾಭಿಮಾನ! 'ಮಹಾಜನೋ ಏನ ಗತಾಃ ಸ ಪಂಥಾ!' ಮಹಾಜನರ ಮೇಲ್ಪಂಕ್ತಿ ಇತರರೂ ಅನುಸರಿಸುತ್ತಾರೆ. ವಿಶ್ವೇಶ್ವರಯ್ಯನವರ ಆದರ್ಶ ನಡವಳಿಕೆ ಇತರರಿಗೂ ಮಾರ್ಗದರ್ಶಕವಾಗಿತ್ತು.

ಕಾರ್ಖಾನೆ ಅನುಭವಿಸಬೇಕಾಗಿ ಬಂದ ಕಷ್ಟಸಂಕಟ ಒಂದೆರಡಲ್ಲ. ನಿಸರ್ಗವೂ ಇದಕ್ಕೆ ಕೈಜೋಡಿಸಿತು. ಸುರಿಯಿತು ಭಾರಿ ಮಳೆ. ಭದ್ರಾ ಭೋರ್ಗರೆಯಿತು ಪ್ರವಾಹದಿಂದ. ಊದುಕುಲುಮೆಗೆ ಅದಿರು ತುಂಬುವ ಸುರಂಗ ನೀರಿನಿಂದ ತುಂಬಿ ಕುಲುಮೆಗೂ ನುಗ್ಗಿತು. ಕುಲುಮೆಯನ್ನು ಆರಿಸಬೇಕಾಯಿತು. ಈ ವಿಭಾಗದ ಮುಖ್ಯಸ್ಥ ಎ. ಜಿ. ಗುಡ್ಸೊ ಎಂಬ ಅಮೆರಿಕದ ಎಂಜಿನಿಯರ್. ಅವನ ಅನಾದರಣೆ ಇದಕ್ಕೆ ಮುಖ್ಯ ಕಾರಣ. ಪ್ರವಾಹದ ನೀರು ಒಳನುಗ್ಗದಂತೆ ತಡೆಗಟ್ಟಬೇಕಾದ್ದು ಅವನ ಕರ್ತವ್ಯ. ಉರಿಯುವ ಅಗ್ನಿಗೆ ತುಪ್ಪ ಸುರಿದಂತೆ ಅನಾಹುತದಿಂದ ಆದ ಆಘಾತ ಸರಿಪಡಿಸಲು ಆರು ತಿಂಗಳು ಬೇಕು ಎಂದ ಈ ಮಹಾಶಯ. ವಿಶ್ವೇಶ್ವರಯ್ಯ ನವರ ಅಸಮಾಧಾನ ಮಿತಿಮೀರಿತು. ಈ ಮಹಾಶಯನ ನೇತೃತ್ವದಲ್ಲಿ ಐದೂವರೆ ಮಾಹೆಯಲ್ಲಿ ಸಿದ್ಧವಾದುದು 4,827 ಟನ್ ಕಬ್ಬಿಣ ನಾಲ್ಕರಲ್ಲಿ ಒಂದು ಭಾಗವೂ ಇಲ್ಲ. ಸೌದೆಯ ಬಳಕೆ ಅಪಾರ. ಒಂದು ಲಕ್ಷ ಬೆಲೆಬಾಳುವ 23,000 ಟನ್ ಸೌದೆ ವ್ಯರ್ಥ. ಸಹಜವಾಗಿಯೇ ವಿಶ್ವೇಶ್ವರಯ್ಯನವರು ಕುಪಿತರಾದರು. ಪೆರಿನ್ ಮತ್ತು ಮಾರ್ಷಲ್ ಕಂಪೆನಿಗೆ ಇವನ ಅಲಕ್ಷ್ಯದ ಕುರಿತು ಪತ್ರ ಬರೆದರು. ಇವನನ್ನು ಹಿಂದಕ್ಕೆ ಕರೆಸಿಕೊಳ್ಳುವಂತೆ ತಿಳಿಸಿದರು. ಕೆಲಸ ತೃಪ್ತಿಕರವಾಗಿ ನಡೆಯುತ್ತಿಲ್ಲ. ಇದಕ್ಕೆ ನೀವೇ ಹೊಣೆ. ಏನು ಕಾರಣ ಎಂದು ಸಮಜಾಯಿಷಿ ಕೇಳಿದರು. ಭಾರತೀಯತಜ್ಞನೆನಿಸಿ ಕೊಂಡ ತನ್ನಿಂದ ಸಮಜಾಯಿಷಿ ಕೇಳುವುದೇ ಎಂಬ ಬಿಂಕ ಇವನಿಗೆ. ಇವನ ಮೇಲೆ ಇನ್ನೊಬ್ಬ ಭಾರತೀಯನನ್ನು ನೇಮಿಸಿದರು. ಗುಡ್ಸೊ ಕೋಪಕ್ಕೆ ಎಣೆಯಿಲ್ಲದಂತಾ ಯಿತು. ಈ ಕಾರಣಕ್ಕಾಗಿ ರಾಜಿನಾಮೆ ನೀಡಿ ಸ್ವದೇಶಕ್ಕೆ ಮರಳಿದ. ಗುಡ್ಸೊ ಸ್ಥಾನಕ್ಕೆ ನ್ಯಾಪತಿ ಮಾಧವರಾಯರನ್ನು ನೇಮಿಸಿದರು.

ವಿಘ್ನಗಳು ಒಂದರಮೇಲೊಂದರಂತೆ ಬರುತ್ತಲೇ ಇದ್ದುವು. ಭರ್ತೃಹರಿ ಹೇಳಿರುವಂತೆ ವಿಶ್ವೇಶ್ವರಯ್ಯನವರು—

ಪ್ರಾರಭ್ಯತೇ ನ ಖಲು ವಿಘ್ನಭಯೇನ ಮೂರ್ಖೈಃ
ಪ್ರಾರಭ್ಯ ವಿಘ್ನವಿಹಿತಾಃ ವಿರಮಂತಿ ಮಧ್ಯಾಃ ।
ವಿಘ್ನೈ ಪುನಃ ಪುನರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧಮುತ್ತಮಗುಣಾಃ ನಪರಿತ್ಯಜಂತಿ ॥

ಅರ್ಧದಲ್ಲೇ ಕೈಗೊಂಡ ಕಾರ್ಯ ಬಿಡದೆ ಬಂದ ವಿಘ್ನಪರಂಪರೆಗಳೆಲ್ಲವನ್ನೂ ದೃಢ ಚಿತ್ತ, ಆತ್ಮವಿಶ್ವಾಸ, ದೇಶಾಭಿಮಾನಗಳಿಂದ ಪ್ರೇರಿತರಾಗಿ ನಿವಾರಿಸಿಕೊಂಡು ಹಿಡಿದ

ಕಾರ್ಯ ಮುಂದುವರಿಸಿಕೊಂಡು ಬಂದರು. ದುರಸ್ತಿಗೆ ಆರು ತಿಂಗಳು ಅಗತ್ಯ ಎಂದು ನುಡಿದಿದ್ದ ಅಮೆರಿಕದ ಗುಡ್ಕೊ ಅವರ ವಚನ ಕಾರ್ಮಿಕರು ಸುಳ್ಳುಮಾಡಿದರು. ಮೂರೇ ತಿಂಗಳಲ್ಲಿ ದುರಸ್ತಿ ಕಾರ್ಯ ಮಾಡಿ ಮುಗಿಸಿದರು. ಆದರೂ ಊದುಕುಲುಮೆಯ ಕೆಲಸ ಅಸಮರ್ಪಕವಾಗಿತ್ತು. ದಿನ ಒಂದಕ್ಕೆ ರೂ. 4,500 ವೆಚ್ಚ ಮಾಡಿ, ರೂ. 4,000 ಬೆಲೆ ಬಾಳುವ ಬೀಡುಕಬ್ಬಿಣ ತಯಾರಾಗುತ್ತಿತ್ತು. ದಿನವಹಿ 40 ಟನ್ ಕಬ್ಬಿಣ ತಯಾರಾದರೆ ಆದಾಯ ವೆಚ್ಚ ಸರಿದೂಗಿಸಬಹುದು. 50 ಟನ್ ಉತ್ಪಾದಿಸಿದರೆ ಅಲ್ಪ ಲಾಭ. 70ರಿಂದ 80 ಟನ್ ಉತ್ಪಾದಿಸಿದರೆ ಪರಿಸ್ಥಿತಿ ಸುಧಾರಿಸೀತು. ಈ ರೀತಿಯಲ್ಲಿ ದಿವಾನ್ ಬ್ಯಾನರ್ಜಿ ಅವರಿಗೆ ನಿವೃತ್ತ ದಿವಾನ್ ವಿಶ್ವೇಶ್ವರಯ್ಯನವರು ವರದಿ ಮಾಡಿದರು.

ಭದ್ರಾವತಿಯಲ್ಲಿ ಕನಿಷ್ಠ ಅಮೇರಿಕದ ಹನ್ನೊಂದು ನಿಪುಣರಾದರೂ ಇರಲು ಮ್ಯಾನೇಜಿಂಗ್ ಏಜಂಟರು ಗೊತ್ತುಮಾಡಿ ನೇಮಿಸಿದ್ದರು. ಇವರಿಗೆ ಭಾರತೀಯರಿಗಿಂತ ಅಧಿಕ ವೇತನ ಮತ್ತು ಇತರ ಸೌಲಭ್ಯಗಳು. ಭಾರತೀಯ ಕೀಳರಿಮೆಯ ಜನ. ಇಂಥ ದೊಡ್ಡ ಜವಾಬ್ದಾರಿ ನಿರ್ವಹಿಸುವ ಸಾಮರ್ಥ್ಯ ಇಲ್ಲದವರು. ಈ ಕೀಳು ಭಾವನೆ ಬಿಳಿಯರಲ್ಲಿ ಮಾತ್ರವಲ್ಲ ನಮ್ಮವರಲ್ಲೂ ಇತ್ತು. ಇದು ವಿಶ್ವೇಶ್ವರಯ್ಯನವರಿಗೆ ಅಪ್ಯಾಯಮಾನವಾಗಿರಲಿಲ್ಲ. ನಮ್ಮ ಜನ ವಿದ್ಯಾಬುದ್ಧಿಯಲ್ಲಿ, ಜಾಣ್ಮೆಯಲ್ಲಿ ಯಾರಿಗೂ ಕಡಮೆ ಇಲ್ಲ. ಈ ಅಭಿಮಾನ ಅವರಲ್ಲಿ ತುಂಬಿತುಳುಕುತ್ತಿತ್ತು. ಇದನ್ನು ದೃಢಪಡಿಸಿಕೊಡಲು ನಿಶ್ಚಯಿಸಿದರು. ತಜ್ಞ ಅಮೆರಿಕನರನ್ನು ಅವರ ಸೇವೆಯಿಂದ ನಿವೃತ್ತಗೊಳಿಸಿ ಅವರ ದೇಶಕ್ಕೆ ಮರಳಲು ಅವಕಾಶ ಮಾಡಿಕೊಟ್ಟರು. ಕೆಲವು ತಿಂಗಳುಗಳಲ್ಲೇ ಕಾರ್ಖಾನೆಯಲ್ಲಿ ವಿದೇಶೀಯರ ಸುಳಿವೇ ಇಲ್ಲದಂತೆ ಮಾಡಿದರು. ಅವರ ಸ್ಥಾನಗಳಿಗೆ ಭಾರತೀಯ ವಿಜ್ಞಾನಿಗಳನ್ನೂ, ಎಂಜಿನಿಯರುಗಳನ್ನೂ ನೇಮಿಸಿದರು. ಈ ಹೊಣೆ ಹೊರಬಲ್ಲನೇ ಎಂದು ಸಂಶಯಾತ್ಮರ ಸಂಶಯ ನಿವಾರಿಸಿ ಧೈರ್ಯ ತುಂಬಿ ಉತ್ಸಾಹದಿಂದ ದುಡಿಯುವಂತೆ ಪ್ರೇರೇಪಿಸಿದರು. ವಿಜ್ಞಾನ ಮತ್ತು ತಾಂತ್ರಿಕ ಪದವೀಧರರು ಭದ್ರಾವತಿಗೆ ಬಂದು ಕೆಲಸ ಕಲಿಯುವಂತೆ ಪ್ರೋತ್ಸಾಹಿಸಿದರು. ಕೆಲವು ತರುಣರನ್ನು ಪಾಶ್ಚಾತ್ಯ ದೇಶಗಳಿಗೂ ಕೆಲವರನ್ನು ಜಂಷೇದ್‌ಪುರಕ್ಕೂ ಅನುಭವ ಗಳಿಸಲು ಕಳುಹಿಸಿ ಕೊಟ್ಟರು. ಸಿವಿಲ್ ಸರ್ವಿಸ್ ಅಧಿಕಾರಿಗಳ ಸೇವೆ ಎರವಲಾಗಿ ಪಡೆದು ಆಡಳಿತ ವಿಭಾಗಕ್ಕೆ ನೇಮಿಸಿದರು. ಜನರಲ್ ಮ್ಯಾನೇಜರಾಗಿದ್ದು ಮುಂದೆ ಮೈಸೂರು ಸಂಸ್ಥಾನದ ದಿವಾನರಾದ ನ್ಯಾಪತಿ ಮಾಧವರಾಯರ ಹೇಳಿಕೆ ನೋಡಿ—"ವಿಶ್ವೇಶ್ವರಯ್ಯನವರ ಅಂತಃಸತ್ವ, ಶ್ರಮಜೀವಿಗಳನ್ನು ಹುರಿದುಂಬಿಸುವ ಸಾಮರ್ಥ್ಯ, ವಿವೇಚನಾ ಚಾತುರ್ಯ, ಎದೆಗಾರಿಕೆ, ಅಸಾಧ್ಯ ಸಾಧಿಸಬಲ್ಲ ಸ್ಫೂರ್ತಿ ಪ್ರಚೋದಕ ಮಾರ್ಗದರ್ಶನ ನನ್ನನ್ನು ಆಶ್ಚರ್ಯಚಕಿತನಾಗಿ ಮಾಡಿತು."

ಕಾರ್ಖಾನೆ ವ್ಯವಸ್ಥಿತವಾಗಿ ಗಡಿಯಾರದಂತೆ ಕೆಲಸ ನಿರ್ವಹಿಸಬೇಕು. ಲಾಭದಾಯಕವಾಗಬೇಕು. ಭದ್ರ ಬುನಾದಿಯ ಮೇಲೆ ನಿಲ್ಲಬೇಕು. ಇದು ವಿಶ್ವೇಶ್ವರಯ್ಯನವರ

ಪ್ರಥಮ ಗುರಿ. ಮಂಡಲಿಯ ಸಹಕಾರದಿಂದ ಈ ವಿಷಯಗಳಿಗೆ ಹೆಚ್ಚು ಗಮನ ಹರಿಸುತ್ತ ಬಂದರು. ಉತ್ಪನ್ನ ಇವರ ಪ್ರಯತ್ನಗಳಿಂದ ಬಹುಮಟ್ಟಿಗೆ ತೃಪ್ತಿಕರ ವಾಯಿತು. ಇದರಿಂದ ಮಾರಾಟದತ್ತ ಗಮನ ಹರಿಸಲು ಬಿಡುವಾಯಿತು. ಬೆಳೆದ ಫಸಲು ರೈತ ಮಾರಬೇಕು. ಕಾರ್ಖಾನೆಯ ಉತ್ಪಾದನೆ ಲಾಭದಾಯಕವಾಗಿ ವಿಕ್ರೀತ ವಾಗಬೇಕು. ಇದು ಸಾಮರ್ಥ್ಯ ಅಳೆಯುವ ಒರೆಗಲ್ಲು. ಉತ್ಪಾದಿಸುವುದು ಮಳಿಗೆ ಯಲ್ಲಿ ತುಂಬಿಡುವುದಕ್ಕಲ್ಲ. ಉತ್ಪಾದಿತ ವಸ್ತುಗಳ ಮಾರಾಟದಿಂದ ಕಾರ್ಖಾನೆ ಸಾಗಬೇಕು. ಭದ್ರಾವತಿ ಉತ್ಪಾದಿಸುತ್ತಿದ್ದುದು ಶ್ರೇಷ್ಠ ಶ್ರೇಣಿಯ ಕಬ್ಬಿಣ. ಆದರೆ ಇದಕ್ಕೆ ಯೋಗ್ಯ ಬೆಲೆ ಕೊಡಲು ಭಾರತದ ಬಳಕೆದಾರರು ಒಪ್ಪುತ್ತಿರಲಿಲ್ಲ. ಉಪ ಉತ್ಪನ್ನಗಳಿಗೆ ಇಂಗ್ಲೆಂಡಿನಲ್ಲಿ ಕೊಳ್ಳುವವರು ದೊರೆತರು. 1924ರಲ್ಲಿ ಭದ್ರಾ ವತಿಯ ಕಬ್ಬಿಣ ಮತ್ತು ಇತರ ವಸ್ತುಗಳನ್ನು ಮಾರಾಟ ಮಾಡಲು ಬೊಂಬಾಯಿಯಲ್ಲಿ ಒಂದು ಶಾಖೆ, ಕರಾಚಿ, ಅಹಮದಾಬಾದ್, ಮದರಾಸುಗಳಲ್ಲಿ ಏಜನ್ಸಿಗಳನ್ನೂ ಏರ್ಪಡಿಸಲಾಯಿತು. ವ್ಯಾಪಾರ ತಕ್ಕಮಟ್ಟಿಗೆ ಕುದುರಿತು.

ಆದರೆ ವಿಶ್ವೇಶ್ವರಯ್ಯನವರು ಇದರಿಂದ ತೃಪ್ತರಾಗಲಿಲ್ಲ. ತಮ್ಮ ಸ್ವಂತ ವೆಚ್ಚದಿಂದ ವಿದೇಶಗಳ ಪ್ರವಾಸ ಕೈಗೊಂಡರು. ಜರ್ಮನಿ, ಅಮೆರಿಕ, ಇಂಗ್ಲೆಂಡ್, ಸ್ವೀಡನ್ ಈ ರಾಷ್ಟ್ರಗಳಲ್ಲಿ ಕೆಲವು ಕಾರ್ಖಾನೆಗಳು ಮರದ ಇದ್ದಿಲಿನಿಂದ ಕಬ್ಬಿಣ ತಯಾರಿಸು ತ್ತಿದ್ದುವು, ಇವರು ಅಧಿಕ ಅನುಭವ ಗಳಿಸಿದ್ದರು. ಭದ್ರಾವತಿ ಬಗೆಹರಿಸಲಾಗದ ಕೆಲವು ಸಮಸ್ಯೆಗಳನ್ನು ಈ ಕಾರ್ಖಾನೆಗೆ ಭೇಟಿ ಕೊಟ್ಟು ಪರಿಶೀಲಿಸಿದ್ದರಿಂದ ಬಗೆಹರಿಸಲು ಸಾಧ್ಯವಾಯಿತು. ಲಂಡನ್ ಟೈಮ್ಸ್ ಮತ್ತು ಇಂಗ್ಲೆಂಡಿನ ಹಲವು ಪತ್ರಿಕೆಗಳಲ್ಲಿ ಶ್ರೇಷ್ಠ ದರ್ಜೆಯ ಕಬ್ಬಿಣ ಮತ್ತು ಮರದ ಭಟ್ಟಿಯಿಂದ ಸಿದ್ಧವಾದ ಉಪಉತ್ಪನ್ನ ಗಳನ್ನು ಪೈಪೋಟಿ ದರದಲ್ಲಿ ಒದಗಿಸುತ್ತದೆ ಎಂದು ಜಾಹೀರಾತು ಪ್ರಕಟಿಸಿದರು. 5,000 ಟನ್ ಬೀಡುಕಬ್ಬಿಣ ಪ್ರತಿವರ್ಷ ಕೊಳ್ಳುವ ಗಿರಾಕಿಗಳನ್ನು ಗಿಟ್ಟಿಸಿದರು. ಅಮೇರಿಕ 5,000 ಟನ್ ಕಬ್ಬಿಣ ಕೊಳ್ಳಲು ಒಪ್ಪಿತು. ವರ್ತಕರು ಇನ್ನೂ ಹೆಚ್ಚು ಕೊಳ್ಳಲು ತಯಾರಾಗಿದ್ದರು. ಆದರೆ ಸರ್ಕಾರ ಅನುಮತಿ ನಿರಾಕರಿಸಿತು. ತನ್ನ ಕೈಗಾರಿಕೆಗೆ ಎಲ್ಲಿ ಧಕ್ಕೆ ಆದೀತೋ ಎಂಬ ಭೀತಿ.

ಕಬ್ಬಿಣ ಮತ್ತು ಇತರ ಉತ್ಪನ್ನಗಳ ಮಾರಾಟದಿಂದ ವಿಶ್ವೇಶ್ವರಯ್ಯನವರು ತೃಪ್ತ ರಾಗಲಿಲ್ಲ. ಬೆಂಗಳೂರು ಮತ್ತು ಮೈಸೂರು ನಗರಗಳಿಗೆ ನೀರು ಹಾಯಿಸುವ ದೊಡ್ಡ ವ್ಯಾಸದ ನಳಗಳು ಬೇಕಾಗಿದ್ದುವು. ವಿದೇಶಗಳಿಂದ ಆಮದು ಮಾಡಿಕೊಳ್ಳು ವುದಕ್ಕೆ ಪ್ರತಿಯಾಗಿ ಭದ್ರಾವತಿಯಲ್ಲೇ ಎರಕ ಹುಯ್ದು ತಯಾರಿಸುವ ವ್ಯವಸ್ಥೆ ಮಾಡಿದರು. ಕೊಳಾಯಿಗಳನ್ನು ಸಿದ್ಧಪಡಿಸುವ ಕಾರ್ಯ 1925ರಲ್ಲಿ ಪ್ರಾರಂಭ ವಾಯಿತು. ಇದರಿಂದ ವಿದೇಶವಿನಿಮಯದ ಉಳಿತಾಯ, ಸ್ವದೇಶಿಗೆ ಪ್ರೋತ್ಸಾಹ ಲಭಿಸಿತು. ಲಾಭದ ನಗುಮೊಗ, ನಷ್ಟದ ಅಳುಮೋರೆಯ ಸ್ಥಾನ ಪಡೆಯಿತು. ಭದ್ರಾವತಿ ನಿಂತಿತು ಭದ್ರಬುನಾದಿಯ ಮೇಲೆ. ಆರು ವರ್ಷ ಕಾಲದ ನಿರಂತರ ಶ್ರಮ

ದಿಂದ ನಷ್ಟ ಅನುಭವಿಸುತ್ತಿದ್ದ ಕಾರ್ಖಾನೆ ಲಾಭಗಳಿಸುವಂತೆ ಮಾಡಿ, ಸಂತೃಪ್ತರಾದ ವಿಶ್ವೇಶ್ವರಯ್ಯನವರು ಮೈಸೂರು ವುಡ್ ಡಿಸ್ಟಿಲೇಷನ್ ಮತ್ತು ಐರನ್ ವರ್ಕ್ಸ್ ಕಾರ್ಖಾನೆಯಿಂದ ನಿವೃತ್ತರಾಗುವ ತಮ್ಮ ಬಯಕೆ ಮಹಾರಾಜರಿಗೆ ತಿಳಿಸಿದರು. ಇವರನ್ನು ನಿವೃತ್ತಿಗೊಳಿಸಲು ಮಹಾರಾಜರ ಮನ ಒಪ್ಪದು. ಆದರೂ ಅವರ ಕೋರಿಕೆ ಕಡೆಗಣಿಸುವಂತಿಲ್ಲ. "ಆರೂವರೆ ವರ್ಷಗಳಿಂದ ತಮ್ಮ ಅಮೂಲ್ಯ ಕಾಲ ಮತ್ತು ಶಕ್ತಿಸಾಮರ್ಥ್ಯ ಭದ್ರಾವತಿಯ ಅಭಿವೃದ್ಧಿಗಾಗಿ ಧಾರೆಎರೆದಿರುತ್ತೀರಿ. ತಮ್ಮ ಮಹೋನ್ನತ ಸಾಧನೆ ನಮ್ಮ ಮೆಚ್ಚುಗೆ ಗಳಿಸಿದೆ." ಈ ವಾಕ್ಯಗಳಲ್ಲಿ ಮಹಾರಾಜರು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ವಿಶ್ವೇಶ್ವರಯ್ಯನವರು ಭದ್ರಾವತಿಯಿಂದ ನಿವೃತ್ತ ರಾಗುವ ಸುದ್ದಿ ತಿಳಿದ ಕಾರ್ಖಾನೆಯ ನಿರ್ಮಾಣದ ಕಂಪೆನಿಯ ಪೆರಿನ್ ಅವರು "ಮೈಸೂರು ಸರ್ಕಾರದ ಕಬ್ಬಿಣ ಕಾರ್ಖಾನೆಯ ಆಡಳಿತ ಮಂಡಲಿಯಿಂದ ತಾವು ನಿವೃತ್ತರಾಗಿರುವ ದುಃಖ ವ್ಯಕ್ತಪಡಿಸಲು ನನ್ನಿಂದ ಸಾಧ್ಯವಿಲ್ಲ. ನಮ್ಮ ವೈಯಕ್ತಿಕ ಶ್ರದ್ಧೆಯ ಪ್ರಯೋಜನ ಈ ಕಾರ್ಖಾನೆ ಪಡೆದಿದೆ ಎಂದಿರುತ್ತೀರಿ. ನೀವಿಲ್ಲದಿದ್ದರೆ ಈ ಕಾರ್ಖಾನೆಯೇ ಇರುತ್ತಿರಲಿಲ್ಲ. ನಿಮ್ಮಿಂದಲೇ ಇದು ನಿಂತಿದೆ. ಇದು ನನ್ನ ಅಭಿಮತ. ನನ್ನ ವಿಶಾಲ ಜೀವನದ ಅನುಭವದಲ್ಲಿ ನಿಮ್ಮಂಥ ಇನ್ನೊಬ್ಬ ವ್ಯಕ್ತಿ ನಾನು ನೋಡಿಲ್ಲ. ನಿಮ್ಮ ನೈತಿಕ ಜೀವನದ ಮಟ್ಟ, ಉದಾತ್ತ ಧ್ಯೇಯ, ದೇಶಪ್ರೇಮ ಇವುಗಳಿಗೆ ಮಾತ್ರವಲ್ಲ, ನಿಮ್ಮ ಅಸಾಧಾರಣ ಎಂಜಿನಿಯರಿಂಗ್ ಪ್ರತಿಭೆಗೆ ಸರಿದೂಗುವ ಇನ್ನೊಬ್ಬ ವ್ಯಕ್ತಿ ನಾ ಬೇರೆ ಕಾಣೆ. ಆದಕಾರಣ ನಿಮ್ಮಲ್ಲಿ ನಮಗೆ ಗಾಢ ವಿಶ್ವಾಸ, ಗೌರವ." ಈ ರೀತಿಯಲ್ಲಿ ಬಾಯಿತುಂಬ ಹೊಗಳಿರುತ್ತಾರ. "ತಮ್ಮ ಅಪಾರ ಕಾರ್ಯ ದಕ್ಷತೆ, ಕಾರ್ಯತತ್ಪರತೆ, ಅನುಭವ ಇವನ್ನು ಭದ್ರಾವತಿಯ ಭಾದ್ರತೆ ಮತ್ತು ಬೆಳವಣಿಗೆಗಾಗಿ ತಾವು ವಿನಿಯೋಗಿಸದೆ ಇದ್ದಲ್ಲಿ, ಅದು ಲಾಭದಾಯಕವಾಗುತ್ತಿತ್ತೇ, ಕಡೆಗೆ ಉಳಿಯು ತ್ತಿತ್ತೇ, ಇದೇ ಸಂದೇಹ" ಎಂದಿರುತ್ತಾರೆ ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್.

ಕಾರ್ಖಾನೆಗೆ ಸೇವೆ ಸಲ್ಲಿಸಿದ ಅವಧಿಯಲ್ಲಿ ವಿಶ್ವೇಶ್ವರಯ್ಯನವರು ಯಾವ ಸಂಭಾವನೆ ಯನ್ನೂ ಸ್ವೀಕರಿಸಲಿಲ್ಲ. ಇವರಿಗೆ 1,30,000 ರೂಪಾಯಿಗಳ ಗೌರವ ಸಂಭಾವನೆ ಸಲ್ಲಬೇಕಾಗಿತ್ತು. ಆದರೆ ಹಣ ತೆಗೆದುಕೊಳ್ಳಲು ನಿರಾಕರಿಸಿದರು. "ಹಣ ಗಳಿಸುವ ಆಸೆಯ ವಯಸ್ಸು ಕಳೆದುಹೋಯಿತು. ಹಣದಾಸೆ ನನ್ನಲ್ಲಿ ಉಡುಗಿಹೋಗಿದೆ" ಎಂದರು. ವೃತ್ತಿ ಶಿಕ್ಷಣಾಲಯ ಸ್ಥಾಪಿಸಲು ಸರ್ಕಾರಕ್ಕೆ ಒಪ್ಪಿಸಿದರು. ವೃತ್ತಿ ಶಿಕ್ಷಣಾಲ ಯದ ಪರಿಪೂರ್ಣ ರೂಪುರೇಷೆ ಸಿದ್ಧಮಾಡಿಕೊಟ್ಟರು. ಶಿಕ್ಷಣಾಲಯಕ್ಕೆ ವಿಶ್ವೇಶ್ವರಯ್ಯ ನವರ ಹೆಸರಿಡುವ ಸದಾಶಯ ಮಹಾರಾಜರಿಗೆ. ಅದಕ್ಕೂ ಅಯ್ಯನವರು ಸಮ್ಮತಿಸ ಲಿಲ್ಲ. ಶ್ರೀಮನ್ಮಹಾರಾಜರನ್ನೇ ಒತ್ತಾಯಪಡಿಸಿದರು ಅವರ ಹೆಸರಿಡಲು. ಶ್ರೀ ಜಯ ಚಾಮರಾಜೇಂದ್ರ ವೃತ್ತಿಶಿಕ್ಷಣಾಲಯವೆಂದು ನಾಮಾಂಕಿತವಾಗಿ ಸಹಸ್ರಾರು ತರುಣರಿಗೆ ಶಿಕ್ಷಣ ನೀಡಿ ಜೀವನೋಪಾಯ ಕಲ್ಪಿಸಿಕೊಟ್ಟಿದೆ.

ವಿಶ್ವೇಶ್ವರಯ್ಯನವರ ದೂರದೃಷ್ಟಿ, ದೇಶಪ್ರೇಮ, ವಿಪುಲ ಧೈರ್ಯ ಸಾಹಸ, ಅವಿರತ ಶ್ರಮದ ಫಲವಾಗಿ ಆ ಮಹಾಮಹಿಮಾನ್ವಿತರ ಸ್ಮಾರಕವಾಗಿ ಚಿರಸ್ಥಾಯಿ

ಯಾಗಿ ಬೆಳಗುತ್ತಿದೆ. ನವಂಬರ್ 10. 1975ರಲ್ಲಿ ಇದು ವಿಶ್ವೇಶ್ವರಯ್ಯನವರ ಹೆಸರು ಪಡೆದುದು ಅತ್ಯಂತ ಸೂಕ್ತವಾಗಿದೆ.

ವಿಶ್ವೇಶ್ವರಯ್ಯನವರು 1929ರಲ್ಲಿ ಕಾರ್ಖಾನೆಯ ಆಡಳಿತ ಮಂಡಲಿಯಿಂದ ವಿಮುಕ್ತ ರಾದರು. ಯೋಜನೆ ಸಿದ್ಧಪಡಿಸಿದ ಮೊದಲಿನಿಂದಲೂ ಇದರ ವಿರುದ್ಧದ ಅಪಪ್ರಚಾರ ಪುಂಖಾನುಪುಂಖವಾಗಿ ಪ್ರಕಟವಾಗುತ್ತಲೇ ಇತ್ತು. ಕಬ್ಬಿಣ ಮಾತ್ರವಲ್ಲದೆ ಉಕ್ಕನ್ನೂ ತಯಾರಿಸಬೇಕೆಂಬ ಸಲಹೆ 1931ರಲ್ಲಿ ಮಾಡಲಾಯಿತು. ಭದ್ರಾವತಿಯನ್ನು ಭದ್ರ ಬುನಾದಿಯ ಮೇಲೆ ಅತ್ಯಂತ ಶ್ರಮದಿಂದ ನಿಲ್ಲಿಸಿದ್ದರೂ ಉಕ್ಕು ತಯಾರಿಸುವುದು ಉತ್ತಮವೆಂಬ ಸಲಹೆ ಮತ್ತಷ್ಟು ಟೀಕೆಗೆ ಎಡೆಮಾಡಿಕೊಟ್ಟಿತು. ಅಗ್ನಿಕುಂಡಕ್ಕೆ ಇನ್ನಷ್ಟು ಸುರಿಯಲು ಮಾಡುತ್ತಿರುವ ಯುಕ್ತಿ ಇದು. ಅಗ್ನಿದೇವನನ್ನು ತೃಪ್ತಿಪಡಿ ಸಲು ಸಾಧ್ಯವೇ? ಎಷ್ಟು ಸುರಿದರೂ ಭಸ್ಮ. ಭದ್ರಾವತಿ ಒಂದು ಐರಾವತ, ಬಿಳಿಯ ಆನೆ. ಆನೆಯ ಹೊಟ್ಟೆಗೆ ಅರೆಕಾಸು ಶುಂಠಿ. ಗಾದೆಯೋ ಇದೆ. ಅರಣ್ಯ ಸುಟ್ಟು ಬೂದಿ ಮಾಡಿದ. ಬೆಟ್ಟ ಕಡಿದು ಬರಿದು ಮಾಡಿದ. ಕಪ್ಪು ಕಬ್ಬಿಣ ಕರಗಿಸಿ ಬಿಳಿಯ ಉಕ್ಕು ತಯಾರಿಸಲು ಹೊರಟಿದ್ದಾನೆ ಈ ಜಾದೂಗಾರ. ಖಜಾನೆ ಖಾಲಿ ಯಾಗುತ್ತಿದೆ. ಇದಕ್ಕೆ ಕೊಡಬೇಡಿ ಅವಕಾಶ. ಈ ಬಗೆಯ ಕುತ್ಸಿತ ಟೀಕೆ ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯ ಸಭೆಗಳಲ್ಲಿ ಮಾಡಲಾಗುತ್ತಿತ್ತು. ಭಾರತದ ನಾನಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿತ್ತು. ವಿಶ್ವೇಶ್ವರಯ್ಯನವರು ಇವೆಲ್ಲಕ್ಕೂ ಅಂಕಿ ಸಂಖ್ಯೆಗಳಿಂದ ಸಾಧಾರಿತವಾದ ಉತ್ತರ ಕೊಡುತ್ತಿದ್ದರು. ಸಮರ್ಥ ಸಮಜಾಯಿಷಿ ಕಾರ್ಖಾನೆಯ ಆಡಳಿತದ ಮುಖಾಂತರ ಪ್ರಕಟಿಸುತ್ತಿದ್ದರು. ಕಬ್ಬಿಣದ ಮತ್ತು ಉಕ್ಕು ದೇಶದ ಪುರೋಭಿವೃದ್ಧಿಗೆ ಅತ್ಯಗತ್ಯವಾದ ಮೂಲ ಕೈಗಾರಿಕೆ. ಇತರ ಕೈಗಾರಿಕೆ ಗಳ ಬೆಳವಣಿಗೆಗೆ ಮೂಲ ಆಧಾರ. ಸ್ವದೇಶ ವಿದೇಶಗಳಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು ನಷ್ಟ ಅನುಭವಿಸುತ್ತಲೇ ಸಾಗುತ್ತಿವೆ. ಆದರೂ ಕಾರ್ಖಾನೆಯನ್ನು ಮುಚ್ಚಿಬಿಡಿ ಎಂಬ ಟೀಕೆ ಎಲ್ಲಿಯೂ ಕೇಳಿಬರುತ್ತಿಲ್ಲ. ಇದಕ್ಕೆ ಪ್ರತಿಯಾಗಿ ನಷ್ಟ ಅನುಭವಿಸುತ್ತಿದ್ದ ಕಾರ್ಖಾನೆಯನ್ನು ವಿಶ್ವೇಶ್ವರಯ್ಯನವರು ಸ್ವಪ್ರಯತ್ನದಿಂದ ಲಾಭ ದಾಯಕವಾಗಿ ಪರಿವರ್ತಿಸಿದ್ದರು. ವಿದೇಶಗಳಿಂದಲೂ ಗಿರಾಕಿ ಗಳಿಸಿಕೊಂಡಿದ್ದರು. ಎಷ್ಟೇ ಸಮಜಾಯಿಷಿ ಕೊಟ್ಟರೂ ಅಪಪ್ರಚಾರ ಮುಂದುವರಿಯುತ್ತಲೇ ಇತ್ತು.

ಮಹಾತ್ಮಾ ಗಾಂಧೀಯವರು ಆರೋಗ್ಯ ಸುಧಾರಿಸಿಕೊಳ್ಳಲು 1927ರಲ್ಲಿ ಮೈಸೂ ರಿಗೆ ಆಗಮಿಸಿದ್ದರು. ಈ ಅವಕಾಶ ಪಡೆದು ಮೈಸೂರು ಹೈಕೋರ್ಟಿನ ಓರ್ವ ನಿವೃತ್ತ ನ್ಯಾಯಾಧೀಶ, ಕೃಷ್ಣರಾಜಸಾಗರ ಮತ್ತು ಭದ್ರಾವತಿ ಕಾರ್ಖಾನೆಯ ವಿರುದ್ಧ ತಾನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದ ಟೀಕೆಗಳನ್ನು ಸಂಗ್ರಹಿಸಿ ಮಹಾತ್ಮರಿಗೆ ಕಳುಹಿಸಿಕೊಟ್ಟರು. ಸಣ್ಣವರಾಗಲಿ ದೊಡ್ಡವರಾಗಲಿ ಮಕ್ಕಳಾಗಲಿ ಮಹಿಳೆಯರಾಗಲಿ ಪ್ರತಿಯೊಂದು ಪತ್ರಕ್ಕೂ, ಬಿಡುವಿಲ್ಲದ ದೇಶಸೇವೆಯಲ್ಲಿ ತೊಡಗಿರುತ್ತಿದ್ದ ಗಾಂಧೀಜಿ ಉತ್ತರ ಕೊಡುತ್ತಿದ್ದರು. ಗಾಂಧೀಜಿ ಮಿತ ಪರಿವಾರದೊಡನೆ ಮಹಾ ಸಾಯಕರೊಡನೆ

ಕೃಷ್ಣರಾಜಸಾಗರ ಮತ್ತು ಭದ್ರಾವತಿ ಸಂದರ್ಶಿಸಿದರು. ಅಧಿಕಾರ ವರ್ಗದಿಂದ ಸಮಗ್ರ ವಿಷಯ ಸಂಗ್ರಹಿಸಿದರು. ವಿಶ್ವೇಶ್ವರಯ್ಯನವರು ಕೇವಲ ಮಾತುಗಾರರಲ್ಲ. ರಚನಾತ್ಮಕ ಶಕ್ತಿಯ ದೇಶಪ್ರೇಮಿ. ತಮ್ಮ ಬುದ್ಧಿಶಕ್ತಿ, ಸಾಮರ್ಥ್ಯ, ಕ್ರಿಯಾತ್ಮಕ ಶಕ್ತಿ, ಎಲ್ಲವನ್ನೂ ಮೈಸೂರಿನ ಶ್ರೇಯೋಭಿವೃದ್ಧಿಗೆ ಸಮರ್ಪಿಸಿರುತ್ತಾರೆ. "ನಾಳೆಯೇ ಈ ಕಾರ್ಖಾನೆ ಮುಚ್ಚಬೇಕಾಗಿ ಬಂದರೂ ಚಿಂತೆಯಿಲ್ಲ, ಹಣ ಹೋದರೂ ದುಃಖಿಪಡ ಬೇಕಾದ್ದಿಲ್ಲ. ಹೊಸ ಉದ್ಯಮ ಸ್ಥಾಪಿಸಿ ನಡೆಸಿಕೊಂಡು ಬರುವ ಸಾಮರ್ಥ್ಯ ಭಾರತೀಯರು ಇದರಿಂದ ಗಳಿಸಿದ್ದಾರೆ. ಸಂಭವಿಸಬಹುದಾದ ಕಷ್ಟನಷ್ಟ ಪರಿಹರಿಸುವ ಧೈರ್ಯ ಮತ್ತು ಅನುಭವ ಗಳಿಸಿದ್ದಾರೆ." ಈ ರೀತಿಯಲ್ಲಿ ಉತ್ತರಿಸಿದರು. ಭಾಷಣ ಗಳಲ್ಲಿ ವಿಶ್ವೇಶ್ವರಯ್ಯನವರ ಗುಣಗಾನ ಮಾಡಿದರು. ಅವರು ಸಾಧಿಸಿರುವ ಕಾರ್ಯಗಳಿಂದ ಭಾರತ ಕೀರ್ತಿ ಗಳಿಸಿದೆ. ನಾವೆಲ್ಲ ಹೆಮ್ಮೆಪಡಬೇಕಾದ ವಿಷಯ. ವಿಶ್ವೇಶ್ವರಯ್ಯ ನವರ ವಿಷಯದಲ್ಲಿ ಮಹಾತ್ಮರ ಮನ ಕಲುಷಿತಗೊಳಿಸಲು ಮಾಡಿದ ಪ್ರಯತ್ನ ಫಲಿಸಲಿಲ್ಲ. ತದ್ವಿರುದ್ಧ ಅವರಲ್ಲಿ ಗಾಂಧೀಜಿ ತಾಳಿದ್ದ ಗೌರವಕ್ಕೆ ಮತ್ತಷ್ಟು ಪುಟ ವಿಟ್ಟಂತೆ ಆಯಿತು

ಸರ್ ಆಲ್‌ಫ್ರೆಡ್ ಚಾಟರ್‌ಟನ್ ಈತನನ್ನು ವಿಶ್ವೇಶ್ವರಯ್ಯನವರು ಸಂಸ್ಥಾನದ ಕೈಗಾರಿಕೆಯ ಡೈರೆಕ್ಟರಾಗಿ ನೇಮಿಸಿದ್ದರು. ನಿವೃತ್ತನಾಗಿ ಈತ ಇಂಗ್ಲೆಂಡಿಗೆ ಹಿಂತಿರುಗಿದ. 1925ರಲ್ಲಿ ರಾಯಲ್ ಸೊಸೈಟಿಯ ನೇತೃತ್ವದಲ್ಲಿ ಲಂಡನ್ನಿನಲ್ಲಿ ಭಾಷಣ ಮಾಡುತ್ತ ನಷ್ಟ ಅನುಭವಿಸುತ್ತಿರುವ ಭದ್ರಾವತಿ ಕಾರ್ಖಾನೆಯನ್ನು ಮುಚ್ಚಲೇಬೇಕಾದೀತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದ. ದೇಶವಿದೇಶಗಳಿಂದ ಕೇಳಿಬರುತ್ತಿದ್ದ ಎಲ್ಲ ಟೀಕೆಗಳನ್ನು ಕಡೆಗಣಿಸಿ ಕಾರ್ಖಾನೆಯನ್ನು ಭದ್ರ ತಳಹದಿಯ ಮೇಲೆ ನಿಲ್ಲಿಸಿ ವಿಶ್ವೇಶ್ವ ರಯ್ಯನವರು ಆಚಂದ್ರಾರ್ಕ ಕೀರ್ತಿ ಗಳಿಸಿರುತ್ತಾರೆ.

ಇದೇ ರೀತಿಯಲ್ಲಿ ಕೃಷ್ಣರಾಜಸಾಗರ ಕಟ್ಟುವುದರಲ್ಲಿ ವಿಶ್ವೇಶ್ವರಯ್ಯನವರು ತೋರಿದ ಸಾಹಸ ಮತ್ತು ತಾಳ್ಮೆ ಗಂಗೆಯನ್ನು ಭೂಮಿಗೆ ತರಲು ಸಗರ ಚಕ್ರವರ್ತಿ ಪಟ್ಟ ಪಾಡನ್ನು ನೆನಪಿಗೆ ತರುತ್ತದೆ. ಆಗಿನ ಕಾಲಕ್ಕೆ ಇದು ಅತ್ಯಂತ ದೊಡ್ಡ ಮಾನವ ನಿರ್ಮಿತ ಸಿಹಿನೀರಿನ ಸರೋವರ. ಇದನ್ನು ವೀಕ್ಷಿಸಿದ ಮಹಾತ್ಮಾ ಗಾಂಧಿಯವರು, ಕೃಷ್ಣರಾಜಸಾಗರವು ಪ್ರಪಂಚದಲ್ಲೇ ದ್ವಿತೀಯ ಅಗ್ರಗಣ್ಯ ಸ್ಥಾನ ಪಡೆಯುವುದಾಗಿ ತಿಳಿದು ಅತುಲ ಸಂತೋಷ ವ್ಯಕ್ತಪಡಿಸಿದರು.

1918ರಲ್ಲಿ ವಿಶ್ವೇಶ್ವರಯ್ಯನವರಿಂದ ಬೀಜಾಂಕುರವಾದ ಕಬ್ಬಿಣ ಕಾರ್ಖಾನೆ, ಬೀಳಲುಬಿಟ್ಟುಕೊಳ್ಳುತ್ತಾ ವಿಸ್ತಾರವಾಗಿ ಬೆಳೆಯುವ ವಟವೃಕ್ಷದಂತೆ, ಹೊಸ ಹೊಸ ನಿರ್ಮಾಣಗಳನ್ನೂ ವಿಭಾಗಗಳನ್ನೂ ಸ್ಥಾಪಿಸಿಕೊಳ್ಳುತ್ತಾ ಉಕ್ಕು ಮತ್ತು ಮಿಶ್ರ ಲೋಹಗಳ ತಯಾರಿಕೆಯಲ್ಲಿ ಪ್ರಮುಖ ಸ್ಥಾನ ಗಳಿಸಿದೆ. 1924ರಲ್ಲಿ ತಾತಾ ಕಂಪನಿ ಯನ್ನು ಏಜಂಟರ ಸ್ಥಾನದಿಂದ ಮುಕ್ತಗೊಳಿಸಲಾಯಿತು. ಆದರೂ ಉಭಯತ್ರರ

ನಡುವೆ ಸ್ನೇಹಬಾಂಧವ್ಯ ವೃದ್ಧಿಸುತ್ತ ಬಂದಿದೆ. 1929ರಲ್ಲಿ ನೀರು ಹಾಯಿಸುವ ದೊಡ್ಡ ಕೊಳವೆಗಳನ್ನು ಎರಕ ಹುಯ್ಯುವ ಕೆಲಸ ಪ್ರಾರಂಭಿಸಲಾಯಿತು. ಉಕ್ಕಿನ ಸರಳು ಮತ್ತು ಕಂಬಿ ಸಿದ್ಧಗೊಳಿಸುವ ವಿಭಾಗ ಕಾರ್ಯ ಪ್ರಾರಂಭಿಸಿತು. ಕಾರ್ಖಾನೆಯ ಕಿಟ್ಟನ್ನು ಬಳಸಿಕೊಳ್ಳುವ ಸಿಮೆಂಟ್ ಕಾರ್ಖಾನೆ ಇದರ ಅಂಗವಾಯಿತು. ಭದ್ರಾವತಿ ಕಾರ್ಖಾನೆಯು ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಎಂಬ ಹೆಸರು ಪಡೆಯಿತು. 1942ರಲ್ಲಿ ಮಿಶ್ರಲೋಹಗಳನ್ನು ತಯಾರಿಸುವ ಸಾಹಸದ ಕಾರ್ಯ ಕೈಗೊಳ್ಳಲಾಯಿತು. ಆಗಿನ ಕಾಲಕ್ಕೆ ಏಷ್ಯಾದಲ್ಲೇ ಮಿಶ್ರಲೋಹ ತಯಾರಿಸುವ ಅತಿ ದೊಡ್ಡ ಕಾರ್ಖಾನೆ ಎನಿಸಿಕೊಂಡಿತು. 1952ರಲ್ಲಿ ವಿದ್ಯುತ್ತಿನ ಬಳಕೆಯಿಂದ ಕಬ್ಬಿಣ ತಯಾರಿಸುವ ಎರಡು ಕುಲುಮೆಗಳು ಸ್ಥಾಪಿತವಾದುವು. 1952 ಕಾರ್ಖಾನೆಯ ಸ್ವರೂಪ ಬದಲಾವಣೆ ಹೊಂದಿತು. ಇದನ್ನು ಲಾಭದಾಯಕ ಕಂಪನಿಯಾಗಿ ಪರಿವರ್ತಿಸಲಾಯಿತು. ಕರ್ನಾಟಕ ಸರ್ಕಾರ ಮತ್ತು ಕೇಂದ್ರ ಸರ್ಕಾರ ಶೇಕಡಾ 60:40 ಪ್ರಮಾಣ ಹೂಡಲು ನಿರ್ಧರಿಸಿದುವು. 1963ರಲ್ಲಿ ಆಸ್ಟ್ರಿಯಾದ ಬೋಹಲರ್ ಕಂಪನಿಯೊಡನೆ ವರ್ಷಕ್ಕೆ 77,000 ಟನ್ ಮಿಶ್ರಲೋಹ ಮತ್ತು ವಿಶೇಷ ಜಾತಿಯ ಉಕ್ಕು ತಯಾರಿಸುವ ಒಪ್ಪಂದವಾಯಿತು. 1973ರಲ್ಲಿ ಕಾರ್ಖಾನೆಯ ಸುವರ್ಣ ಮಹೋತ್ಸವ ಆಚರಿಸಲ್ಪಟ್ಟಿತು. 1975ರಲ್ಲಿ ಮೂಲ ಸ್ಥಾಪಕರಾದ ವಿಶ್ವೇಶ್ವರಯ್ಯನವರ ಹೆಸರು ಚಿರಸ್ಥಾಯಿಗೊಳಿಸಲು ಕಂಪನಿಯ ಹೆಸರನ್ನು ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಎಂದು ಬದಲಾಯಿಸಲಾಯಿತು. 1980–81ರಲ್ಲಿ ಉತ್ಪಾದಿಸಲಾದ 64,602 ಟನ್ನಸ್ ಶ್ರೇಷ್ಠ ದರ್ಜೆಯ ಉಕ್ಕು ಮತ್ತು ಮಿಶ್ರಲೋಹ ಸಂಪೂರ್ಣವಾಗಿ ವಿಕ್ರೀತವಾಗಿ ಕಂಪನಿಯು ರೂ. 91 ಕೋಟಿ ಗಳಿಸಿತು.

12,500 ಹೆಚ್ಚು ಜನ ಕಾರ್ಯೋನ್ಮುಖರಾಗಿ ವಿಶ್ವೇಶ್ವರಯ್ಯನವರ ಕೀರ್ತಿ ಜ್ವಲಂತವಾಗಿರುವಂತೆ ಶ್ರಮಿಸುತ್ತಿದ್ದಾರೆ. "ಕಲ್ಪನೆಯಲ್ಲಿ, ಸಾಹಸಿಕ ಕೃತಿಯಲ್ಲಿ ವಿಶ್ವೇಶ್ವರಯ್ಯನವರ ಪ್ರತಿಯೊಂದು ನಿರ್ಮಾಣವೂ ಅವರ ಜೀವಂತ ಸ್ಮಾರಕಗಳಾಗಿ ತಲೆಎತ್ತಿ ನಿಂತಿವೆ" ಎಂಬ ಕೇಂದ್ರ ಸಚಿವ ಸ್ವರಣ್ ಸಿಂಗ್ ಅವರ ಸ್ವರ್ಣವಾಕ್ಯಗಳನ್ನು ಸ್ಮರಿಸಿಕೊಳ್ಳಬಹುದು.

# 12. ರೈಲು ಮತ್ತು ರೇವು

ಎಲ್ಲ ನಾಡಿನ ಜೀವನಾಡಿ ರೈಲು ಮತ್ತು ರಸ್ತೆ. ಹೃದಯದಿಂದ ದೇಹದ ಸಕಲ ಅಂಗಾಂಗಗಳಿಗೂ ರಕ್ತವನ್ನು ಒಯ್ಯುವ ರಕ್ತನಾಡಿಗಳಂತೆ, ದೇಶದ ಮೂಲೆಮೂಲೆಗಳಿಗೂ ಸರಕು ಸಾಗಾಣಿಕೆಯ ಸಾಧನ ರೈಲು ಮತ್ತು ರಸ್ತೆ. ಕಾಶ್ಮೀರದಿಂದ ಕನ್ಯಾಕುಮಾರಿ, ಕಲ್ಲಿಕೋಟೆಯಿಂದ ಕಲ್ಕತ್ತೆಯ ವರೆಗೆ ಸುಗಮ ಸಂಚಾರಕ್ಕೆ ಸಾಧನವಾಗಿರುವುದು ರಸ್ತೆ ಮತ್ತು ರೈಲು. ರೈಲು ಸುಲಭ ದರದಲ್ಲಿ ಸರಕು ಮತ್ತು ಪ್ರಯಾಣಿಕರನ್ನು ಒಯ್ಯುತ್ತದೆ. "ರೈಲು ಭಾರವಾಹಕವಾಗಿಯೂ, ಪ್ರಯಾಣಿಕರನ್ನು ಪ್ರಯಾಸವಿಲ್ಲದೆ ದೂರದೂರದ ಪ್ರದೇಶಗಳಿಗೆ ಸಾಗಿಸುವ ಸುಲಭ ಸಾಧನವಾಗಿ ದೀರ್ಘ ಕಾಲ ಉಳಿಯುವುದರಲ್ಲಿ ಸಂದೇಹವಿಲ್ಲ. ರೈಲು ಇಲ್ಲದ ಕಡೆಗಳಲ್ಲಿ ಗ್ರಾಮಗಳ ಉತ್ಪಾದನೆಗಳನ್ನು ನಗರಗಳಿಗೆ ಅಲ್ಪ ವೇಳೆಯಲ್ಲಿ ಸಾಗಿಸುವುದರಲ್ಲಿ ವ್ಯಾಪಾರೋದ್ಯಮಿಗಳಿಗೆ, ರೈತರಿಗೆ ಮೋಟಾರು ವಾಹನ ಪ್ರೋತ್ಸಾಹದಾಯಕವಾಗಿದೆ" ಇವು ವಿಶ್ವೇಶ್ವರಯ್ಯನವರ ತೂಕದ ವಾಕ್ಯಗಳು.

ಆಧುನಿಕ ಕಾಲದಲ್ಲಿ ರೈಲು ಮತ್ತು ರಸ್ತೆಯ ಮಾರ್ಗಗಳಿಲ್ಲದೆ ಗಗನದಲ್ಲಿ ಸಂಚರಿಸುವ ವಿಮಾನ ತ್ವರಿತಗತಿಯ ವಾಹಕವಾಗಿದೆ. ಆದರೆ ದರ ಅತಿ ದುಬಾರಿ. ಸಾಮಾನ್ಯನಿಗೆ ಎಟುಕಲಾಗದು. ಅಂಚೆ ಸಾಗಿಸಲು ಭಾರತ ಸರ್ಕಾರ ಇದನ್ನು ವ್ಯಾಪಕವಾಗಿ ಬಳಸುತ್ತಿದೆ. ಬಹುಕಾಲ ಇಡಲಾಗದ ವ್ಯವಸಾಯೋತ್ಪನ್ನಗಳನ್ನು ಗ್ರಾಮಗಳಿಂದ ಪೇಟೆಗೆ ಸಾಗಿಸಲು ಮೋಟಾರು ತುಂಬ ಉಪಯುಕ್ತವಾಗಿದೆ. ಈಗ ರೈಲು ರಾಷ್ಟ್ರೀಕೃತವಾಗಿ ರಾಷ್ಟ್ರದ ಆಸ್ತಿ ಆಗಿದೆ.

ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ಸೇವೆಗೆ ಕಂಕಣಬದ್ಧರಾಗಿ ಬಂದಾಗ ಸಂಸ್ಥಾನದಲ್ಲಿದ್ದ ರೈಲು ಮದರಾಸು ಮತ್ತು ದಕ್ಷಿಣ ಮಹಾರಾಷ್ಟ್ರ ಕಂಪನಿಯ ಸ್ವಾಧೀನದಲ್ಲಿತ್ತು. ಇದಕ್ಕೆ ಬಂಡವಾಳ ಒದಗಿಸಿದ್ದವರು ಆಂಗ್ಲ ಷೇರುದಾರರು. ಕಂಪನಿಯ ಮುಖ್ಯ ಕಚೇರಿ ಇದ್ದುದು ಲಂಡನ್ನಿನಲ್ಲಿ. ಲಾಭ ಹಂಚಿಕೆಯಾಗುತ್ತಿದ್ದುದು ಹೊರಗಿನವರಿಗೆ. ಭಾರತವನ್ನು ಕಬಳಿಸಲು, ಸೇನೆಯನ್ನು ಸಾಗಿಸಲು ಸುಲಭವಾಗುವಂತೆ ರೈಲು ಮಾರ್ಗಗಳನ್ನು ಬ್ರಿಟಿಷರು ಮೊದಲು ನಿರ್ಮಿಸಿದರು. ತದನಂತರ ಸಾರ್ವಜನಿಕರ ಸೇವೆಗೆ ದೊರೆಯಿತು. ಕಂಪನಿಯ ಅಧೀನದಲ್ಲಿದ್ದ ರೈಲುಮಾರ್ಗ, ವಾಹನ, ಎಂಜಿನ್, ಸರಕುಸಾಮಗ್ರಿ ಇವನ್ನು ಮೈಸೂರು ಮಹಾರಾಜ ಸರ್ಕಾರ ತನ್ನ ವಶಕ್ಕೆ ತೆಗೆದುಕೊಳ್ಳಬೇಕು. ಅನಂತರ ರೈಲುಮಾರ್ಗಗಳನ್ನು ವಿಸ್ತರಿಸಿ ಹೆಚ್ಚು

ಜನೋಪಯೋಗಿ ಮಾಡಬಹುದು. ಇದು ವಿಶ್ವೇಶ್ವರಯ್ಯನವರ ಘನ ಉದ್ದೇಶ. 1911ರಲ್ಲಿ ಮೈಸೂರು ಪಡೆದಿದ್ದುದು 411 ಮೈಲಿಗಳ ಉದ್ದದ ರೈಲುಮಾರ್ಗ. ಇವುಗಳ ಬೆಲೆ ರೂ. 2,51,64,185. ಸಂಸ್ಥಾನದ 12,254 ಪ್ರಜಾಸಂಖ್ಯೆಗೆ ಸರಾಸರಿ ಒಂದು ಮೈಲಿ ಉದ್ದದ ಹಳಿಗಳು. ಭಾರತದ ಇತರ ಭಾಗಗಳ ಈ ಸರಾಸರಿ 8,873. ವಿಶ್ವೇಶ್ವರಯ್ಯನವರು ದಿವಾನರಾದಾಗ ರೈಲಿನ ಒಟ್ಟು ಆದಾಯ ರೂ. 37,21,674. ದಿವಾನ್ ಪದವಿಯಿಂದ ನಿವೃತ್ತರಾಗುವ ಮೊದಲು 1918–19ರಲ್ಲಿ ವೃದ್ಧಿಸಿದ ಆದಾಯ ರೂ. 53,00,806. ಇದು 1948–49ರಲ್ಲಿ ರೂ. 2,00,48,000ಕ್ಕೆ ಏರಿತು. ಮೈಸೂರು ಸಂಸ್ಥಾನ ಕನಿಷ್ಠ ಒಂದು ಸಾವಿರ ಮೈಲಿಗಳ ಉದ್ದದ ರೈಲು ಮಾರ್ಗ ಹೊಂದಿರಬೇಕೆಂದು ಇವರ ಉದ್ದೇಶ. ರೈಲುಮಾರ್ಗ ನಿರ್ಮಿಸಲು ಸರ್ವೆ ಕಾರ್ಯ ಕೈಗೊಳ್ಳಲು ಇಂಡಿಯಾ ಸರ್ಕಾರದ ರೈಲ್ವೇ ಅಧಿಕಾರಿಯ ಸೇವೆ ತಾತ್ಕಾಲಿಕವಾಗಿ ಪಡೆದರು.

1911ಕ್ಕೆ ಪೂರ್ವಭಾವಿಯಾಗಿ ಮೈಸೂರು ವಿಭಾಗ ರೈಲು ನಡೆಸಿಕೊಂಡು ಬರಲು ಯೋಜನೆ ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದ್ದರು. ಸರ್ಕಾರ ಮತ್ತು ರೈಲು ಕಂಪನಿಯ ಒಪ್ಪಂದ 1937ಕ್ಕೆ ಅಂತ್ಯಗೊಳ್ಳಲಿತ್ತು. 25 ವರ್ಷಗಳ ದೀರ್ಘ ಕಾಲ ಆಡಳಿತ ನಡೆಸಿ ಅನೇಕರು ಅನುಭವ ಗಳಿಸಿದ್ದರು. ಕಂಪನಿಯಿಂದ ಸರ್ಕಾರ ಆಡಳಿತ ವಹಿಸಿ ಕೊಳ್ಳುವುದರಿಂದ ಆಡಳಿತ ನಡೆಸಲು ತೊಂದರೆ ಆಗದು. ಸುಗಮವಾಗಿ ನಡೆಸಿಕೊಂಡು ಹೋಗಬಹುದು. ಇದು ಅವರ ವಾದ. 1950ರಲ್ಲಿ ಮೈಸೂರು 757 ಮೈಲಿ ಉದ್ದದ ರೈಲುಮಾರ್ಗ ಪಡೆದಿತ್ತು. 1914ರಲ್ಲಿ 249 ಮೈಲಿ ಉದ್ದದ ರೈಲುಮಾರ್ಗ ಸಂಸ್ಥಾನದಲ್ಲಿ ನಿರ್ಮಿಸಲು ಇಂಡಿಯಾ ಸರ್ಕಾರ ಅನುಮತಿ ಕೊಟ್ಟಿತು. ಬೆಂಗಳೂರಿನಿಂದ ಮದರಾಸು ಪ್ರಾಂತ್ಯದ ಹೊಸೂರಿಗೆ 30.69ಮೈಲಿಗಳ ಮಾರ್ಗದ ಯೋಜನೆ ಸಿದ್ಧವಾಯಿತು. ಇದಲ್ಲದೆ 146 ಮೈಲಿಗಳ ಉದ್ದನೆಯ ಇತರ ಮಾರ್ಗಗಳ ಯೋಜನೆಯೂ ಸಿದ್ಧವಾಯಿತು. ಇವೆಲ್ಲವೂ ಇಂಡಿಯಾ ಸರ್ಕಾರದ ಅಧೀನದ ರೈಲ್ವೇ ಬೋರ್ಡಿನ ಮಂಜೂರಾತಿ ಪಡೆಯಬೇಕಾಗಿತ್ತು. 1918ರಲ್ಲಿ ಮೈಸೂರು ಸರ್ಕಾರದ ವಶಕ್ಕೆ ಬೀರೂರು–ಶಿವಮೊಗ್ಗ, ಬೆಂಗಳೂರು–ಮೈಸೂರು, ಮೈಸೂರು–ನಂಜನಗೂಡು ವಿಭಾಗಗಳು ಬಂದುವು.

ಹೊಸದಾಗಿ ಸ್ಥಾಪಿತವಾದ ರೈಲ್ವೆ ಇಲಾಖೆ ಹೊಸ ರೈಲುಮಾರ್ಗಗಳ ನಿರ್ಮಾಣಕ್ಕೆ ಗಮನ ಹರಿಸಿತು. ವ್ಯಾಪಾರ ಸ್ಥಳವಾದ ಅರಸೀಕೆರೆ, ಬೆಂಗಳೂರು ಮತ್ತು ಮೈಸೂರು ನಗರಗಳಿಂದ ಹೆಚ್ಚುಕಡಮೆ ಸಮಾನಾಂತರದಲ್ಲಿದೆ. ಆದರೆ ಮೈಸೂರಿನ ಪ್ರಯಾಣಿಕರು ಬೆಂಗಳೂರು ಮಾರ್ಗವಾಗಿ ಅರಸೀಕೆರೆಗೆ ಹೋಗಬೇಕಾಗಿತ್ತು. ಅರಸೀಕೆರೆ ಬೆಂಗಳೂರು–ಪುಣೆ ಮಾರ್ಗದಲ್ಲಿ ಒಂದು ಮುಖ್ಯ ನಿಲ್ದಾಣ. ಮೈಸೂರಿನಿಂದ ಅರಸೀಕೆರೆಗೆ ನೇರ ರೈಲುಮಾರ್ಗ ನಿರ್ಮಿಸುವುದರಿಂದ ಪುಣೆ, ಶಿವಮೊಗ್ಗ ಇತ್ತಕಡೆ ಸಾಗಲು ಸುಗಮ ವಾಗುತ್ತೆ ಎಂದು ಈ ಮಾರ್ಗದ ನಿರ್ಮಾಣಕಾರ್ಯ ನವಂಬರ್ 1913ರಲ್ಲಿ ಕೈಗೊಳ್ಳ

ಲಾಯಿತು. ಈ ಮಾರ್ಗದ ನಿರ್ಮಾಣಕಾರ್ಯ ಎಂಜಿನಿಯರುಗಳ ಪ್ರತಿಭೆಗೆ ಸವಾಲಾಗಿತ್ತು. ಮೈಸೂರು ಬೆಂಗಳೂರುಗಳಿಗಿಂತ ಹಾಸನ ಸಮುದ್ರಮಟ್ಟದಿಂದ ಹೆಚ್ಚಿನ ಎತ್ತರದಲ್ಲಿದೆ. ಹಾಸನ ಮುಖಾಂತರ ಹಾದುಹೋಗುವ ಈ ನಿರ್ಮಾಣಕ್ಕೆ ಬಹಳ ಶ್ರಮಿಸಬೇಕಾಯಿತು. ಬಂಡೆ ಸೀಳಿ, ಒಡೆದು, ಹಳ್ಳ ತೋಡಿ, ಸುರಂಗ ನಿರ್ಮಿಸಿ, ಸೇತುವೆ ಕಟ್ಟಿ ಮಾರ್ಗ ನಿರ್ಮಿಸಲಾಯಿತು. ಹೇಮಾವತಿಗೆ ಅಡ್ಡಲಾಗಿ ಕಟ್ಟಿರುವ ಸೇತುವೆ ಅತಿ ಎತ್ತರದಲ್ಲಿ ಕಟ್ಟಲಾಗಿರುವ ಸೇತುವೆ ಎನಿಸಿಕೊಂಡಿದೆ. ಮೈಸೂರಿನಿಂದ ಈರೋಡಿಗೆ ರೈಲುಮಾರ್ಗ ನಿರ್ಮಿಸುವ ಆಕಾಂಕ್ಷೆ ತೀವ್ರವಾಗಿತ್ತು ವಿಶ್ವೇಶ್ವರಯ್ಯನವರಲ್ಲಿ. ಇದರ ನಿರ್ಮಾಣ ದಿಂದ ದಕ್ಷಿಣ ಭಾರತದ ಸುಪ್ರಸಿದ್ಧ ಯಾತ್ರಾ ಸ್ಥಳ ಹಾಗೂ ಚರಿತ್ರಾರ್ಹ ಸ್ಥಳಗಳೂ ವ್ಯಾಪಾರ ಕೇಂದ್ರಗಳೂ ಆದ ಕುಂಭಕೋಣ, ತಂಜಾವೂರು, ಮಧುರೆ, ತಿರುಚಿರಪಳ್ಳಿ, ಶ್ರೀರಂಗ ಇವುಗಳಿಗೆ ಪುಣೆಯಿಂದ ಕನ್ಯಾಕುಮಾರಿಯ ವರೆಗೆ ನೇರವಾಗಿ ಸಂಚರಿಸ ಬಹುದು. ಕೈಗಾರಿಕೆ ಕೇಂದ್ರವಾದ ಕೊಯಮತ್ತೂರಿಗೂ ಸಮೀಪವಾಗುತ್ತಿತ್ತು. ಈಗಲೂ ಸಹ ಈ ಮಾರ್ಗದ ನಿರ್ಮಾಣವಾಗಿರುವುದಿಲ್ಲ. ನೂರಾರು ಮೈಲಿಗಳ ಬಳಸುಮಾರ್ಗದಲ್ಲಿ ಹೋಗಬೇಕಾಗಿದೆ. ಚಿಕ್ಕಜಾಜೂರು—ಚಿತ್ರದುರ್ಗ; ಬೆಂಗಳೂರು—ಚಿಕ್ಕಬಳ್ಳಾಪುರ—ಕೋಲಾರ ಈ ಮಾರ್ಗಗಳು ಅಯ್ಯನವರ ಕಾಲದಲ್ಲೇ ಸಿದ್ಧವಾದುವು. ಚಿಕ್ಕಬಳ್ಳಾಪುರದ ಸಣ್ಣ ರೈಲಿಗೆ ಒಂದು ಕಂಪನಿ ಸ್ಥಾಪಿತವಾಗಿ ಬಂಡವಾಳ ಶೇಖರಿಸಿತು. ಆಡಳಿತ ಕೇಂದ್ರವಾದ ಬೆಂಗಳೂರಿನಿಂದ ಪ್ರತಿ ಜಿಲ್ಲೆಯ ಮುಖ್ಯ ಪಟ್ಟಣಕ್ಕೂ ರೈಲುಮಾರ್ಗ ನಿರ್ಮಿಸುವುದು ಇವರ ಗುರಿ. ಈ ಕೆಳಕಂಡ ರೈಲುಮಾರ್ಗ ಗಳನ್ನು ನಿರ್ಮಿಸಲು ವಿಶ್ವೇಶ್ವರಯ್ಯನವರು ಹವಣಿಸುತ್ತಿದ್ದರು:—

ಮೈಸೂರಿನಿಂದ ಹಾಸನದ ಮಾರ್ಗವಾಗಿ ಅರಸೀಕೆರೆ.

ಬೆಂಗಳೂರು—ಚಿಕ್ಕಬಳ್ಳಾಪುರ—ಕೋಲಾರ—ಬೌರಿಂಗ್‌ಪೇಟೆ.

ಚಿತ್ರದುರ್ಗ—ಚಿಕ್ಕಜಾಜೂರು.

ಅರಸೀಕೆರೆ—ಹಾಸನ—ಮಂಗಳೂರು.

ಹಾಸನ—ಚಿಕ್ಕಮಗಳೂರು.

ಚಿಕ್ಕಮಗಳೂರು—ಕಡೂರು.

ತರೀಕೆರೆ—ನರಸಿಂಹರಾಜಪುರ (ಹಬೆಯ ಟ್ರಾಂ).

ನರಸಿಂಹರಾಜಪುರ—ಶೃಂಗೇರಿ.

ಶಿವಮೊಗ್ಗ—ಭಟ್ಕಳ.

ತಡಸ—ಹೆಬ್ಬೆ.

ಮೈಸೂರು—ಶಾಕನಕೋಟೆ.

ಮೈಸೂರು—ಕೊಡಗು—ವೀರರಾಜಪೇಟೆ.

ಮೈಸೂರು—ಈರೋಡು

ಬೆಂಗಳೂರು—ಹೊಸೂರು—ಸೇಲಂ

ತರೀಕೆರೆ–ನರಸಿಂಹರಾಜಪುರ ಹಬೆಯ ಎಂಜಿನ್ ಸಹಾಯದಿಂದ ಸಾಗುವ ಟ್ರಾಂ ಆಗಿತ್ತು. ಆದಕಾರಣ ಇಂಡಿಯಾ ಸರ್ಕಾರದ ಅನುಮತಿ ಅನಗತ್ಯವಾಗಿತ್ತು. ಬೇಗನೆ ನಿರ್ಮಿಸಲ್ಪಟ್ಟಿತು. ಮೇಲ್ಕಾಣಿಸಿರುವ ರೈಲುಗಳಲ್ಲಿ ಚಿಕ್ಕಜಾಜೂರು–ಚಿತ್ರದುರ್ಗ, ಬೆಂಗಳೂರು–ಚಿಕ್ಕಬಳ್ಳಾಪುರ–ಕೋಲಾರ ಅವರ ಅವಧಿಯಲ್ಲೇ ಪೂರ್ಣಗೊಂಡುವು. ಬೀರೂರು–ಶಿವಮೊಗ್ಗ–ತಾಳಗುಪ್ಪ; ನಂಜನಗೂಡು–ಚಾಮರಾಜನಗರ ಮತ್ತು ಇತ್ತೀಚೆಗೆ ಹಾಸನ–ಮಂಗಳೂರು ರೈಲ್ವೆಗಳು ಪೂರ್ಣಗೊಂಡಿವೆ. ವಿಶ್ವೇಶ್ವರಯ್ಯನವರು ಸಂಸ್ಥಾನದ ಆಡಳಿತ ಸೂತ್ರ ವಹಿಸಿಕೊಂಡಾಗ ಸಂಸ್ಥಾನದಲ್ಲಿದ್ದ ರೈಲುಮಾರ್ಗಗಳ ನೀಳ 411 ಮೈಲಿಗಳು. ಅವರು ನಿವೃತ್ತರಾಗುವ ಕಾಲಕ್ಕೆ 616 ಮೈಲಿಗಳಾಗಿದ್ದುವು. 46 ಮೈಲಿಗಳ ಮಾರ್ಗ ನಿರ್ಮಾಣದ ಹಂತದಲ್ಲಿತ್ತು.

ಬೆಂಗಳೂರು ನಗರದ ಸುಗಮ ಸಂಚಾರಕ್ಕೆ ವಿದ್ಯುತ್‌ಚಾಲಿತ 'ಟ್ರಾಂ' ಸೌಲಭ್ಯ ಕಲ್ಪಿಸಿ ಕೊಡಲು ಉದ್ದೇಶಿಸಿದ್ದರು. ನಕ್ಷೆ ಮತ್ತು ಅಂದಾಜು ಸಿದ್ಧವಾದುವು. ಯುದ್ಧದ ಪರಿಣಾಮದಿಂದ ಬೇಕಾದ ಸರಕು ಸಾಮಗ್ರಿಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದು ಕಠಿಣವಾಗಿತ್ತು. ಆ ಕಾಲಕ್ಕೆ ದಂಡಿನ ಪ್ರದೇಶ ಬ್ರಿಟಿಷ್ ರೆಸಿಡೆಂಟರ ಆಡಳಿತದಲ್ಲಿತ್ತು. ಆದಾಯ–ವ್ಯಯದ ಬಗೆಗೆ ಏಕಮತ ಮೂಡಲಿಲ್ಲ. ಯೋಜನೆ ಕೈಬಿಡಲಾಯಿತು.

ನದಿ, ಬೆಟ್ಟ, ಕಾಡು, ಖನಿಜ ಮತ್ತು ಹಲವಾರು ಕೈಗಾರಿಕೆಗಳಿಂದ ಭರಿತವಾದ ಮೈಸೂರು ಮುನ್ನಡೆಯುತ್ತಿತ್ತು. ಆದರೆ ಸಮುದ್ರ ತೀರದ ಬಂದರು ಇಲ್ಲದೆ ಆಮದು–ರಫ್ತಿಗೆ ಅನುಕೂಲವಿರಲಿಲ್ಲ. ಸಮುದ್ರದಾಚೆಯ ದೇಶಗಳೊಡನೆ ವ್ಯಾಪಾರ ವೃದ್ಧಿಸಲು ರೇವು ಪಟ್ಟಣ ತುಂಬ ಸಹಕಾರಿ, ಅಗತ್ಯ. ಹೊರವ್ಯಾಪಾರ ಮದರಾಸು, ಬೊಂಬಾಯಿ ಬಂದರುಗಳ ಮಾರ್ಗವಾಗಿ ನಡೆಯಬೇಕಾಗಿತ್ತು. ಪರಾವಲಂಬಿಯಾಗ ಬೇಕಾಗಿತ್ತು. ಮೈಸೂರು ಸಮುದ್ರ ತೀರ ಪಡೆದಿರಲಿಲ್ಲ. ಪೂರ್ವ ತೀರಕ್ಕಿಂತ ಪಶ್ಚಿಮ ತೀರ ಮೈಸೂರಿನ ಗಡಿಯಿಂದ ಸಮೀಪ. ಹೀಗೆ ಯೋಚಿಸಿ ಅರಬ್ಬೀ ಸಮುದ್ರದ ಭಟ್ಕಳ ಶಿವಮೊಗ್ಗದಿಂದ 58 ಮೈಲಿ ಸಮೀಪ. ಬಂದರು ನಿರ್ಮಿಸಲು ಯೋಗ್ಯವಾದುದು. ದೊಡ್ಡ ಜಹಜುಗಳು ಭಟ್ಕಳ ತೀರದಿಂದ ಒಂದು ಮೈಲಿ ದೂರದಲ್ಲಿ ಲಂಗರು ಹಾಕುತ್ತವೆ. ದೊಡ್ಡ ಜಹಜುಗಳು ತೀರ ಪ್ರದೇಶಕ್ಕೆ ಬರಲು ಸಮುದ್ರ ಸಾಕಷ್ಟು ಆಳವಿಲ್ಲ. ನಾಡುದೋಣಿಗಳು ಜಹಜಿನ ಸಮೀಪಕ್ಕೆ ಹೋಗಿ ಪ್ರಯಾಣಿಕರನ್ನೂ ಸರಕು ಸರಂಜಾಮುಗಳನ್ನೂ ತೀರಕ್ಕೆ ತರುತ್ತವೆ. ಭಟ್ಕಳದಿಂದ ಗೋಕರ್ಣ ಸಮೀಪದ ಯಾತ್ರಾಸ್ಥಳ. ಮರಳು ತೆಗೆಸಿ ಕಾಲುವೆ ನಿರ್ಮಿಸುವುದರಿಂದ ಜಹಜುಗಳೂ ಬಂದರಿಗೆ ಬಂದು ಲಂಗರು ಹಾಕಬಹುದು. ಇಲ್ಲಿಂದ ರೈಲು ಮತ್ತು ರಸ್ತೆಯ ಮಾರ್ಗವಾಗಿ ಸರಕು ಸಾಗಿಸಬಹುದು. ಮಂಗಳೂರು, ಕಾರವಾರ, ಭಟ್ಕಳ ಇವುಗಳಲ್ಲಿ ಭಟ್ಕಳ ಸರ್ವಥಾ ಬಂದರಾಗಲು ಸೂಕ್ತವೆಂದು ತೀರ್ಮಾನಿಸಲಾಯಿತು. ಮಲೆನಾಡಿನ ಅರಣ್ಯದ ಸಾಗವಾನಿ ಮರಗಳು, ಗಂಧದ ಮರದ ತುಂಡುಗಳು; ಇಲ್ಲಿ ಬೆಳೆ

ಯಾಗುವ ಅಡಕೆ, ಕಾಫಿ, ಏಲಕ್ಕಿ, ಹಣ್ಣುಹಂಪಲು, ಭದ್ರಾವತಿ ಕಾರ್ಖಾನೆಯ ಕಬ್ಬಿಣ; ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು, ಅಭ್ರಕ ಮೊದಲಾದುವನ್ನು ರಫ್ತುಮಾಡಲು ಸಿದ್ಧವಸ್ತುಗಳನ್ನು ವಿದೇಶಗಳಿಂದ ತರಿಸಿಕೊಳ್ಳಲು ಬಂದರು ತುಂಬ ಅನುಕೂಲ. ಬಂದರು ಕಟ್ಟೆ ನಿರ್ಮಾಣಕ್ಕೆ 1918ರಲ್ಲಿ ಮಾಡಲಾದ ಅಂದಾಜು ಒಂದು ಕೋಟಿ.

ಆದರೆ ಇದ್ದ ದೊಡ್ಡ ಆತಂಕ ಭಟ್ಕಳ ಆಗ ಬೊಂಬಾಯಿ ಪ್ರಾಂತಕ್ಕೆ ಸೇರಿತ್ತು. ಆಶಾವಾದಿ ಅಯ್ಯನವರಿಗೆ ಭಟ್ಕಳವನ್ನು ಇಂಡಿಯಾ ಸರಕಾರದಿಂದ ನಿರಂತರ ಗುತ್ತಿಗೆ ಮೇಲೆ ಪಡೆಯುವ ಆಸೆ. ಯೋಜನೆಯ ವಿವರ, ನಕ್ಷೆ, ಅಂದಾಜು ಎಲ್ಲವನ್ನೂ ಇಂಡಿಯಾ ಸರ್ಕಾರದ ಅಂಗೀಕಾರಕ್ಕೆ ಕಳುಹಿಸಿಕೊಟ್ಟರು. ವೆಚ್ಚ ಮೈಸೂರು ಸರ್ಕಾರ ವಹಿಸಿಕೊಳ್ಳಲು ಸಿದ್ಧವಿದೆ ಎಂದರು. ಬೊಂಬಾಯಿ ಸರ್ಕಾರ ಭಟ್ಕಳ ಬಂದರದ ಸದುಪಯೋಗ ಮಾಡಿಕೊಳ್ಳುತ್ತಿಲ್ಲ. ಅತಿ ಶ್ರೇಷ್ಠವಾದ ಬೊಂಬಾಯಿ ಬಂದರು ಅದು ಪಡೆದಿದೆ. ಆದಕಾರಣ ಈ ಬಂದರಿನ ಅಗತ್ಯ ಅದಕ್ಕಿಲ್ಲ. ಪ್ರಭು ಪ್ರಜೆ ಎಲ್ಲರೂ ವಿಶ್ವೇಶ್ವರಯ್ಯನವರ ಸಲಹೆಗೆ ಅತುಳಾನಂದದಿಂದ ಬೆಂಬಲ ಘೋಷಿಸಿದರು. ಆದರೇನು, ಬ್ರಿಟಿಷ್ ಪ್ರಭುತ್ವ ಭಟ್ಕಳವನ್ನು ಮೈಸೂರಿಗೆ ಬಿಟ್ಟುಕೊಡಲು ಒಪ್ಪಲಿಲ್ಲ. ಮೈಸೂರಿನ ಆಸೆ ಮಣ್ಣುಗೂಡಿತು. .

ಟಿಪ್ಪು ಸುಲ್ತಾನನೂ ಬಂದರಿನ ಪ್ರಾಮುಖ್ಯತೆ ಅರಿತು, ಕಲ್ಲಿಕೋಟೆಯನ್ನು ವಶ ಪಡಿಸಿಕೊಂಡ. ಕೋಟೆ ಕಟ್ಟಿದ. ಮಂಗಳೂರನ್ನು ವಶಪಡಿಸಿಕೊಳ್ಳಲು ವಿಶ್ವಪ್ರಯತ್ನ ನಡೆಸಿ ವಿಫಲನಾದ. ದೀರ್ಘಾವಧಿ ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲರು 1914ರಲ್ಲಿ ಅಲ್ಪಾವಧಿ ಹೈದರಾಬಾದಿನ ಪ್ರಧಾನಿಯಾಗಿದ್ದರು. ಮೈಸೂರಿಗಿಂತ ದೊಡ್ಡದಾದ ಹೈದರಾಬಾದಿಗೂ ಸಮುದ್ರತೀರವಿರಲಿಲ್ಲ. ವಿಶಾಖ ಪಟ್ಟಣ ಅಥವಾ ಗೋವಾ ಪಡೆದು ಬಂದರಾಗಿ ಮಾಡಲು ಮಿರ್ಜಾ ಪ್ರಯತ್ನಿಸಿದರು. ಗೋವಾ ಅತ್ಯಂತ ಶ್ರೇಷ್ಠ ಎನಿಸಿಕೊಳ್ಳುವ ಸಕಲ ಪ್ರಕೃತಿದತ್ತ ಸೌಲಭ್ಯ ಪಡೆದಿದೆ. ವಿಶಾಖಪಟ್ಟಣ ಬ್ರಿಟಿಷರಿಗೆ ಸೇರಿತ್ತು. ಗೋವಾ ಪೋರ್ತುಗೀಸರ ಸ್ವಾಧೀನದಲ್ಲಿತ್ತು. ಗುತ್ತಿಗೆಯ ಮೇಲೆ ಗೋವಾ ಬಂದರು ಬಿಟ್ಟುಕೊಡಲು ಗೋವಾ ಸಿದ್ಧವಿತ್ತು. ಆದರೆ ಅದರ ಮೇಲಿನ ಒಡೆತನ ಬಿಟ್ಟುಕೊಡಲು ಒಪ್ಪಲಿಲ್ಲ. ಮಿರ್ಜಾ ಅವರ ಪ್ರಯತ್ನವೂ ಫಲಪ್ರದವಾಗಲಿಲ್ಲ. ರೇವು ಪಟ್ಟಣದ ಪ್ರಾಮುಖ್ಯತೆ ಇವುಗಳಿಂದ ಅರಿಯಬಹುದು.

ಭಟ್ಕಳ, ಮಂಗಳೂರು, ಕಾರವಾರ ತೀರಪ್ರದೇಶಗಳು ವಿಶಾಲ ಕರ್ನಾಟಕದ ಅಧೀನವಾಗಿವೆ. ಮಂಗಳೂರನ್ನು ಉತ್ತಮ ಬಂದರಾಗಿ ಮಾಡಲಾಗಿದೆ. ಕಾರವಾರ ವನ್ನು ಶ್ರೇಷ್ಠ ಹಡಗುಕಟ್ಟೆಯಾಗಿ ಮಾಡಲಾಗಿದೆ. ಭಟ್ಕಳ ಬಂದರಾಗಲು ಬೇಡವಾಗಿದೆ. ತನ್ನನ್ನು ಉಪೇಕ್ಷಿಸಿರುವುದಕ್ಕಾಗಿ ರೋದಿಸುತ್ತಿದೆ.

# 13. ಸಂಪದಭಿವೃದ್ಧಿಯ ಸಾಧನೆ

ಈ ಆಧುನಿಕ ಯುಗದಲ್ಲಿ ಯಾವ ರಾಷ್ಟ್ರವೂ ಕೇವಲ ವ್ಯವಸಾಯವೊಂದರಿಂದಲೇ ಸಂಪದ್ಭರಿತವೂ ಪ್ರಭಾವಶಾಲಿಯೂ ಆಗಿ ಬಾಳಲು ಸಾಧ್ಯವಾಗದು. ಇದು ವಿಶ್ವೇಶ್ವರಯ್ಯನವರ ನಿರ್ದಿಷ್ಟ ನಿಲುವು. ಔದ್ಯೋಗೀಕರಣವೂ ಅಗತ್ಯ. ಒಂದಕ್ಕೊಂದು ಪೂರಕ. ಔದ್ಯೋಗೀಕರಣ ಕಡೆಗಣಿಸಿ ಅನ್ಯಮಾರ್ಗ ಅನುಸರಿಸುವುದು ಮೂರ್ಖತನವಾದೀತು, ಎಚ್ಚರಿಕೆ ನೀಡಿರುತ್ತಾರೆ ಅಯ್ಯನವರು. ಇಂಗ್ಲೆಂಡ್, ಜರ್ಮನಿ, ಜಪಾನ್, ಕೆನಡ, ಅಮೇರಿಕ, ಆಸ್ಟ್ರೇಲಿಯಾ ಸಾಗಿರುವ ಪಥದಲ್ಲಿಯೇ ಭಾರತವೂ ಸಾಗಬೇಕು.

ಒಂದು ಕಾಲಕ್ಕೆ ರಷ್ಯ ತುಂಬ ಹಿಂದುಳಿದ ರಾಷ್ಟ್ರ ಎನಿಸಿಕೊಂಡಿತ್ತು. ವಿಶ್ವಸಂಗ್ರಾಮದಲ್ಲಿ ಹಿಟ್ಲರನ ಹೊಡೆತಕ್ಕೆ ರಷ್ಯ ತತ್ತರಿಸಿಹೋಯಿತು. ಆಧುನಿಕ ಅಸ್ತ್ರಶಸ್ತ್ರಗಳ ಅಭಾವವಿದ್ದರೂ ದೇಶಭಕ್ತಿ ಪ್ರೇರಿತ ಅಪಾರ ಜನಶಕ್ತಿಯ ಬಲದಿಂದ ಹಿಟ್ಲರನ ಅಜೇಯ ಸೇನೆಯನ್ನು ಮಣ್ಣುಮುಕ್ಕುವಂತೆ ಮಾಡುವುದರಲ್ಲಿ ಯಶಸ್ವಿಯಾಯಿತು. ಸ್ವಾತಂತ್ರ್ಯ ಗಳಿಸಿದ ಸೋವಿಯತ್ ರಷ್ಯ ಕಮ್ಯುನಿಸಂ ಸಮಷ್ಟಿವಾದದ ಸಿದ್ಧಾಂತ ಅಂಗೀಕರಿಸಿತು. ಸಹಕಾರದ ಆಧಾರಿತ ಸಾಮೂಹಿಕ ಜೀವನ ನಡೆಸುವ ಮಾರ್ಗ ಅನುಸರಿಸಿತು. ಪಾಂಚವಾರ್ಷಿಕ ಯೋಜನೆ ಸಿದ್ಧಗೊಳಿಸಿ ಆರ್ಥಿಕೋನ್ನತಿಗೆ ನೂತನ ದಾರಿ ತೋರಿತು. ಇದರ ಪರಿಣಾಮವಾಗಿ ಪಾಂಚವಾರ್ಷಿಕ ಯೋಜನೆಯ ಜನಕ ಎಂಬ ಕೀರ್ತಿ ಗಳಿಸಿದೆ.

ಆದರೆ ಪಾಂಚವಾರ್ಷಿಕ ಯೋಜನೆಯ ಪಿತಾಮಹ ನಿಜಕ್ಕೂ ಮೈಸೂರಿನ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು. ಎಪ್ಪತ್ತು ವರ್ಷಗಳ ಹಿಂದಿನ ಕಾಲದಲ್ಲಿ 1911ರಲ್ಲಿ ದಿವಾನ್ ಸ್ಥಾನ ಇನ್ನೂ ಸ್ವೀಕರಿಸದೆ ಇದ್ದಾಗ ಪಾಂಚವಾರ್ಷಿಕ ಯೋಜನೆಯ ಪಾಂಚಜನ್ಯದ ಕಹಳೆ ಊದಿ, ನಿದ್ರಾವಸ್ಥೆಯಲ್ಲಿದ್ದ ದೇಶವನ್ನು ಬಡಿದೆಬ್ಬಿಸಿದ ಶ್ರೇಯಸ್ಸು ಅವರಿಗೆ ಸಲ್ಲತಕ್ಕದ್ದು. ಐದು ವರ್ಷಗಳ ಅವಧಿಯಲ್ಲಿ ದೇಶ ಸಾಧಿಸಬೇಕಾದ ಗುರಿ ಯೋಜನೆಗಳು ನಿರೂಪಿಸುತ್ತವೆ. 'ಯೋಜನೆ' ಎಂಬ ಪದ ಹೆಚ್ಚು ಬಳಕೆಯಲ್ಲಿ ಇಲ್ಲದಿದ್ದ ಕಾಲವದು. 1911ರಲ್ಲಿ ಮೈಸೂರಿನ ಆರ್ಥಿಕ ಸಮ್ಮೇಳನ ಮೊದಲ ಬಾರಿಗೆ ನೆರೆಯುವಂತೆ ಮಾಡಿದರು. ಇದು ವಾರ್ಷಿಕ ಕೂಟ ಆಯಿತು. ಚಿಂತಕರು ದೇಶದ ಆರ್ಥಿಕೋನ್ನತಿಯ ಚಿಂತಕರಾಗಬೇಕು. ಪ್ರಜೆ ಮತ್ತು ಪ್ರಭುತ್ವ ಒಂದಾಗಿ ಗುರಿ ಸಾಧಿಸಲು ಹವಣಿಸಬೇಕು. ಪ್ರಯತ್ನಶೀಲರಾಗಬೇಕು. 1920ರಲ್ಲಿ 'ಭಾರತದ ಪುನರ್ರಚನೆ' ಗ್ರಂಥ ಲಂಡನ್ನಿನಿಂದ ಪ್ರಕಟಿಸಿದರು. 1934ರಲ್ಲಿ 'ಭಾರತದ

ಆರ್ಥಿಕಾಭಿವೃದ್ಧಿ ಯೋಜನೆ, ಬೆಳಕು ಕಂಡಿತು. ಇದಲ್ಲದೆ ಇವರು ಬರೆದ ಹಲವು ಪುಸ್ತಕಗಳನ್ನು ಬೊಂಬಾಯಿಯ ಅಖಿಲ ಭಾರತ ತಯಾರಿಕರ ಸಂಘ ಪ್ರಕಟಿಸಿದೆ. ಆರ್ಥಿಕ ಯೋಜನೆಯ ಅವರ ಗ್ರಂಥವು ವ್ಯವಸಾಯ, ಕೈಗಾರಿಕೆ; ಭಾರಿ, ಮಧ್ಯಮ ಮತ್ತು ಸಣ್ಣ ಶ್ರೇಣಿಯ ಕೈಗಾರಿಕೆ; ಸಂಚಾರ ಸೌಲಭ್ಯ; ವಿದ್ಯುದುತ್ಪಾದನೆ ಮತ್ತು ಹಂಚಿಕೆ; ವ್ಯಾಪಾರ, ವಾಣಿಜ್ಯ, ಆಮದು–ರಫ್ತು, ಜಲಮಾರ್ಗ ಸಂಚಾರ, ರೈಲು ರಸ್ತೆಯ ಸಂಚಾರ, ಬ್ಯಾಂಕಿಂಗ್ ವ್ಯವಹಾರ, ಟಂಕಸಾಲೆ, ಇವುಗಳಿಗೆ ವಿಶೇಷ ಗಮನ ಹರಿಸಲಾಗಿದೆ. ಆರ್ಥಿಕ ವಿಷಯಗಳು ಮಾತ್ರವಲ್ಲದೆ ಸಾಮಾಜಿಕ ಹಾಗೂ ರಾಜಕೀಯ ಸ್ವಾತಂತ್ರ್ಯದ ವಿಶ್ಲೇಷಣೆ ಮಾಡಲಾಗಿದೆ.

ತನ್ನ ದೇಶದ ಕೈಗಾರಿಕೋದ್ಯಮ ಬೆಳೆಯಲು, ತಯಾರಿಸಿದ ಸರಕು ಮಾರಾಟ ವಾಗುವಂತೆ ಮಾಡುವುದು ಬ್ರಿಟಿಷ್ ಪ್ರಭುತ್ವದ ಹಾಗೂ ಇಂಡಿಯಾ ಸರ್ಕಾರದ ಧೋರಣೆಯಾಗಿತ್ತು. ಇದರಿಂದ ನಮ್ಮ ದೇಶದ ಉದ್ಯಮ ಬೆಳೆಯಲು ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ವಿದೇಶಗಳಿಂದ ಸಿದ್ಧ ಸಾಮಗ್ರಿ ಆಮದು ಮಾಡಿಕೊಳ್ಳುವುದರಲ್ಲಿ ಎರಡು ಬಗೆಯ ಹಾನಿ ಸಂಭವಿಸುತ್ತದೆ. ನಮ್ಮ ಹಣ ಹೊರಕ್ಕೆ ಹರಿದುಹೋಗುವುದು ಒಂದು ಹಾನಿ. ಇಲ್ಲಿಯ ಕೈಗಾರಿಕೆಯ ಬೆಳವಣಿಗೆಯಿಂದ ಆಗುತ್ತಿದ್ದ ಗಳಿಕೆ, ಅನುಭವ ಕಳೆದುಕೊಳ್ಳುವುದು. ಶ್ರಮಜೀವಿಗೆ ದೊರೆಯುತ್ತಿದ್ದ ಅನ್ನಕ್ಕೆ ಸಂಚಕಾರ. ದೇಶರಕ್ಷಣೆ ಮಾಡಿಕೊಳ್ಳುವ ಸಾಮರ್ಥ್ಯಕ್ಕೆ ಕುಂದುಂಟು ಮಾಡುತ್ತದೆ. ರಾಷ್ಟ್ರೀಯ ವರಮಾನ ದ್ವಿಗುಣಗೊಳಿಸಲು ರಾಜ್ಯಗಳಿಗೆ ಪಾಂಚವಾರ್ಷಿಕ ಯೋಜನೆ ಮತ್ತು ಕೇಂದ್ರಕ್ಕೆ ದಶವಾರ್ಷಿಕ ಯೋಜನೆ ಅಗತ್ಯ. ಇದು ಅವರ ಸಲಹೆ. ಪ್ರತಿಯೊಂದು ಪ್ರಾಂತ ಅಥವಾ ರಾಜ್ಯಕ್ಕೆ ಕನಿಷ್ಠ ಒಂದಾದರೂ ಮೂಲ ಕೈಗಾರಿಕೆ, ಪ್ರತಿ ಜಿಲ್ಲೆಗೂ ಎರಡಾದರೂ ದೊಡ್ಡ ಕೈಗಾರಿಕೆ, ಪ್ರತಿ ತಾಲ್ಲೂಕಿಗೂ ಒಂದು ಕೈಗಾರಿಕೆಯ ಘಟಕ ಆಗಬೇಕು. ಒಂದು ವಿಭಾಗದಲ್ಲಿ ಕೈಗಾರಿಕೆಗಳ ಕೇಂದ್ರೀಕರಣ, ಇನ್ನೊಂದು ಭಾಗದಲ್ಲಿ ಕೈಗಾರಿಕೆಗಳ ಅಭಾವ ಹೀಗಾಗಬಾರದು. ಹೀಗಾಗುವುದರಿಂದ ದೇಹದ ಒಂದು ಅಂಗ ದಷ್ಟಪುಷ್ಟ ವಾಗಿ ಬೆಳೆಯುವುದು, ಮತ್ತೊಂದು ಅಂಗ ಕೃಶವಾಗುವುದು. ಈ ರೀತಿಯ ಬೆಳವಣಿಗೆ ಯಿಂದ ಸಮತೋಲನವಿಲ್ಲದ ಅಸ್ವಾಭಾವಿಕ ಬೆಳವಣಿಗೆಗೆ ಆಸ್ಪದ ಕೊಟ್ಟಂತೆ ಆದೀತು. ಯಾವ ರಾಜ್ಯದಲ್ಲಿ ಯಾವ ಕೈಗಾರಿಕೆ ಸ್ಥಾಪಿಸುವುದರಿಂದ ಆ ರಾಜ್ಯಕ್ಕೆ ಮಾತ್ರವಲ್ಲದೆ ಇಡೀ ದೇಶಕ್ಕೆ ಅನುಕೂಲವಾದೀತು ಈ ದೃಷ್ಟಿಯಿಂದ ಪೂರ್ವ ಪರಿಶೀಲನೆ ನಡೆಯ ಬೇಕು. ಅಲ್ಲಿ ದೊರೆಯುವ ಖನಿಜ, ಭೂಜಲ ಹವಾಗುಣ, ವಿದ್ಯುತ್ ಸೌಲಭ್ಯ, ವ್ಯವಸಾಯೋತ್ಪನ್ನ, ಸಂಚಾರ ಸೌಲಭ್ಯ ಇವೆಲ್ಲ ಗಮನಿಸಿ ಕೈಗಾರಿಕೆಗಳು ಸ್ಥಾಪಿತ ವಾಗಬೇಕು. ದೇಶದ ದಶವಾರ್ಷಿಕ ಯೋಜನೆಯಲ್ಲಿ ಉಕ್ಕು, ವಿದ್ಯುತ್ ಸಲಕರಣೆ, ಮೋಟಾರು ವಾಹನ, ಜಹಜು ನಿರ್ಮಾಣ, ರಾಸಾಯನಿಕ ವಸ್ತು ಉತ್ಪಾದನೆ, ಬಟ್ಟೆ ತಯಾರಿಕೆ ಇವುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕೆಂದು ಅವರ ಸಲಹೆ.

ಪಂಚವಾರ್ಷಿಕ ಯೋಜನೆ ಸಿದ್ಧಗೊಳಿಸಿ ಕಾರ್ಯಗತ ಮಾಡಲು ಬೃಹತ್‌ಪ್ರಮಾಣದಲ್ಲಿ ಪ್ರಯತ್ನಿಸಿದ ಪ್ರಥಮ ರಾಷ್ಟ್ರ ರಷ್ಯ. ಯೂರೋಪಿನ ಇತರ ರಾಷ್ಟ್ರಗಳೊಡನೆ ತುಲನೆ

ಮಾಡಿದಾಗ ರಷ್ಯ ಆರ್ಥಿಕವಾಗಿ ಬಹಳ ಹಿಂದುಳಿದಿತ್ತು. ಅರಸರು ದೇಶದ ಪ್ರಗತಿಗೆ ಹೆಚ್ಚು ಗಮನ ಹರಿಸುತ್ತಿರಲಿಲ್ಲ. ದೇಶ ಸ್ವತಂತ್ರವಾಗುತ್ತಲೇ ಸರ್ವತೋಮುಖ ಅಭಿವೃದ್ಧಿ ಸಾಧಿಸಬೇಕೆನ್ನುವ ಆಕಾಂಕ್ಷೆ ಉತ್ಕಟವಾಗಿರುವುದು ಸಹಜ. ಕಮ್ಯುನಿಸಂ ಅಥವಾ ಸಮಷ್ಟಿವಾದದ ಸಿದ್ಧಾಂತ ಅಂಗೀಕರಿಸಿದ ರಷ್ಯ, ವ್ಯಕ್ತಿಸ್ವಾತಂತ್ರ್ಯ ಉಪೇಕ್ಷಿಸಿ, ಬಂಡವಾಳಶಾಹಿಯನ್ನು ನಿರ್ನಾಮಗೊಳಿಸಿ ಸಾಮೂಹಿಕ ಸಮಾಜ ಬೆಳವಣಿಗೆಗೆ ಪ್ರಯತ್ನಿಸಿತು. ವ್ಯಕ್ತಿಸ್ವಾತಂತ್ರ್ಯ, ಅಭಿಪ್ರಾಯ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ ಇವುಗಳಿಗೆ ಅಗ್ರಗಣ್ಯ ಸ್ಥಾನ ನೀಡುತ್ತಿದ್ದ ಯೂರೋಪಿನ ರಾಷ್ಟ್ರಗಳಿಗೆ ರಷ್ಯ ಅನುಸರಿಸುತ್ತಿದ್ದ ಮಾರ್ಗ ಅಪ್ರಿಯವಾಗಿತ್ತು. ವಿಶ್ವೇಶ್ವರಯ್ಯನವರೂ ಕಮ್ಯುನಿಸ್ಟರ ಮಾರ್ಗ ಅನುಸರಿಸುವಂತೆ ಸೂಚಿಸುತ್ತಿರುವರೆಂಬ ಆಪಾದನೆಗೆ ಗುರಿಯಾಗಿದ್ದರು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಹಿರಿಯ ಸ್ಥಾನ ಕೊಡುತ್ತಿದ್ದ ಅವರು ಕಮ್ಯುನಿಸಂ ಪದ್ಧತಿಯನ್ನು ಖಂಡತುಂಡವಾಗಿ ಖಂಡಿಸಿರುತ್ತಾರೆ. 'ಸರ್ವೇಜನಾಸ್ಸುಖಿನೋಭವಂತು' ಎಂದು ಪ್ರತಿದಿನ ಪ್ರಾರ್ಥಿಸುವ ನಮ್ಮ ದೇಶದ ಜನ ಸರ್ವಜನರ ಸುಖಕ್ಕಾಗಿ, ಸಮಾಜದ ಉನ್ನತಿಗಾಗಿ ವ್ಯಕ್ತಿ ಸ್ವಲ್ಪ ತ್ಯಾಗವಾದರೂ ಮಾಡಬೇಕಾದೀತು. ತ್ಯಾಗವಿಲ್ಲದ ಭೋಗ ಸುಖಪ್ರದವಾಗದು. ತನ್ನ ಸುತ್ತಮುತ್ತಲ ಜನ ಸುಖವಾಗಿದ್ದರೆ ಮಾತ್ರ ತಾನು ಸುಖವಾಗಿರಲು ಸಾಧ್ಯ. ಇದನ್ನು ಗ್ರಹಿಸಬೇಕು. ಸುತ್ತಲಿನ ಜನ ಬಡತನದಿಂದ, ಅನ್ನಆಹಾರದ ಕೊರತೆಯಿಂದ ಕಂಗಾಲಾಗಿರುವಾಗ ಅವರ ನಡುವೆ ಭೋಗಜೀವನ ನಡೆಸುವುದು ಅಸೂಯೆಗೆ ಆಧಾರವಾಗುತ್ತದೆ. ಅಸಮತೆ ಅಸಮಾಧಾನ ನಿವಾರಿಸುವುದು ಯೋಜನೆಯ ಉದ್ದೇಶ. ಇದನ್ನು ಅವರು ಸ್ಪಷ್ಟಪಡಿಸಿರುತ್ತಾರೆ.

ವಿಶ್ವೇಶ್ವರಯ್ಯನವರ ಆರ್ಥಿಕ ಯೋಜನೆ ಏಮ್ಮುಖವಾದುದಲ್ಲ. ಸರ್ವಾಂಗ ಪರಿಪುಷ್ಟ. ಒಂದಕ್ಕೊಂದು ಹೊಂದಿಕೊಂಡಿರುವ ಜೋಡಣೆ. ಗ್ರಾಮಾಭಿವೃದ್ಧಿ ಎಂದರೆ ರೈತನ ಏಳ್ಗೆ, ಗ್ರಾಮಕೈಗಾರಿಕೆಗಳ ಪುನರುಜ್ಜೀವನ. ರೈತನ ಮುಖ್ಯ ಆಧಾರ ಪಶುಸಂಪತ್ತು. ಆದ್ದರಿಂದ ಕಾಲ್ನಡೆಯ ತಳಿಯ ಬೆಳವಣಿಗೆಗೆ ಸ್ಥಾಪಿಸು ಅಮೃತ ಮಹಲ್ ಕಾವಲು. ನಡೆಸು ದನಗಳ ಜಾತ್ರೆ. ಬೇಕು ರೈತನಿಗೆ ಉತ್ತಮ ನೇಗಿಲು ಮತ್ತು ಇತರ ಉಪಕರಣಗಳು. ಸ್ಥಾಪಿಸು ಇದನ್ನು ತಯಾರಿಸುವ ಕಾರ್ಖಾನೆ ಕೋಲಾರದಲ್ಲಿ. ನೇಗಿಲಿಗೆ ಬೇಕು, ಕಬ್ಬಿಣ ಉಕ್ಕು. ಹುಟ್ಟಿಸು ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ. ಅದಿರು ಕರಗಿಸಲು ಬೇಕು ಕಲ್ಲಿದ್ದಲು. ಇದು ದೊರೆಯದು ಸಂಸ್ಥಾನದಲ್ಲಿ. ಕಾಡಿನ ಮರ ಕಡಿದು ವೈಜ್ಞಾನಿಕವಾಗಿ ಸುಟ್ಟು ಮಾಡು ಇದ್ದಿಲು. ಕಬ್ಬಿಣ ತಯಾರಿಸಲು ಬೇಕು ಭಾರಿ ಕೈಗಾರಿಕೆ. ಇದನ್ನು ಸ್ಥಾಪಿಸಿ ನಡೆಸಲು ಅನುಭವ ಸಾಲದು. ಅನುಭವಸ್ಥ ವಿದೇಶೀಯರನ್ನು ಬರಮಾಡಿಕೊ. ಗಳಿಸು ಸ್ವಾನುಭವ. ಕಾಡಿನಿಂದ ಅಪಾರ ಸೌದೆ ಸಾಗಿಸಬೇಕು. ಸ್ಥಾಪಿಸು ಟ್ರಾಂ, ರೈಲು, ರೋಪ್‌ವೇ. ಎಲ್ಲಕ್ಕೂ ಬೇಕು ಹಣ. ಬೊಕ್ಕಸ ಬರಿದು, ಹಣ ಸಾಲದು. ಸಾಲ ಎತ್ತು; ಕಂದಾಯ ಆದಾಯ ಹೆಚ್ಚಿಸು. ಸಾಲ ಹೇಗೆ ತೀರಿಸುವುದು. ಕೆರೆಯ ನೀರನ್ನು ಕೆರೆಗೆ ಚೆಲ್ಲು. ಜನರಿಂದ ಸಾಲ ಪಡೆ. ಹೆಚ್ಚಿದ ಉತ್ಪನ್ನದಿಂದ ತೀರಿಸು. ಜನರಲ್ಲಿ ಕೂಡಿಟ್ಟ ಹಣ

ಇದೆಯೇ? ಸೇವಿಂಗ್ಸ್ ಬ್ಯಾಂಕ್ ಸ್ಥಾಪಿಸು, ಮಿತವ್ಯಯ ಮಾಡು, ವ್ಯಾಪಾರ ವಾಣಿಜ್ಯ ಹೆಚ್ಚಿಸು. ವ್ಯಾಪಾರಕ್ಕೆ ಬಂಡವಾಳ ಬೇಡವೇ? ಬೇಕು. ಬ್ಯಾಂಕ್ ಸ್ಥಾಪಿಸು. ವರ್ತಕರಲ್ಲಿ ಒಮ್ಮತ ಬೇಕು. ಏರ್ಪಡಿಸು ವಾಣಿಜ್ಯ ಸಂಘ. ವರ್ತಕರಲ್ಲಿ ತಿಳಿವು ಸಾಲದು. ವಾಣಿಜ್ಯ ಶಾಲೆ ಸ್ಥಾಪಿಸು. ಕಲಿ, ಅನುಭವ ಗಳಿಸು. ಪಾಶ್ಚಾತ್ಯ ರಾಷ್ಟ್ರಗಳಿಗೆ ಹೋಗಿ ಬಾ. ಗ್ರಾಮೀಣರಿಗೆ ಅರಿವು ಕಡಮೆ. ಪ್ರಚಾರೋಪನ್ಯಾಸ, ಯಕ್ಷಿಣಿದೀಪದ ಉಪನ್ಯಾಸ, ರಾತ್ರಿಶಾಲೆ, ಸಂಚಾರಿ ಪುಸ್ತಕ ಭಂಡಾರ ಇವುಗಳಿಂದ ಅರಿವು ಮೂಡಿಸು. ಜನತೆಯ ಸಹಕಾರವಿಲ್ಲದೆ ಸರ್ಕಾರದ ಕೆಲಸ ಸುಗಮವಾಗಿ ಸಾಗದು. ಸರ್ಕಾರ ಇರುವುದು ಜನಸೇವೆಗಾಗಿ. ಒಂದಕ್ಕೊಂದು ಪೋಷಕ. ಜನರಿಗೆ ತಿಳಿವಳಿಕೆ ಕೊಡಲು ಅವರಿಂದ ಸಹಕಾರ ಪಡೆಯಲು ಸಂಪದಭಿವೃದ್ಧಿ ಸಮ್ಮೇಳನ, ಸಹಕಾರ ಸಮ್ಮೇಳನ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಸಮ್ಮೇಳನ ನಡೆಸಿದರು. ಗ್ರಾಮಸಂಘ ಸ್ಥಾಪಿಸಿದರು. ಗ್ರಾಮಕ್ಕೊಂದು ಕಚೇರಿ. ಕಾಯಿಪಲ್ಯದ ಬೆಳೆ ಬಳಕೆ ನಮ್ಮಲ್ಲಿ ಕಡಮೆ.

ತೋಟವಾಳಿಕೆ ಪ್ರದರ್ಶನ ಏರ್ಪಡಿಸಿದರು. ವ್ಯವಸಾಯ ಶಾಲೆ, ಕೃಷಿ ಪ್ರಯೋಗ ಕ್ಷೇತ್ರ ಸ್ಥಾಪಿಸಿದರು. ಕೈಕಸಬಿನವರಿಗೆ ಹೊಸಹೊಸ ರೀತಿ ಗೊತ್ತಿಲ್ಲ. ಹೊಸ ರೀತಿ ಬಲ್ಲವರನ್ನು ಬರಮಾಡಿಕೊ. ಪ್ರಚಾರಕ್ಕೆ ಕಳುಹಿಸು. ನಾಟಿ ಹತ್ತಿಗಿಂತ ಕಾಂಬೋಡಿಯಾ ಬೀಜ ಬಿತ್ತಿದರೆ ಕೂರಿಗೆಗೆ ಖಂಡುಗ ಬೆಳೆ ಹೆಚ್ಚು. ವ್ಯವಸಾಯ ಇಲಾಖೆ ಬೀಜ ತರಿಸಿ ಸುಲಭ ದರಕ್ಕೆ ಸಿಗುವಂತೆ ಮಾಡಿದರು.

ಅಯ್ಯನವರ ಮಹಾ ಶತ್ರುಗಳು ಜಡತೆ ಸೋಮಾರಿತನ. ನಮ್ಮವರು ಕಷ್ಟಪಟ್ಟು ಮೈದಣಿಸಿ, ಬೆವರು ಸುರಿಸಿ, ಬುದ್ಧಿ ವ್ಯಯಿಸಿ ಕೆಲಸ ಮಾಡುವವರಲ್ಲ. ಯೂರೋಪಿಗಿಂತ ಇಲ್ಲಿ ಕೆಲಸದ ಅವಧಿ ಕಡಮೆ. ರಜಾದಿನಗಳು ಹೆಚ್ಚು. ದೇಶದ ಅತಿ ಘೋರ ವ್ಯಾಧಿ ಕ್ರಿಯಾ ಶೂನ್ಯತೆ, ಅಲಸಿ. ಎಲ್ಲಕ್ಕೂ ಹಣೇಬರಹ ಎನ್ನುವ ನಿರ್ವೀರ್ಯ ಮನೋಧರ್ಮ. ದುಡಿಯದೆ ತುಕ್ಕುಹಿಡಿದು ಸಾಯುವುದಕ್ಕಿಂತ, ದೇಹವನ್ನು ದಣಿಸಿ, ತೇಯಿಸಿ, ಸವೆಸುವುದು ಲೇಸು, ಗಂಧದ ಕೊರಡಿನಂತೆ. ಇದು ಅವರ ಜೀವನಧರ್ಮ. ನಮ್ಮ ದೇಶದ ಜನರಲ್ಲಿ ಸ್ವಾವಲಂಬನೆ, ಕ್ರಿಯಾಶೀಲತೆ, ಸಾಹಸೋದ್ಯಮ, ಹೊಸತನ್ನು ಸೃಜಿಸುವ ಸೃಜನಾಶಕ್ತಿ, ಸ್ವಸಹಾಯ, ಪರಸ್ಪರ ಸಹಕಾರ, ವ್ಯವಸ್ಥಾ ಸಾಮರ್ಥ್ಯ ಇವಕ್ಕೆ ಪ್ರೋತ್ಸಾಹ ನೀಡುತ್ತಿದ್ದರು.

ಪಾಶ್ಚಾತ್ಯ ದೇಶಗಳ ಅನುಭವ, ಪ್ರಗತಿಯ ಕಾರಣ, ಅವರ ಅನುಭವದಿಂದ ನಾವು ಕಲಿಯಬಹುದಾದ ಪಾಠ ಇವನ್ನು ಮೇಲಿಂದಮೇಲೆ ಇವರು ಉದಹರಿಸುವರು. ಅವರ ಸಹಕಾರ ಪಡೆಯುವರು. ಆದರೆ ಸಂಪೂರ್ಣವಾಗಿ ವಿದೇಶಗಳ ನೆರವನ್ನೇ ನಂಬಿ ಬಾಳುವುದು ಯೋಗ್ಯವಲ್ಲ. ಇದರಿಂದ ನಾವು ಪರಾವಲಂಬಿಗಳಾದೇವು. ಇದರಿಂದ ಬುದ್ಧಿವಂತರ ಸಾಮರ್ಥ್ಯಕ್ಕೆ ಪ್ರೋತ್ಸಾಹ ದೊರಕದು. ಅವರ ಕ್ರಿಯಾತ್ಮಕ ಶಕ್ತಿಗೆ ತಣ್ಣೀರು ಎರಚಿದಂತೆ ಆದೀತು. ವಿದೇಶೀಯರ ನೆರವಿನಿಂದ ಮಾತ್ರವೇ ಸ್ಥಾಪಿಸಲ್ಪ

ಡುವ ದೊಡ್ಡ ಕಾರ್ಯವಿಧಾನಗಳು, ಉದ್ಯಮಗಳು ನಮ್ಮವರ ಶಕ್ತಿಸಾಮರ್ಥ್ಯ, ಸೃಜನಾ ಶಕ್ತಿ ಹೆಚ್ಚಿಸಲಾರವು. ನಮ್ಮ ದೇಶದ ಘನತೆಗೆ ಔನ್ನತ್ಯಕ್ಕೆ ಮೆರುಗು ಕೊಡಲಾರವು. ನಮಗಿಂತ ಪಾಶ್ಚಾತ್ಯರು ತಾಂತ್ರಿಕ ಮತ್ತು ವೈಜ್ಞಾನಿಕ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ್ದಾರೆ. ಇದನ್ನು ಉಪೇಕ್ಷಿಸಲಾಗದು. ಅವರಿಂದ ಕಲಿಯಬೇಕಾದ್ದು ಸಾಕಷ್ಟು ಇದೆ. ಅವರನ್ನು ಸ್ವಾಗತಿಸಿ, ಅವರ ಅನುಭವದ ಪ್ರಯೋಜನ ಪಡೆಯಬೇಕು. ಆದರೆ ನಮ್ಮ ದೇಶದ ಐಶ್ವರ್ಯ ಸೂರೆ ಮಾಡಿಕೊಂಡು ಒಯ್ಯಲು ಎಡೆಗೊಡದಂತೆ ಎಚ್ಚರಿಕೆ ವಹಿಸಬೇಕು.

ವಿಶ್ವೇಶ್ವರಯ್ಯನವರು ದಿವಾನರಾದ ಕಾಲಕ್ಕೆ ಪ್ರಥಮ ಪ್ರಪಂಚಯುದ್ಧ ನಡೆಯುತ್ತಿತ್ತು. 1914ರಲ್ಲಿ ಪ್ರಾರಂಭವಾದ ಘೋರ ಸಮರ 1918ರ ವರೆಗೂ ಮುಂದುವರಿಯುತ್ತ ತಮ್ಮ ಸರ್ವಶಕ್ತಿ ಸಾಮರ್ಥ್ಯ ಶತ್ರುವನ್ನು ಎದುರಿಸಿ ಜಯ ಗಳಿಸುವುದರಲ್ಲಿ ಕೇಂದ್ರೀಕೃತವಾಗಿತ್ತು. ಹೊಸ ಯೋಜನೆಗಳನ್ನು ಕೈಗೊಳ್ಳಲು ಅಗತ್ಯವಾದ ಯಂತ್ರೋಪಕರಣಗಳನ್ನು ವಿದೇಶಗಳಿಂದ ಬರಮಾಡಿಕೊಳ್ಳಲು ಇಂಡಿಯಾ ಸರ್ಕಾರ ಅನುಮತಿ ಕೊಡುತ್ತಿರಲಿಲ್ಲ. ವಿಶ್ವೇಶ್ವರಯ್ಯನವರ ಉತ್ಸಾಹಕ್ಕೆ ಭಂಗ ತರುವುದಾಗಿದ್ದರೂ ತಮ್ಮ ಪ್ರಯತ್ನಶೀಲತೆ ಅವರು ಕೈಬಿಡಲಿಲ್ಲ. ಮದರಾಸಿನ ನಿವೃತ್ತ ಕೈಗಾರಿಕೆಯ ಡೈರೆಕ್ಟರ್ ಸರ್ ಆಲ್‌ಫ್ರೆಡ್ ಚಾಟರ್‌ಟನ್ ಅವರನ್ನು ಬರಮಾಡಿಕೊಂಡು ಇಲ್ಲಿ ಡೈರೆಕ್ಟರಾಗಿ ನೇಮಿಸಿದರು. ನೂತನ ಕೈಗಾರಿಕೆ ಸ್ಥಾಪಿಸಬಹುದಾದ ಸಾಧ್ಯಾಸಾಧ್ಯತೆ ಪರಿಶೀಲಿಸಲು ಎ. ಎಸ್. ಸಾಂಬಶಿವಯ್ಯರ್ ಅವರಿಗೆ ವಹಿಸಲಾಯಿತು. ಇದೇ ರೀತಿ, ವನ್ಯಸಂಪತ್ತಿನ ಸದುಪಯೋಗಕ್ಕಾಗಿ ಸೂಕ್ತ ಕ್ರಮ ಸೂಚಿಸುವ ಹೊಣೆ ಅರಣ್ಯ ಇಲಾಖೆಯ ಮುಖ್ಯಾಧಿಕಾರಿ ಎಂ. ರಾಮರಾಯರದಾಯಿತು.

ಎಲ್ಲಕ್ಕೂ ಮೂಲ ಹಣ. ಕೈಗಾರಿಕೆಗಳಿಗೆ ಬಂಡವಾಳ ಒದಗಿಸಲು 1913ರಲ್ಲಿ ಮೈಸೂರು ಬ್ಯಾಂಕ್ ಅಸ್ತಿತ್ವಕ್ಕೆ ಬಂತು. ರೋಸ್ ಎಂಬ ನುರಿತ ಆಂಗ್ಲ ಇದರ ಮೊದಲ ಕಾರ್ಯನಿರ್ವಾಹಾಧಿಕಾರಿಯಾದನು. 1914ರಲ್ಲಿ ಮೆಕ್ಯಾನಿಕಲ್ ಎಂಜಿನಿಯರಿಂಗ್ ಸ್ಕೂಲ್ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಮಲೆನಾಡು ಅಭಿವೃದ್ಧಿ ಸಮಿತಿ ರಚಿತವಾಯಿತು. ಮೈಸೂರು ವಿಶ್ವವಿದ್ಯಾಲಯ 1915ರಲ್ಲಿ ಉದಯಿಸಿತು. ವರುಷ ವರುಷಕ್ಕೆ ಹೊಸ ಕೈಗಾರಿಕೆಗಳು ತಲೆಎತ್ತುತ್ತಿದ್ದುವು. 1916ರಲ್ಲಿ ರೇಷ್ಮೆ ಇಲಾಖೆ, ಸರ್ಕಾರಿ ಸಾಬೂನು ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಚರ್ಮ ಹದಮಾಡುವ ಕಾರ್ಖಾನೆ ಮೊದಲಾದುವು ಸರ್ಕಾರದಿಂದ ಸ್ಥಾಪಿತವಾದುವು. ನೂತನ ಉದ್ಯಮಗಳನ್ನು ಸ್ಥಾಪಿಸಿ ಯಶಸ್ವಿಯಾಗಿ ನಡೆಸಿಕೊಂಡು ಬರಲು ದೂರದೃಷ್ಟಿ, ಸಾಹಸ, ಎದೆಗಾರಿಕೆ ಅಗತ್ಯ. ಹೂಡಿದ ಬಂಡವಾಳ ಹಾಳಾಗಿ ಹೋದೀತು, ಈ ಭಯ ನೂತನ ಉದ್ಯಮಗಳ ಸ್ಥಾಪನೆಗೆ ಅಡ್ಡಿಯಾಗಿತ್ತು. ಆದಕಾರಣ ಸರ್ಕಾರವೇ ನೂತನ ಉದ್ಯಮಗಳನ್ನು ಸ್ಥಾಪಿಸಿ ನಡೆಸಿ, ಸಾಧಿಸಿ ಲಾಭದಾಯಕವಾಗಿ ನಡೆಸಿಕೊಂಡು ಬರಬಹುದೆಂಬ ವಿಶ್ವಾಸ ಮೂಡಿಸಿ ತದನಂತರ ಖಾಸಗಿಯವರಿಗೆ ಒಪ್ಪಿಸಿಕೊಡುವ ಧೋರಣೆ ತಾಳು

ವಂತೆ ವಿಶ್ವೇಶ್ವರಯ್ಯನವರು ಮಾಡಿದರು. ಖಾಸಗಿ ಉದ್ಯಮಿಗಳಿಗೆ ಸರ್ಕಾರ ಅಥವಾ ಬ್ಯಾಂಕಿನಿಂದ ಸುಲಭ ದರದಲ್ಲಿ ಬಂಡವಾಳ ಒದಗಿಸುವ ಕ್ರಮ ಜಾರಿಗೆ ತಂದರು. ತಜ್ಞರು, ಅರಿತು ನುರಿತವರು, ಸರ್ಕಾರಿ ಅಧಿಕಾರಿಗಳು ಸಮಯೋಚಿತ ಸಲಹೆ ಮಾರ್ಗದರ್ಶನ ನೀಡುತ್ತಿದ್ದರು.

ವಿಶ್ವೇಶ್ವರಯ್ಯನವರು ತತ್ತ್ವೋಪದೇಶ ಮಾಡುತ್ತ, ಯಾವ ಹೊಣೆಯನ್ನೂ ಹೊರದ ವ್ಯಕ್ತಿಯಾಗಿರಲಿಲ್ಲ. ಅವರು ಕಾರ್ಯತತ್ಪರರು. ಇತರರನ್ನು ಕಾರ್ಯನಿರತರಾಗಿ ಮಾಡುವ ಶಕ್ತಿಸಾಮರ್ಥ್ಯ ಅವರಲ್ಲಿ ಮೂರ್ತೀಭವಿಸಿತ್ತು. ದೈವಕೃಪೆ ಮೈಸೂರಿನ ಮೇಲೆ ಅಪಾರ. ಭೂ, ಜಲ, ಖನಿಜ, ವನ, ಖಗ, ಮೃಗ ಸಂಪತ್ತಿಗೆ ಕೊರತೆ ಇಲ್ಲ. ಬೇಕಾದುದು ಅದನ್ನು ಬಳಸಿಕೊಳ್ಳುವ ಸಾಮರ್ಥ್ಯ. ನಮ್ಮ ನೈಸರ್ಗಿಕ ಸಂಪತ್ತಿನ ಸರ್ವೆ ನಡೆಸಿ, ಅಂಕಿಅಂಶಗಳನ್ನು ಸಂಗ್ರಹಿಸಿದರು. ಇದರ ಆಧಾರ ಅನುಸರಿಸಿ ಯೋಜನೆಗಳು ರೂಪಿತವಾದುವು. ದಾರಿದ್ರ್ಯ ನಿವಾರಣೆ, ದೇಶದ ಸರ್ವತೋಮುಖ ಬೆಳವಣಿಗೆ ಯೋಜನೆಗಳ ಮುಖ್ಯ ಗುರಿ. ದಾರಿದ್ರ್ಯ ಸ್ವಾಭಾವಿಕವಲ್ಲ. ಕಾಮಾಲೆಯಂತೆ ನಿವಾರಣೀಯ. ದೇಶದ ವಿಪುಲ ದೈವದತ್ತ ಸಂಪತ್ತನ್ನು ಸದುಪಯೋಗ ಮಾಡಿಕೊಳ್ಳದಿರುವುದು, ಉದಾಸೀನತೆ, ಸೋಮಾರಿತನ, ಉದ್ಯಮಶೀಲತೆ ಮತ್ತು ಸಾಹಸದ ಕೊರತೆ ಇವು ಮುಖ್ಯ ಕಾರಣ ಬಡತನಕ್ಕೆ.

ಗಂಧದ ನಾಡು ಎಂದು ಕೀರ್ತಿ ಗಳಿಸಿದೆ ಮೈಸೂರು. ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಗಂಧದ ಮರ ಬೆಳೆಯುವುದು ಮೈಸೂರಿನ ಅರಣ್ಯಗಳಲ್ಲಿ. ಗಂಧದ ಮರ ಎಲ್ಲಿ ಬೆಳೆದರೂ ಅದು ಸರ್ಕಾರದ ಆಸ್ತಿ. ಗಂಧದ ಸೌಗಂಧ ವಿಶ್ವಖ್ಯಾತಿ ಗಳಿಸಿ ತನ್ನ ಪರಿಮಳ ದಶದಿಕ್ಕುಗಳಿಗೂ ಬೀರುತ್ತಿದೆ. ಮೈಸೂರಿನ ಗಂಧದ ಸಾಬೂನು ಜಗದ್ವಿಖ್ಯಾತವಾಗಿದೆ. ಗಂಧ ತೇದು ಬಳಸಿಕೊಳ್ಳುವುದನ್ನು ನಮ್ಮ ಜನ ಅರಿತಿದ್ದರೂ ಅದರಿಂದ ಎಣ್ಣೆ ಹಿಂಡುವ ಕ್ರಮ ಅರಿತಿರಲಿಲ್ಲ. ಗಂಧದ ಮರದ ತುಂಡುಗಳನ್ನು ಫ್ರಾನ್ಸ್, ಜರ್ಮನಿ, ಇಟಲಿ ದೇಶಗಳಿಗೆ ಕಳುಹಿಸಿ, ಅಲ್ಲಿಂದ ಎಣ್ಣೆ ತರಿಸಿಕೊಳ್ಳಲಾಗುತ್ತಿತ್ತು. ಎಣ್ಣೆ ಇಳಿಸುವ ಕ್ರಮ ಗುಂಭವಾಗಿತ್ತು. ನಮ್ಮ ವಿಜ್ಞಾನಿಗಳಿಗೆ ಇದೊಂದು ಸವಾಲಾಗಿತ್ತು. ಬೆಂಗಳೂರಿನಲ್ಲಿರುವ ಭಾರತೀಯ ವಿಜ್ಞಾನ ಮಂದಿರ ಗಂಧದ ಕೊರಡಿನಿಂದ ಎಣ್ಣೆ ತೆಗೆಯುವ ವಿಧಾನ ಕಂಡುಹಿಡಿಯುವಂತೆ ವಿಶ್ವೇಶ್ವರಯ್ಯನವರು ತಿಳಿಸಿದರು. ವಿಜ್ಞಾನಿಗಳು ಪ್ರಯೋಗದಲ್ಲಿ ಯಶಸ್ವಿಯಾದರು. ಭಾರತೀಯ ವಿಜ್ಞಾನಿಗಳು ತೋರಿಸಿಕೊಟ್ಟ ಕ್ರಮ ಅನುಸರಿಸಿ ಮೈಸೂರಿನಲ್ಲಿ ಗಂಧದ ಎಣ್ಣೆ ಕಾರ್ಖಾನೆಯನ್ನು ಸರ್ಕಾರದವರು 1916ರಲ್ಲಿ ಸ್ಥಾಪಿಸಿದರು. ಹೂಡಿಜ ಬಂಡವಾಳ ಏಳು ಲಕ್ಷ. ಈ ಕಾರ್ಖಾನೆ ಏಳು ವರ್ಷಗಳಲ್ಲಿ ವೆಚ್ಚ ಕಳೆದು 27 ಲಕ್ಷ ಲಾಭ ಸಂಪಾದಿಸಿತು. ಈ ಎಣ್ಣೆ ವಿಶ್ವ ಖ್ಯಾತಿ ಗಳಿಸಿರುವ ಗಂಧದ ಸಾಬೂನಿಗೆ ಆಧಾರವಾಯಿತು. ಸಾಬೂನನ್ನು ದೊಡ್ಡ ಪ್ರಮಾಣದಲ್ಲಿ ಸ್ಥಾಪಿಸುವ ಕಾರ್ಖಾನೆಯನ್ನು ಬೆಂಗಳೂರಿನಲ್ಲಿ ಸರ್ಕಾರದವರು ಸ್ಥಾಪಿಸಿದರು. ಸಾಬೂನು ತಯಾರಿಸುವ ವಿಧಾನ ತಿಳಿದು ಬರಲು ಗರಳಪುರಿ ಶಾಸ್ತ್ರಿಗಳನ್ನು ವಿದೇಶಗಳಿಗೆ ಕಳುಹಿಸಿ ಕೊಡಲಾಯಿತು.

ಖಾದ್ಯ ತೈಲವಲ್ಲದ ಇತರ ಬಗೆಯ ಎಣ್ಣೆಗಳಿಂದ ಸಾಬೂನು ತಯಾರಿಸುವ ಪ್ರಯೋಗ ಯಶಸ್ವಿಯಾಯಿತು. ಸರ್ಕಾರದ ಸಹಾಯದಿಂದ ಮೈಸೂರು, ಚೆನ್ನಪಟ್ಟಣ, ತೀರ್ಥ ಹಳ್ಳಿಗಳಲ್ಲಿ ಮಂಗಳೂರು ಮಾದರಿಯ ಹೆಂಚು ತಯಾರಿಸುವ ಕಾರ್ಖಾನೆಗಳು ಸ್ಥಾಪಿತವಾದುವು. ಮೈಸೂರು, ಹಾಸನ, ತುಮಕೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಅಭ್ರಕ, ಕಲ್ನಾರು, ಮ್ಯಾಂಗನೀಸ್ ಮೊದಲಾದ ಖನಿಜ ತೆಗೆಯುವ ಕಾರ್ಯ ಚುರುಕು ಗೊಂಡಿತು. ಮೈಸೂರಿನಲ್ಲಿ ಮಹಾರಾಜರ ಕೃಪಾಪೋಷಿತ ಶ್ರೀ ಕೃಷ್ಣರಾಜೇಂದ್ರ ಬಟ್ಟೆ ಗಿರಣಿ ತಲೆಎತ್ತಿತು. ವರ್ತಕರು ತಮ್ಮ ಅಭಿವೃದ್ಧಿಗಾಗಿ ಒಂದಾಗಿ ಸಹಕರಿಸಿ ಕೆಲಸ ಮಾಡುವುದು ಕ್ಷೇಮ. ಉತ್ಸಾಹಿ ವರ್ತಕರು 1916ರಲ್ಲಿ ಮೈಸೂರು ವಾಣಿಜ್ಯ ಸಂಘ, ಬೆಂಗಳೂರಿನಲ್ಲಿ ರೂಪಿಸಿಕೊಂಡರು. ಅಧಿಕಾರಿಗಳು ದಣಿವಾರಿಸಿಕೊಳ್ಳಲು ಸೆಂಚುರಿ ಕ್ಲಬ್; ಮಹಿಳೆಯರ ಶ್ರೇಯೋಭಿವೃದ್ಧಿಗೆ ಲೇಡೀಸ್ ಕ್ಲಬ್ ಅಥವಾ ಮಹಿಳಾ ಸಮಾಜ, ಸ್ಥಾಪಿತವಾದುವು. ರೇಷ್ಮೆ ಇಲಾಖೆ, ಚರ್ಮ ಹದಮಾಡುವ ಚರ್ಮಾಲಯ; ಪಾತ್ರೆ ತಯಾರಿಸುವ ಮೆಟಲ್ ಫ್ಯಾಕ್ಟರಿ ಕಾರ್ಯನಿರತವಾದುವು. ಗ್ರಾಮೋದ್ಯೋಗ, ಗೃಹಕೈಗಾರಿಕೆ, ಹೋಟೇಲು, ವಸತಿಗೃಹ, ಮುದ್ರಣಾಲಯ, ಸಣ್ಣ ಕೈಗಾರಿಕೆ ಇವುಗಳಿಗೆ ಧನಸಹಾಯ ನೀಡುವ ಪದ್ಧತಿ ಆಚರಣೆಗೆ ಬಂತು. ಸರ್ಕಾರದ ಮತ್ತು ಇತರ ಕೈಗಾರಿಕೆಗಳು ಬೆಳೆದಂತೆ ಯಂತ್ರೋಪಕರಣಗಳ ಬಳಕೆ ಹೆಚ್ಚುವುದು ಸಹಜ. ಕೆಟ್ಟುಹೋದ ಯಂತ್ರಗಳ ದುರಸ್ತಿ, ಬಿಡಿಭಾಗಗಳ ತಯಾರಿಕೆ ಇವುಗಳಿಗಾಗಿ ಬೆಂಗಳೂರಿನಲ್ಲಿ ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಶಾಪ್ ಬಂತು. ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲೂ ಇದೇ ಮಾದರಿಯ ಆದರೆ, ಸ್ವಲ್ಪ ಸಣ್ಣ ಪ್ರಮಾಣದ ವರ್ಕ್‌ಶಾಪ್ ಸ್ಥಾಪಿಸಲು ಹಣ ಮಂಜೂರಾಯಿತು. ಮೈಸೂರಿನ ಇಂಡಸ್ಟ್ರಿಯಲ್ ಸ್ಕೂಲ್ ಚಾಮರಾಜೇಂದ್ರ ಕಲಾಶಾಲೆಯಾಗಿ ಮೇಲಂತಸ್ತಿಗೆ ಏರಿತು. ಸಣ್ಣ ಕೈಗಾರಿಕೆಗಳು ದೈಹಿಕ ಶ್ರಮದಿಂದ ಮಾತ್ರ ಹೆಚ್ಚು ಉತ್ಪಾದನೆ ಮಾಡಲಾರವು. ಇವು ವಿದ್ಯುತ್ ಬಳಸುವಂತೆ ಪ್ರೋತ್ಸಾಹಿಸಲಾಯಿತು. ವಿದ್ಯುತ್ತಿನ ಬಳಕೆಯಿಂದ ಭತ್ತದ ಗಿರಣಿ, ಎಣ್ಣೆ ಗಿರಣಿ, ಕಬ್ಬಿನ ರಸಹಿಂಡುವ ಗಿರಣಿ, ಉತ್ತಮ ದರ್ಜೆಯ ಬೆಲ್ಲ ತಯಾರಿಸುವ ಆಲೆಮನೆ, ನೇಯ್ಗೆ ಕಾರ್ಖಾನೆಗಳು ಅನೇಕ ಕಡೆಗಳಲ್ಲಿ ಸ್ಥಾಪಿತವಾದುವು. ವಿದ್ಯುತ್, ಡೀಸಲ್ ಎಣ್ಣೆ, ಆವಿ ಇವುಗಳ ಸಹಾಯದಿಂದ ನೀರೆತ್ತಿ ಹಾಯಿಸುವ ಸಾಧನ ಬಳಕೆಗೆ ಬಂತು. ವಿದೇಶಗಳಿಗೆ ಹೋಗಿ ಅಲ್ಲಿನ ಕೈಗಾರಿಕೆಗಳ ಬೆಳವಣಿಗೆ, ಆರ್ಥಿಕ ಸ್ಥಿತಿ, ಸಾಂಘಿಕ ಸಹಕಾರ ಇವನ್ನು ವೀಕ್ಷಿಸಿ, ವ್ಯಾಪಾರೋದ್ಯಮ ಬೆಳಸಿಕೊಳ್ಳಲು ವರ್ತಕರಿಗೆ ದೊರೆ ಯಿತು ಉತ್ತೇಜನ. ಜಪಾನು ವಿಶ್ವೇಶ್ವರಯ್ಯನವರಿಗೆ ಮಾದರಿಯಾಗಿತ್ತು. ಅಲ್ಲಿನ ಕೈಗಾರಿಕೆ ನಡೆಯುತ್ತಿರುವ ಕ್ರಮ ಅನುಕರಿಸಲು, ಆ ದೇಶದೊಡನೆ ವ್ಯಾಪಾರ ಬೆಳೆಸಲ ಒಬ್ಬ ಅಧಿಕಾರಿಯ ನೇತೃತ್ವದಲ್ಲಿ ವರ್ತಕರ ನಿಯೋಗ ಕಳುಹಿಸಲಾಯಿತು. ಬೆಟ್ಟ ಗುಡ್ಡ, ಕಾಡು, ಹೊಳೆ, ಜಲಾಶಯ, ಜಲಪಾತಗಳಿಗೆ ಕೊರತೆ ಇಲ್ಲ ಮೈಸೂರಿನಲ್ಲಿ. ಕೈಗಾರಿಕೆಗಳ ಅಭಿವೃದ್ಧಿಗೆ ವಿದ್ಯುತ್ ಸಹಕಾರಿ, ತುಂಬ ಅಗತ್ಯ. ಜಲವಿದ್ಯುದುತ್ಪಾದನೆ ಇತರ ವಿಧಾನಗಳಿಗಿಂತ ಅಗ್ಗ. ಜಲವಿದ್ಯುತ್ ಉತ್ಪಾದಿಸಲು ಸಾಧ್ಯ ಸ್ಥಳಗಳು; ರೈಲು, ರಸ್ತೆ ನಿರ್ಮಿಸುವುದು ಎಲ್ಲ ಅಗತ್ಯ. ಇವುಗಳ ಸಮೀಕ್ಷೆ ನಡೆಸಲಾಯಿತು.

ಗಂಧದ ಮರಕ್ಕೆ ಮಾತ್ರವಲ್ಲ ಮೈಸೂರು ಪ್ರಸಿದ್ಧವಾಗಿರುವುದು. ಸೊರಬ, ಸಾಗರ ಇಲ್ಲಿನ ಗುಡಿಗಾರರು ತಯಾರಿಸುವ ಗಂಧದ ಹಾಗೂ ಆನೆದಂತದ ಕಲಾ ಕೃತಿಗಳಿಗೂ ಮೈಸೂರು ಸುವಿಖ್ಯಾತ. ಬೆಲೆ ಹೆಚ್ಚು, ಕೊಳ್ಳುವವರು ಕಡಮೆ. ಬಡವರಿಗೆ ನಿಲುಕದು. ವಿದೇಶಗಳಲ್ಲಿ ಬೇಡಿಕೆ ಉಂಟು. ಅಗರ್‌ಬತ್ತಿ, ಗಂಧದ ಎಣ್ಣೆ, ಗಂಧದ ಸಾಬೂನು, ಏಲಕ್ಕಿ, ಮೆಣಸು ಮತ್ತು ಇತರ ಸಾಂಬಾರ ಸಾಮಗ್ರಿಗಳಿಗೆ ಗಿರಾಕಿ ಉಂಟು. ನಾಗಮಂಗಲದ ಹಿತ್ತಾಳೆ ಪಾತ್ರೆ, ವಿಗ್ರಹ, ಕಲಾಕೃತಿಗಳು ಚೆಂದ, ನೋಟಕ್ಕೆ ಆನಂದ. ಚನ್ನಪಟ್ಟಣದ ಅರಗಿನ ಬಣ್ಣಬಣ್ಣದ ಬೆಡಗಿನ ಆಟಿಕೆಗಳು ಆಕರ್ಷಕ. ಬೆಲೆ ಸುಲಭ. ಮಾರಲು ಮಾರುಕಟ್ಟೆ ಅಗತ್ಯ. ಇದಕ್ಕಾಗಿ ಸರ್ಕಾರದ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಮೈಸೂರು ಆರ್ಟ್ಸ್ ಮತ್ತು ಕ್ರಾಫ್ಟ್ಸ್ ಡಿಪೋ ಸ್ಥಾಪಿತವಾಯಿತು. ದೊಡ್ಡಬಳ್ಳಾಪುರದ ಸೀರೆ, ಜಂಖಾನ; ಬೆಂಗಳೂರಿನ ರೇಷ್ಮೆ ಕಲಾಬತ್ ಸೀರೆ; ಕಡಬ, ನಂಜನಗೂಡಿನ ಚಾಪೆ. ಇವು ಜನಪ್ರಿಯವಾದುವು. ಸಕಾಲಕ್ಕೆ ಸರಿಯಾದ ಬೆಲೆಗೆ ಗಿರಾಕಿ ಹೊಂದಿಸಿಕೊಳ್ಳಲಾರದೆ ಬಡತನವೇ ಇವರ ಬಾಳು. ನಮ್ಮ ನಾಡಿನಲ್ಲಿ ತಯಾರಾಗುವ ವಸ್ತುಗಳನ್ನು ಪ್ರೋತ್ಸಾಹಿಸಲು, ಸಾರ್ವಜನಿಕರ ಗಮನಕ್ಕೆ ತರಲು, ಮಾರುಕಟ್ಟೆ ಒದಗಿಸಲು ಮೈಸೂರಿನಲ್ಲಿ ದಸರಾ ವಸ್ತುಪ್ರದರ್ಶನ ವರ್ಷವರ್ಷವೂ ನಡೆಯುವಂತೆ ವ್ಯವಸ್ಥಿತವಾಯಿತು. ದಸರಾ ರಜೆಯಲ್ಲಿ ನಡೆಯುವ ಮೈಸೂರಿನ ವಿಜಯದಶಮಿಯ ಜಂಬೂಸವಾರಿ ಮೆರವಣಿಗೆ ಜಗತ್ಪ್ರಸಿದ್ಧ. ವೈಭವೋಪೇತವಾದ ಉತ್ಸವ ನೋಡಲು ಸಹಸ್ರ ಸಂಖ್ಯೆಯಲ್ಲಿ ದೇಶವಿದೇಶಗಳಿಂದ ಜನ ಬರುತ್ತಾರೆ. ಈ ಸಮಯ ಉಪಯೋಗಿಸಿಕೊಂಡು ವಸ್ತುಪ್ರದರ್ಶನ ವರ್ಷಂಪ್ರತಿ ನಡೆಸಲು ಪ್ರಾರಂಭಿಸಲಾಯಿತು. ಪ್ರತಿ ಜಿಲ್ಲೆಯಲ್ಲೂ, ಆಯಾ ಜಿಲ್ಲೆಗಳಲ್ಲಿ ದೊರೆಯುವ, ತಯಾರಾಗುವ ವಸ್ತುಗಳ ಪ್ರದರ್ಶನಕ್ಕಾಗಿ ಖಾಯಂ ಮ್ಯೂಸಿಯಂ ಅಥವಾ ವಸ್ತು ಪ್ರದರ್ಶನಾಲಯ ಸ್ಥಾಪಿಸುವ ಉದ್ದೇಶ ಅಪರದು. ಇವಕ್ಕೆ ಸಹಯೋಗವಾಗಿ ಇಂಗ್ಲಿಷ್ ಮತ್ತು ಕನ್ನಡದಲ್ಲಿ 'ಸಂಪದಭಿವೃದ್ಧಿ' ಪತ್ರಿಕೆ ಸರ್ಕಾರದ ವತಿಯಿಂದ ಹೊರಬರತೊಡಗಿತು. ಸಂಸ್ಥಾನದಲ್ಲಿ ನಡೆಯುತ್ತಿದ್ದ ಕಾರ್ಯಚಟುವಟಿಕೆ, ಬೆಳೆಯಲು ದೊರೆಯುವ ಅವಕಾಶ ಇವೆಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು. ಜಿಲ್ಲಾ ಮತ್ತು ತಾಲ್ಲೂಕು ಪುಸ್ತಕಗಳು ಆಯಾ ಪ್ರದೇಶಗಳಲ್ಲಿ ದೊರೆಯುವ ಕಚ್ಚಾ ಮಾಲು, ಅವು ಗಳಿಂದ ಸಿದ್ಧಪಡಿಸಬಹುದಾದ ವಸ್ತುಗಳು ಇವುಗಳ ವಿವರಗಳನ್ನು ಕೊಡುತ್ತಿದ್ದುವು. ಸಂಸ್ಥಾನದ ಆದಾಯ–ವ್ಯಯ; ಒಳ–ಹೊರ ವ್ಯಾಪಾರ, ಸರಕು ಸಾಮಗ್ರಿ, ದವಸ–ಧಾನ್ಯಗಳ ಉತ್ಪನ್ನ ಮೊದಲಾದ ವಿವರಗಳು ಪ್ರತಿ ವರ್ಷ ಪ್ರತ್ಯೇಕ ಪುಸ್ತಕವಾಗಿ ಪ್ರಕಟವಾಗುತ್ತಿತ್ತು.

ಆ ಕಾಲಕ್ಕೆ ಭಾರತಕ್ಕೆ ವಿದೇಶಗಳಿಂದ ವಿವಿಧ ವಸ್ತುಗಳು ಬರುತ್ತಿದ್ದುವು. ದಿನಬಳಕೆಯ ವಸ್ತುಗಳಾದ ಬೆಂಕಿಪೊಟ್ಟಣ, ಪೆನ್ಸಿಲ್, ಪೇನ, ಸೂಜಿ–ದಾರ, ಕಾಗದ, ಸಾಬೂನು, ಗಾಜಿನ ಸಾಮಾನು, ಕತ್ತರಿ, ಚಾಕು, ಗುಂಡುಸೂಜಿ, ಔಷಧಸಾಮಗ್ರಿ ಎಲ್ಲಕ್ಕೂ ವಿದೇಶಗಳನ್ನು ನಂಬಿ ಬಾಳಬೇಕು. ಇದು ನಮ್ಮ ದೇಶದ ಸ್ಥಿತಿ. ರೈಲು, ಎಂಜಿನ್,

ಮೋಟಾರು, ವಿಮಾನ, ವಿದ್ಯುಜ್ಜನಕ ಯಂತ್ರಗಳು, ವಿದ್ಯುದುಪಕರಣಗಳು, ಹಬೆ ಯಂತ್ರಗಳು, ಸೈಕಲ್, ಗಿರಣಿಗಳಿಗೆ ಅಗತ್ಯವಾದ ಯಂತ್ರಗಳು ಒಂದೋ ಎರಡೋ ಎಲ್ಲವೂ ಬರಬೇಕು ಹೊರದೇಶಗಳಿಂದ. ದೇಶದ ರಕ್ಷಣೆಗಾಗಿ ಬೇಕಾದ ಶಸ್ತ್ರಾಸ್ತ್ರಗಳಿಗೂ ನಾವು ಪರಾವಲಂಬಿಗಳು. ಈ ಪರಾವಲಂಬನೆ ಹೋಗಬೇಕು. ದೇಶ ಎಲ್ಲ ದೃಷ್ಟಿಯಿಂದಲೂ, ಎಲ್ಲ ಕ್ಷೇತ್ರಗಳಲ್ಲೂ ಸ್ವಾವಲಂಬಿಯಾಗಬೇಕು. ಇದು ವಿಶ್ವೇಶ್ವರಯ್ಯನವರ ಮಹತ್ವಾಕಾಂಕ್ಷೆ.

ಹಲವಾರು ಬಗೆಯ ಕೆಲಸಗಳಿಗೆ ಅಗತ್ಯವಾದ ನಾನಾ ಬಗೆಯ ತರುಲತೆಗಳು ನಮ್ಮ ಅರಣ್ಯದಲ್ಲಿ ಬೆಳೆಯುತ್ತವೆ. ನಮ್ಮ ವೃಕ್ಷಸಂಪತ್ತು ಅಪಾರ. ಅದನ್ನು ಬಳಸಿಕೊಳ್ಳುವ ಸಾಮರ್ಥ್ಯ ಗಳಿಸಿಕೊಳ್ಳಬೇಕು ನಾವು. ಅಷ್ಟೆ. ಬೆಂಕಿಕಡ್ಡಿ, ಬೆಂಕಿಪೊಟ್ಟಣ, ಸೀಸದ ಕಡ್ಡಿ, ಪೆನ್ಸಿಲ್ ತಯಾರಿಸಲು ಮೃದುಮರ ಅಗತ್ಯ. ನಮ್ಮ ಅರಣ್ಯಗಳಲ್ಲಿ ಈ ಜಾತಿಯ ಮರಗಳಿಗೆ ಕೊರತೆಯಿಲ್ಲ. ಸ್ವೀಡನ್ ಉತ್ತಮ ದರ್ಜೆಯ ಬೆಂಕಿಪೊಟ್ಟಣಕ್ಕೆ ಪ್ರಸಿದ್ಧವಾದುದು. ಅಲ್ಲಿಂದ ತಜ್ಞರನ್ನು ಬರಮಾಡಿಕೊಂಡು ಶಿವಮೊಗ್ಗೆಯಲ್ಲಿ ಬೆಂಕಿಕಡ್ಡಿ ಮತ್ತು ಪೊಟ್ಟಣ ಕಾರ್ಖಾನೆ ಸ್ಥಾಪಿಸಲಾಯಿತು. ಅದೇಕೋ ಇದು ಯಶಸ್ವಿಯಾಗಲಿಲ್ಲ.

ಕೈಮಗ್ಗದ ಸೀರೆ, ಧೋತ್ರ, ಮತ್ತು ಇತರ ನಮೂನೆಯ ಬಟ್ಟೆಗಳಿಗೆ ಭಾರತ ಪ್ರಸಿದ್ಧವಾದುದು. ಕೈಮಗ್ಗದ ಅರಿವೆಗಳು ಇಂದಿಗೂ ವಿದೇಶಗಳಿಗೆ ರಫ್ತಾಗುತ್ತಿವೆ. ಆಧುನಿಕ ನೂಲು ಮತ್ತು ಬಟ್ಟೆ ತಯಾರಿಸುವ ಕಾರ್ಖಾನೆಗಳ ಸ್ಥಾಪನೆಯಿಂದ, ಕೈಮಗ್ಗದ ಕೆಲಸಗಾರರಿಗೆ ಕೆಲಸವಿಲ್ಲದಾಯಿತು. ನೂತನ ನಮೂನೆ ಅರಿವೆ ತಯಾರಿಸುವ ಮಾದರಿ ನೇಯ್ಗೆ ಕಾರ್ಖಾನೆ ಸರ್ಕಾರದ ಆಶ್ರಯದಲ್ಲಿ ಸ್ಥಾಪಿತವಾಯಿತು. ನೂತನ ಮಾದರಿ ಅರಿವೆ ತಯಾರಿಸಿ ಕೊಡುವುದಷ್ಟೆ ಇದರ ಉದ್ದೇಶ. ಕೈಮಗ್ಗದವರೊಡನೆ ಪೈಪೋಟಿ ನಡೆಸುವುದಲ್ಲ. ಅಗತ್ಯವಾದ ಸಲಕರಣೆ, ಧನಸಹಾಯ, ನೂತನ ನಮೂನೆ ಅರಿವೆ ಇವುಗಳನ್ನು ಕೈಮಗ್ಗದವರಿಗೆ ಒದಗಿಸಿ ಸರ್ಕಾರ ನೆರವು ನೀಡಿತು.

ಸೋಲಿನಿಂದ ಜೋಲುಮುಖ ಮಾಡಿಕೊಳ್ಳುವುದು ವಿಶ್ವೇಶ್ವರಯ್ಯನವರಿಗೆ ಸಲ್ಲ. ಇದು ಅವರ ಸ್ವಭಾವಕ್ಕೆ ವಿರುದ್ಧ. ಸೋಲನ್ನು ಜಯದ ಸೋಪಾನವಾಗಿ ಪರಿವರ್ತಿಸಿಕೊಳ್ಳುವ ಧೀಮಂತಿಕೆ ಅವರದು. ಅಪಜಯಕ್ಕೆ ಕಾರಣವೇನು? ಏಕೆ ಸಂಭವಿಸಿತು ಎಂದು ಕಾರಣ ಕಂಡುಹಿಡಿಯುವರು. ಅದನ್ನು ಪರಿಹರಿಸಿಕೊಂಡು ಮುನ್ನಡೆಯುವರು. ಜೀವನವೇ ಒಂದು ಸಮಸ್ಯೆ. ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಿ ಬಗೆಹರಿಸಿಕೊಳ್ಳುವ ಸಾಮರ್ಥ್ಯ ಗಳಿಸಿಕೊಳ್ಳಬೇಕು. ವಿಮುಖನಾಗಬಾರದು. ಪ್ರತಿಯೊಂದು ಸಮಸ್ಯೆಯೂ ಅದನ್ನು ಎದುರಿಸಿ ಬಗೆಹರಿಸುವ ಅವಕಾಶ ಕಲ್ಪಿಸಿಕೊಡುತ್ತದೆ, ಎಂದು ಅರಿಯಬೇಕು. ಇದು ನನ್ನ ಹಣೇಬರಹ ಎಂದು ಹಣೆಯಮೇಲೆ ಕೈಯಿಟ್ಟು, ಅದೃಷ್ಟವನ್ನು ದೂರುವುದು ಎದೆಗಾರಿಕೆಯ ಲಕ್ಷಣವಲ್ಲ. ಅದು ಅವಲಕ್ಷಣ. ಜಯಾಪಜಯ ವ್ಯಕ್ತಿಯ ಸ್ವಶಕ್ತಿ ಸ್ವಪ್ರಯತ್ನವನ್ನು ಅವಲಂಬಿಸಿರುತ್ತದೆ.

ಕರ್ಮ, ಹಣೆಬರಹ, ಮುಹೂರ್ತ, ಪರಿಸ್ಥಿತಿ ಇವುಗಳನ್ನು ದೂರುವುದರಿಂದ ಪ್ರಯೋಜನವಾಗದು. ಸುಖ ಬಯಸುವುದು ಸ್ವಾಭಾವಿಕ. ಮಾನವ ಸುಖದ ಬೆನ್ನಟ್ಟುತ್ತಾನೆ. ಕಷ್ಟವನ್ನು ದೂರಪಡಿಸಲು ಅಪೇಕ್ಷಿಸುತ್ತಾನೆ. ಕಷ್ಟದಿಂದ ಲಭಿಸುತ್ತದೆ ಸುಖ. ಕೇವಲ ಸುಖವನ್ನೇ ಬಯಸುವ ಸುಖಾಪೇಕ್ಷಿ ದೀರ್ಘ ಕಾಲ ಸುಖವಾಗಿ ಬಾಳಲಾರ. ಕಷ್ಟ ತಾಳಲಾರ. ಕಷ್ಟ ಬಂದರೆ ಅವನು ಮುದುಡಿಕೊಳ್ಳುತ್ತಾನೆ. ಕಷ್ಟ ಬಾರದು ಕಲ್ಲಿಗೆ. ತನ್ನ ತಾಳ್ಮೆ, ಕಷ್ಟ ಸಹಿಷ್ಣುತೆ, ಧೈರ್ಯ ಸ್ಥೈರ್ಯ ಪರೀಕ್ಷಿಸುವುದಕ್ಕೇ ಕಷ್ಟ ಬರುತ್ತದೆ ಎಂದು ಗ್ರಹಿಸಬೇಕು. ಪುರಂದರ ದಾಸರು ಹಾಡಿರುವಂತೆ 'ಈಸಬೇಕು, ಇದ್ದು ಜಯಿಸಬೇಕು.' ವಿಶ್ವೇಶ್ವರಯ್ಯನವರು ಮೇಲಿಂದ ಮೇಲೆ ಆಡುತ್ತಿದ್ದ ವಾಕ್ಯಗಳಿವು.

ಪ್ರಕೃತಿಯ ಕೃಪೆ ಅಪಾರವಾಗಿದೆ ಮೈಸೂರಿನ ಮೇಲೆ. ಅದನ್ನು ಯೋಗ್ಯ ರೀತಿಯಲ್ಲಿ ಬಳಸಿಕೊಂಡು ಬೆಳೆಸಬೇಕು ಕೈಗಾರಿಕೆ. ಇದರಲ್ಲಿ ಅಡಗಿದೆ ಮಾನವನ ಸಾಮರ್ಥ್ಯ. ದೇಶದ ಬಲ. ಪ್ರತಿಯೊಂದು ಉದ್ಯಮವೂ ಕೆಲವು ಬುದ್ಧಿಜೀವಿಗಳಿಗೂ, ಅನೇಕ ಕಾರ್ಮಿಕರಿಗೂ, ವರ್ತಕರಿಗೂ ಉದ್ಯೋಗಾವಕಾಶ ಕಲ್ಪಿಸಿಕೊಡುವಂತಿರಬೇಕು. ಇವುಗಳ ಸಂಖ್ಯೆ ಬೆಳೆಯಬೇಕು. ಶ್ರಮಪಡಲು ಸಿದ್ಧನಿರುವ ಪ್ರತಿಯೊಬ್ಬನ ಸಾಮರ್ಥ್ಯಕ್ಕೆ ಅನುಗುಣ ಯೋಗ್ಯ ಕೆಲಸ ದೊರೆಯುವಂತಿರಬೇಕು. ನಮ್ಮ ದೇಶದ ಸ್ತ್ರೀಪುರುಷರು ಸ್ವಸಾಮರ್ಥ್ಯದಿಂದ ಪ್ರಾಮಾಣಿಕ ಜೀವನ ನಡೆಸುವ ಮಾರ್ಗ ಅನುಸರಿಸಬೇಕು. ಶ್ರದ್ಧೆ ವಹಿಸಿ ದುಡಿಯಬೇಕು. ದುಡಿಯದೆ, ಕಷ್ಟಪಡದೆ, ಮತ್ತೊಬ್ಬನ ಶ್ರಮದ ಫಲ ತಾನು ಪಡೆಯುವುದು ಹೇಗೆ? ಹೀಗೆ ಚಿಂತಿಸುವುದು, ಉಪಾಯ ಹುಡುಕುವುದು ದೇಶದ್ರೋಹ. ಇದೇ ಅವರ ಭಾಷಣಗಳ ರಾಗ, ತಾನ, ಪಲ್ಲವಿ. ಹೇಳಿದ್ದನ್ನೇ ಹೇಳುವುದರಲ್ಲಿ ಬೇಸರ ಆಗದು ಅವರಿಗೆ ಜನಮನದ ಮೇಲೆ ಪರಿಣಾಮ ಬೀರುವುದು ಅವರ ಉದ್ದೇಶ. ಸಂಕುಚಿತ, ಸ್ವಾರ್ಥಸಾಧಕ, ಸ್ವಜನಪಕ್ಷಪಾತದ ರಾಜಕೀಯ ಇವು ಅವರಿಂದ ದೂರವಾಗಿದ್ದುವು.

ವಿಜ್ಞಾನ ಮತ್ತು ಯಂತ್ರತಂತ್ರದಲ್ಲಿ ವಿಶ್ವೇಶ್ವರಯ್ಯನವರಿಗೆ ಅಪಾರ ವಿಶ್ವಾಸ. ವರ್ಧಿಸುತ್ತಿರುವ ಶಕ್ತಿ ವಿಜ್ಞಾನ. ವಿಜ್ಞಾನ ಹೊಸ ವಿಶ್ವವನ್ನೇ ಸೃಜಿಸುತ್ತದೆ. ಅದರ ಅನಾದರಣೆಯಿಂದ ಆದೀತು ಅನಾಹುತ. ವಿಜ್ಞಾನ ಮತ್ತು ಯಂತ್ರತಂತ್ರ ಸಹೋದರರಂತೆ ಸಮಭಾಗಿಗಳು. ಇವುಗಳ ಸಮನ್ವಯವೇ ಔದ್ಯೋಗೀಕರಣ. ಭಾರತದ ಭವಿಷ್ಯಕ್ಕೆ ಅವರ ಮದ್ದು 'ಔದ್ಯೋಗೀಕರಣ ಇಲ್ಲವೇ ಮರಣ.'

# 14. ಸಾಮಾಜಿಕ ಸುಧಾರಣೆ

ಸಮಾಜದ ಸಕಲ ಕ್ಷೇತ್ರಗಳಲ್ಲೂ ಕಂಡುಬರುವ ದೋಷ ಅಸಮಾನತೆ. ಇದು ನಿವಾರಣೀಯವಲ್ಲವೇ? ಮೇಲು–ಕೀಳು; ಭಾಗ್ಯವಂತ–ಬಡವ; ವಿವೇಕಿ–ಅವಿವೇಕಿ; ಪಂಡಿತ–ಪಾಮರ; ಸ್ಪೃಶ್ಯ–ಅಸ್ಪೃಶ್ಯ; ಹಿಂದೂ–ಮುಸ್ಲಿಂ ಈ ಬಗೆಯ ಭಿನ್ನತೆ, ಅಸಮಾನತೆ ಎಲ್ಲೆಲ್ಲೂ ಕಾಣಬಹುದು. ಪ್ರಪಂಚದಲ್ಲಿ ಸಂಭವಿಸಿರುವ ಅನೇಕ ಧಾರ್ಮಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಕ್ರಾಂತಿಗಳ ಮೂಲ ಈ ಅಸಮಾನತೆ. ಅಸಮಾನತೆ ತೊಲಗಿಸಲು ಅನಾದಿ ಕಾಲದಿಂದ ಅವಿರತ ಪ್ರಯತ್ನ ನಡೆಯುತ್ತಲೇ ಇದೆ. ಜಾತಿಮತಧರ್ಮಗಳು ಹುಟ್ಟಿನಿಂದಲೇ ಅಸಮಾನತೆ ಹೊತ್ತುತರುತ್ತವೆ. ಸಮಾಜದಲ್ಲಿ ಪ್ರತಿಯೊಬ್ಬನಿಗೂ ಸಮಾನ ಅವಕಾಶ ದೊರೆಯದು. ಪ್ರತಿಯೊಬ್ಬ ಭಾರತೀಯನಿಗೂ ಸಮಾನ ಅವಕಾಶ ಕಲ್ಪಿಸಿಕೊಡುವುದು ಸ್ವತಂತ್ರ ಭಾರತದ ಹೆಗ್ಗುರಿ. ನ್ಯಾಯಾಲಯದ ಸಮ್ಮುಖದಲ್ಲಿ ಎಲ್ಲರೂ ಸಮಾನರು. ಕರುಣಾಳು ಗೌತಮ ಬುದ್ಧನಿಂದ ಹಿಡಿದು ಗಾಂಧೀ ಮಹಾತ್ಮನ ವರೆಗೆ, ವಿಭೂತಿಪುರುಷ ಬಸವೇಶ್ವರನ ವರೆಗೆ ಮಾನವನಲ್ಲಿರುವ ಅಸಮಾನತೆ ಹೋಗಲಾಡಿಸಲು ಶ್ರಮಿಸುತ್ತ ಬಂದಿದ್ದಾರೆ. ಮತ ಸ್ಥಾಪಕರು, ಧರ್ಮಬೋಧಕರು, ಸಮಾಜ ಸುಧಾರಕರು ಮನುಜಕುಲವೆಲ್ಲ ಒಂದೇ ಎಂದು ಮೊಳಗುತ್ತ ಬಂದಿರುತ್ತಾರೆ. "ಕುಲಕುಲವೆಂದು ಹೊಡೆದಾಡಬೇಡಿ. ಹುಚ್ಚಪ್ಪಗಳಿರಾ" ಎಂದು ಸಾರಿಸಾರಿ ಹೇಳಿರುತ್ತಾರೆ ಕರ್ನಾಟಕದದಾಸಶ್ರೇಷ್ಠ ಪುರಂದರ ದಾಸ. ಆಧುನಿಕ ಕಾಲದಲ್ಲಿ ಅಸ್ಪೃಶ್ಯತೆ ಹೋಗಲಾಡಿಸಲು ತಮ್ಮ ಪ್ರಾಣವನ್ನೇ ಮುಡುಪಾಗಿಟ್ಟವರಲ್ಲಿ ಅಗ್ರಗಣ್ಯರು ಮಹಾತ್ಮ ಗಾಂಧೀ.

ಮೈಸೂರು ಸಂಸ್ಥಾನದ ದಿವಾನರಾದ ಪ್ರಾರಂಭದಲ್ಲಿಯೇ ವಿಶ್ವೇಶ್ವರಯ್ಯನವರು ಹಿಂದುಳಿದ ವರ್ಗದ ಶ್ರೇಯಸ್ಸಿಗಾಗಿ ಹಲವಾರು ಕ್ರಮಗಳನ್ನು ಕೈಗೊಂಡರು. ವಿದ್ಯೆ ಕಲಿಯಲು ಸಮಾನ ಅವಕಾಶ ಒದಗಿಸಿಕೊಟ್ಟರು. ಮಾನವೀಯ ಮೌಲ್ಯಗಳಿಗೆ ಮೆರುಗು ಕೊಟ್ಟರು. ಕರ್ಮ, ಹಣೇಬರಹ, ಕಿಸ್ಮತ್, ಪೂರ್ವಜನ್ಮದ ಫಲ ಅನುಭವಿ ಸಿಯೇ ತೀರಬೇಕು ಎಂಬ ಸೋಲು ಮನೋಭಾವನೆಯ ವಿರುದ್ಧ ಪ್ರತಿಭಟಿಸಿದರು. ಪಾರಮಾರ್ಥಿಕ, ಅನ್ಯ ಪ್ರಪಂಚದ ಚಿಂತೆ ಅಂತಿರಲಿ, ಪ್ರಕೃತ ಪ್ರಪಂಚದಲ್ಲಿ ಬದುಕಿರುವ ವರೆಗೆ, ಇತರರಿಗೆ ತೊಂದರೆಯಾಗದಂತೆ, ಬಾಳನ್ನು ಸುಖಮಯವಾಗಿ ಮಾಡಿಕೊಳ್ಳು ವುದು ನಮ್ಮ ಆದ್ಯ ಕರ್ತವ್ಯ ಎನ್ನುತ್ತಿದ್ದರು.

ವಿಶ್ವೇಶ್ವರಯ್ಯನವರದು ಒಂಟಿ ಜೀವನ. ಏಕಾಂಗಿಯ ಬದುಕು, ಸಂಕೋಚ ಪ್ರವೃತ್ತಿ. ಹತ್ತು ಜನರೊಡನೆ ಕೂಡಿ ಬಾಳುವ ಸ್ವಭಾವವಲ್ಲ. ವ್ಯಕ್ತಿಯ ನಡತೆ,

ಜೀವನಕ್ರಮ, ಚಾರಿತ್ರ್ಯ ಇವನ್ನು ಗಮನಿಸಿ ಅಂಥವರ ಸ್ನೇಹ ಮಾತ್ರ ಬೆಳಸುವರು. ಬಂಧುಬಾಂಧವರನ್ನು ಮನೆಗೆ ಸೇರಿಸರು. ಇಂಥ ಸಂಕೋಚ ಪ್ರವೃತ್ತಿಯ ವ್ಯಕ್ತಿ, ಹತ್ತಾರು ಜನ ಕೂಡಿ ವಿಶ್ರಾಂತಿ ಪಡೆಯಲು 'ಕ್ಲಬ್' ಅಥವಾ ಆರಾಮ ಮಂದಿರ ಗಳನ್ನು ಸ್ಥಾಪಿಸಿರುವುದು ಆಶ್ಚರ್ಯವೆನಿಸದಿರಲಾರದು. ಈ ಬಗೆಯ ಪ್ರಥಮ ಪ್ರಯತ್ನ ಅವರು ನಡೆಸಿದ್ದು ಪುಣೆಯಲ್ಲಿ. ಈಗ ಸಮಾಜ ಬಹಳ ಸುಧಾರಿಸಿದೆ. ವಿಶ್ವೇಶ್ವರಯ್ಯನವರು ಎದುರಿಸಬೇಕಾಗಿ ಬಂದ ಸಮಸ್ಯೆಗಳನ್ನು ಗ್ರಹಿಸಲು ಅಂದಿನ ಕಾಲದ ಸಮಾಜದ ಚಿತ್ರ ನಾವು ಸ್ಮರಿಸಿಕೊಳ್ಳಬೇಕು, ಚಿತ್ರಿಸಿಕೊಳ್ಳಬೇಕು. ಆಗ ಸಹಪಂಕ್ತಿ ಭೋಜನವೂ ನಿಷಿದ್ಧ. ಸಮುದ್ರಯಾನ ಕೂಡದು. ಸಮುದ್ರಯಾನ ಮಾಡುವುದು, ಶಾಖಾಹಾರಿಯಾದವನು ಮಾಂಸ ಸೇವಿಸುವುದು, ಕುಡಿಯುವುದು ಇವೆಲ್ಲವೂ ಬಹಿಷ್ಕೃತ. ಸಮುದ್ರಯಾನ ಮಾಡಿ ಬಂದವನಿಗೆ ಬಹಿಷ್ಕಾರ ವಿಧಿಸ ಲಾಗುತ್ತಿತ್ತು. ಪೂಜೆ—ಪುನಸ್ಕಾರ, ಮುಂಜಿ–ಮದುವೆ, ಧರ್ಮ—ಕರ್ಮಕಾರ್ಯ, ಭೋಜನಕೂಟ ಯಾವುದರಲ್ಲೂ ಅವನು ಭಾಗವಹಿಸುವಂತಿರಲಿಲ್ಲ. ಶವಸಂಸ್ಕಾ ರಕ್ಕೂ ಆಸ್ಪದವಿಲ್ಲ. ಕರಮಚಂದ್ ಗಾಂಧಿ ಸಮುದ್ರಯಾನ ಮಾಡಿ ಪಾಶ್ಚಾತ್ಯ ದೇಶಗಳಿಗೆ ಉಚ್ಚಶಿಕ್ಷಣ ಪಡೆಯಲು ಹೋದುದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳ ಬೇಕಾಯಿತು.

1809ರ ಸುಮಾರಿನಲ್ಲಿ ಪುಣೆಯ ಕೆಲವು ಬುದ್ಧಿಜೀವಿಗಳು ಸಮಾಜ ಸುಧಾರ ಣೆಯ ಕಾರ್ಯದಲ್ಲಿ ನಿರತರಾಗಿದ್ದರು. ಒಮ್ಮೆ ಒಂದು ಕ್ರಿಶ್ಚಿಯನ್ ಸಂಸ್ಥೆ ಸಹಪಂಕ್ತಿ ಉಪಾಹಾರ ಕೂಟ ಏರ್ಪಡಿಸಿ ಕೂಟದಲ್ಲಿ ಭಾಗವಹಿಸಲು ಪ್ರಮುಖ ಹಿಂದೂಗಳನ್ನು ಆಹ್ವಾನಿಸಿದರು. ನಲವತ್ತೆರಡು ಬ್ರಾಹ್ಮಣ ವಿದ್ಯಾವಂತರು ಆಹ್ವಾನ ಮನ್ನಿಸಿ ಕೂಟ ದಲ್ಲಿ ಭಾಗವಹಿಸಿದ್ದರು. ಹಳೆಯ ಶಿಷ್ಟಾಚಾರದವರಿಗೆ ಇದು ಸರಿದೋರಲಿಲ್ಲ. ಸುಧಾರಕರು ಸಂಪ್ರದಾಯವಾದಿಗಳ ಅಪಹಾಸ್ಯಕ್ಕೆ ಗುರಿಯಾದರು. ಆದರೆ ಸುಧಾರ ಕರು ಹಿಂಜರಿಯಲಿಲ್ಲ. ಕ್ರಮೇಣ ಅವರ ಕೈ ಮೇಲಾಯಿತು. ಸಂಪ್ರದಾಯ ಶರಣರೂ ಸುಧಾರಕರ ಮಾರ್ಗ ಅನುಸರಿಸಲು ಕಾಲ ಬಹಳ ಬೇಕಾಗಲಿಲ್ಲ.

ವಿಶ್ವೇಶ್ವರಯ್ಯನವರಿಗೆ ಸಹಪಂಕ್ತಿ ಭೋಜನ ಅಪೂರ್ವವಲ್ಲ. ಆರು ಸಾರಿ ಹಿಂದೂದೇಶದಿಂದ ಅನ್ಯದೇಶಗಳಿಗೆ ಅವರು ಹೋಗಿಬಂದರು. ಭಾರತೀಯರಲ್ಲದೆ ವಿದೇಶೀಯರೊಡನೆ, ಅನ್ಯಮತೀಯರೊಡನೆ ಸಹಪಂಕ್ತಿ ಭೋಜನ ಮಾಡುವುದು ಅವರಿಗೆ ಸಹಜವಾಗಿತ್ತು. ಸಾಮಾನ್ಯವಾಗಿ ವಿದೇಶೀಯರು ಮಾಂಸಾಹಾರಿಗಳು. ಧೂಮಪಾನ ಸುರಾಪಾನ ಪ್ರಿಯರು. ವಿಶ್ವೇಶ್ವರಯ್ಯನವರು ಪೂರ್ಣ ಶಾಖಾಹಾರಿ. ಧೂಮಪಾನ ಸುರಾಪಾನ ಅರಿಯರು. ಮೊಟ್ಟೆ, ಮೀನು ಸಹ ಮುಟ್ಟರು. ವಿದೇಶ ಗಳಲ್ಲಿ ವಿರಾಮವನ್ನು ಆರಾಮವಾಗಿ ಸ್ನೇಹಿತರೊಡನೆ ಕಳೆಯಲು 'ಕ್ಲಬ್'ಗಳನ್ನು ಸ್ಥಾಪಿಸಿಕೊಂಡಿರುತ್ತಾರೆ. ಈ ಬಗೆಯ 'ಕ್ಲಬ್' ಅಥವಾ ಸಂಘಗಳನ್ನು ಅವರು ಪುಣೆ, ಬೆಂಗಳೂರು, ಮೈಸೂರುಗಳಲ್ಲಿ ಸ್ಥಾಪಿಸಿದರು.

'ಕ್ಲಬ್' ಸ್ಥಾಪಿಸುವ ಮೊದಲ ಪ್ರಯತ್ನ ನಡೆದುದು ಪುಣೆಯಲ್ಲಿ. ಪುಣೆಯ ನಾಗರಿಕರು ಪಾನ್‌ಸುಪಾರಿ ಕೂಟದಲ್ಲಿ ಅನ್ಯೋನ್ಯವಾಗಿ ಭಾಗವಹಿಸುವರು. ಇದಕ್ಕೆ ಪ್ರತಿಯಾಗಿ ವಿದೇಶೀಯ ಮಾದರಿಯ ಕ್ಲಬ್ ಸ್ಥಾಪಿಸುವ ಪ್ರಯತ್ನ. ವಿಶ್ವೇಶ್ವರಯ್ಯ ಈ ಪ್ರಯತ್ನದಲ್ಲಿ ತೊಡಗುವ ಮೊದಲೇ ಹಿಂದೊಮ್ಮೆ ಪ್ರಯತ್ನ ನಡೆದು ವಿಫಲ ವಾಗಿತ್ತು. ವಿಶ್ವೇಶ್ವರಯ್ಯನವರಿಗೆ ಪುಣೆಯ ಪ್ರತಿಷ್ಠಿತ ವ್ಯಕ್ತಿಗಳಾದ ಗೋಪಾಲಕೃಷ್ಣ ಗೋಖಲೆ, ಎಂ. ಜಿ. ರಾನಡೆ ಮೊದಲಾದವರು ಚಿರಪರಿಚಿತರು. ನ್ಯಾಯಮೂರ್ತಿ ರಾನಡೆ ಅವರ ನೆರವಿನಿಂದ ಚರಿತ್ರಾರ್ಹ 'ಹೀರಾಬಾಗ್' ಕಟ್ಟಡ ಬಾಡಿಗೆಗೆ ಪಡೆದರು. ತಾನು ಯುದ್ಧಕ್ಷೇತ್ರದಲ್ಲಿ ಹೋರಾಟದಲ್ಲಿ ತೊಡಗಿದ್ದಾಗ ತನ್ನ ರಾಣಿವಾಸದವರು ಸುಖವಾಗಿ, ನಿರ್ಭಯವಾಗಿ ಕಾಲಕಳೆಯಲು ಟಿಪ್ಪು ಸುಲ್ತಾನನು ಈ ಅರಮನೆಯನ್ನು ಕಟ್ಟಿಸಿದ್ದನು. ಇವರೊಡನೆ ಸಹಕರಿಸಿದ್ದ ಚಿಂತಾಮಣಿ ರಾವ್ ಪ್ಲೇಗ್ ಪೀಡಿತರಾಗಿ ನಿಧನರಾದರು. ಧೃತಿಗೆಡದೆ ಅವರು ಬೀರಾರಿನ ನಿವೃತ್ತ ವಿದ್ಯಾಧಿಕಾರಿ ನಾರಾಯಣ ಭಾವತ್ ದಾಂಡೀಕರ್, ಸೇನಾ ಇಲಾಖೆಯ ನಿವೃತ್ತ ಖಾನ್ ಬಹದ್ದೂರ್ ದಿನ್‌ಷಾ ಖಾಂಭಟ್ ಇವರ ಸಹಕಾರ ಪಡೆಯುವುದರಲ್ಲಿ ಯಶಸ್ವಿಯಾದರು. ವಿಶ್ವೇಶ್ವರಯ್ಯ ನವರು ಹದಿನಾಲ್ಕು ವರ್ಷ ಪುಣೆಯಲ್ಲಿ ಸಂತೋಷದಿಂದ ಬಾಳಿದವರು. ಪುಣೆ ಆ ಕಾಲಕ್ಕೆ ಶಿಕ್ಷಣ ಮತ್ತು ರಾಜಕೀಯಕ್ಕೆ ಹೆಸರಾಂತ ಸ್ಥಳವಾಗಿತ್ತು. ಲೋಕಮಾನ್ಯ ಬಾಲಗಂಗಾಧರ ತಿಲಕ್ ಮತ್ತು ಸಾರ್ವಜನಿಕ ಸಭೆ ರಾಜಕೀಯ ಚಳವಳಿಗೆ ಪ್ರಸಿದ್ಧ ವಾಗಿದ್ದುವು. ಆದರೆ ಪಾಶ್ಚಾತ್ಯ ರೀತಿಯ 'ಕ್ಲಬ್' ಪುಣೆಯಲ್ಲಿ ಇರಲಿಲ್ಲ. ನವಂಬರ್ 17, 1891ರಂದು ವಿಶ್ವೇಶ್ವರಯ್ಯನವರ ಪ್ರಯತ್ನದಿಂದ ಪುಣೆಯ ನಾಗರಿಕರ ಸಭೆ ನೆರೆಯಿತು. ನಿವೃತ್ತ ಜಿಲ್ಲಾ ನ್ಯಾಯಾಧೀಶ ರಾವ್ ಬಹದ್ದೂರ್ ಗೋಪಾಲ ರಾವ್ ಹರಿದೇಶಮುಖ ಅಧ್ಯಕ್ಷತೆ ವಹಿಸಿದ್ದರು. 'ಡೆಕನ್ ಕ್ಲಬ್' ಎಂದು ನಾಮಾಂಕಿತವಾದ 'ಕ್ಲಬ್' ಅಂದು ಅಸ್ತಿತ್ವಕ್ಕೆ ಬಂತು. ಮೊದಲ ವರ್ಷ ಸರ್ದಾರ್ ದೊರಾಬ್ಜಿ ಪದಂಜಿ ಅಧ್ಯಕ್ಷರಾಗಿ ಚುನಾಯಿತರಾದರು. ಕಾರ್ಯದರ್ಶಿಗಳಲ್ಲಿ ಒಬ್ಬರು ವಿಶ್ವೇಶ್ವರಯ್ಯನವರು. ಇನ್ನೊಬ್ಬರು ದಿನ್‌ಷಾ ಮತ್ತು ಖಾಂಭಟ್. ವಿಶ್ವೇಶ್ವರಯ್ಯನವರು ಮೂರು ವರ್ಷಕಾಲ 'ಡೆಕನ್ ಕ್ಲಬ್'ನ ಕಾರ್ಯದರ್ಶಿಯಾಗಿದ್ದರು. 1941ರಲ್ಲಿ 'ಕ್ಲಬ್' ತನ್ನ ರಜತ ಮಹೋತ್ಸವ ಆಚರಿಸಿತು. 'ಡೆಕ್ಕನ್ ಕ್ಲಬ್'ನ ಮೂಲ ವ್ಯವಸ್ಥಾಪಕರಲ್ಲಿ ಒಬ್ಬರಾದ ವಿಶ್ವೇಶ್ವರಯ್ಯನವರು ರಜತ ಮಹೋತ್ಸವದ ಅಧ್ಯಕ್ಷರಾಗಿ ಪಾಲ್ಗೊಳ್ಳುವ ಸುಯೋಗ ಲಭಿಸಿತ್ತು.

ನಮ್ಮ ಜನರ ಜೀವನಕ್ರಮ ಧಾರ್ಮಿಕ ಆಧಾರಿತ. ಧರ್ಮ, ಧಾರ್ಮಿಕ ಇವುಗಳ ಅರ್ಥ ತುಂಬ ವ್ಯಾಪಕ. ಅನೂಚಾನವಾಗಿ ನಡೆದುಬಂದ ಪದ್ಧತಿಯೂ ಧಾರ್ಮಿಕ ಆಗುತ್ತದೆ. ಹಳೆಯ ಪದ್ಧತಿಯನ್ನು, 'ಅಜ್ಜ ನೆಟ್ಟ ಆಲದ ಮರ' ಎಂಬ ವಿಶ್ವಾಸದಿಂದ ಅನುಸರಿಸುವ ಅಂಧಾನುಕರಣೆ ನಮ್ಮದು. ಹಳೆಯದರಲ್ಲಿ ಹಂಬಲು, ಹೊಸದರಲ್ಲಿ ಭಯ. ಹಳೆಯದನ್ನೂ ಬಿಡರು, ಹೊಸದನ್ನೂ ಶ್ರದ್ಧಾಪೂರ್ವಕ ಅನುಸರಿಸರು. ಉತ್ಸಾಹ ರಹಿತ ಬದುಕು. ಕಾಲ ಕಳೆದರಾಯ್ತು ಎಂಬ ಅಪೌರುಷ ಜೀವನ. ಆಶಾ

ವಾದಿಗಳಲ್ಲ. ಉನ್ನತ ಧ್ಯೇಯ ಸಾಧಿಸುವ ಪ್ರಯತ್ನ, ಆಶಾಭಾವನೆ ಅಪೂರ್ವ. ಸೋಲು ಭಾವನೆಯ ವಿರುದ್ಧ ಹೋರಾಡುವಂತೆ ಜನರನ್ನು ವಿಶ್ವೇಶ್ವರಯ್ಯನವರು ಹುರಿದುಂಬಿಸುತ್ತಿದ್ದರು

ನಮಗೆ ಸಂಸಾರ ದುಃಖ ಸಾಗರ. ಸಂಸಾರಸಾಗರದಿಂದ ದಾಟಿಸು—ಇದು ನಮ್ಮ ದಿನನಿತ್ಯದ ಮೊರೆ. ಬಾಳ್ವೆ ನಮಗೆ ದುಃಖಮಯ. ಹೊಂದಲಾಗದ ಮುಕ್ತಿ ನಮ್ಮ ಜೀವನ ಧ್ಯೇಯ. ಇಹಲೋಕದ ಬಾಳ್ವೆಗಿಂತ ಪರಲೋಕದ ಚಿಂತೆ ಅಧಿಕ. ಪಾಶ್ಚಾತ್ಯರ ದೃಷ್ಟಿ ತದ್ವಿರುದ್ಧ. ಇಲ್ಲಿರುವ ವರೆಗೆ ಇಹಲೋಕದ ಚಿಂತೆ. ಸುಖಜೀವನ ನಡೆಸುವ ಸರ್ವ ಪ್ರಯತ್ನ. ವ್ಯಕ್ತಿ ಮತ್ತು ಸಾಮೂಹಿಕ ಪ್ರಯತ್ನದಲ್ಲಿ ತುಂಬ ವಿಶ್ವಾಸ ಮತ್ತು ಶ್ರದ್ಧೆ. ನಾಡಿನ ಅಭಿವೃದ್ಧಿಗೆ ಅಂತ್ಯವಿಲ್ಲವೆಂಬ ಆತ್ಮವಿಶ್ವಾಸ.

ನಮ್ಮ ಜನ ತಮ್ಮ ಶಕ್ತಿ ಸಾಮರ್ಥ್ಯ ಬಹುವಿಧಗಳಲ್ಲಿ ಪೋಲುಮಾಡುತ್ತಾರೆ. ಬೇಸಾಯ ವರ್ಷದಲ್ಲಿ ಮಾತ್ರ ಕೆಲಸ ಕೊಡುತ್ತದೆ. ಮಿಕ್ಕ ಕಾಲ ಕೆಲಸವಿಲ್ಲದೆ ಪೋಲು. ವಿದ್ಯಾವಂತರ ಸಂಖ್ಯೆ ನೂರಕ್ಕೆ ಆರು, ಆ ಕಾಲಕ್ಕೆ. ಆದ್ದರಿಂದ ಮಿಕ್ಕ ತೊಂಭತ್ತುನಾಲ್ಕು ಜನರ ಬುದ್ಧಿಶಕ್ತಿ ಅಜ್ಞಾನದಿಂದ ಪೋಲು. ನಾಗರಿಕರ, ಬುದ್ಧಿವಂತರ ಅನುಭವದಿಂದ ಲಾಭ ಪಡೆಯದ ಮೌಢ್ಯದಿಂದ ಪೋಲು. ನಾಗರಿಕತೆಯ ನಿತ್ಯ ವ್ಯಾವಹಾರಿಕ ಜೀವನ ಕ್ರಮ ಸರಿಯಾಗಿ ಅರಿಯದೆ, ವ್ಯಾಪಾರ ಧರ್ಮ ಅನುಸರಿಸದೆ, ಅರಬರೆ ತಿಳಿವಳಿಕೆ ಯಿಂದ ಪೋಲು. ಹರಟೆ, ಜಾತಿ ಜಗಳ ಇತರ ಅನವಶ್ಯಕವಾದ ವಿವಾದಗಳಿಂದ ಬುದ್ಧಿ ಶಕ್ತಿಯ ಪೋಲು. ಅಭಿವೃದ್ಧಿ ಯೋಜನೆಗಳಿಗೆ ಹಣ ಒದಗಿಸದೆ, ಕುಡಿಕೆಗಳಲ್ಲಿ ಕೂಡಿಡುವುದರಿಂದ ಹಣದ ಒಂದು ಬಗೆಯ ಪೋಲು. ಹಣ ಬ್ಯಾಂಕಿನಲ್ಲಿಡುವುದರಿಂದ ಅದು ಸದ್ವಿನಿಯೋಗವಾಗುತ್ತದೆ, ಅಗತ್ಯವಿದ್ದವರಿಗೆ ಸಕಾಲಕ್ಕೆ ಒದಗಿಬರುತ್ತದೆ

ನಮ್ಮ ಜನ ಸಾಮಾನ್ಯವಾಗಿ ನೀತಿವಂತರಾಗಿಯೇ ಬಾಳುತ್ತಾರೆ. ದೇಹದಾರ್ಢ್ಯ, ಸಾರ್ವಜನಿಕ ಸ್ವಾಸ್ಥ್ಯ, ಆರೋಗ್ಯ ನಿಯಮಪಾಲನೆ ಇವುಗಳತ್ತ ಸಾಕಷ್ಟು ಗಮನ ಹರಿಸುವುದಿಲ್ಲ. ಇದರಿಂದ ಎಳೆವಯಸ್ಸಿನಲ್ಲೇ ವೃದ್ಧರಾಗುತ್ತಾರೆ. ಆಯುಷ್ಯವಂತ ರಾಗಿ ಬಾಳುವುದಿಲ್ಲ. ಕಾಯಿಲೆಗೆ ಕಾರಣ ಕಂಡುಹಿಡಿಯಲು ಪ್ರಯತ್ನಿಸದೆ, ದೃಷ್ಟಿ ಯಾಗಿರಬೇಕು, ಮಾಟ, ಮಂತ್ರ ಮಾಡಿರಬೇಕು ಎಂದು ಭ್ರಮಿಸುತ್ತೇವೆ. ಹರಕೆ ಹಾಕಿಕೊಳ್ಳುತ್ತೇವೆ, ಮಂತ್ರತಂತ್ರದ ಮರೆಹೊಗುತ್ತೇವೆ. ವೈದ್ಯಸಹಾಯ ಪಡೆ ಯುವುದಿಲ್ಲ.

ಸಂಪದಭಿವೃದ್ಧಿ ಸಮ್ಮೇಳನ, ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿ ಯೇಷನ್, ಅಸ್ಪೃಶ್ಯರಿಗೆ ಪ್ರತ್ಯೇಕ ವಿದ್ಯಾರ್ಥಿನಿಲಯ ಇವುಗಳನ್ನು ಸ್ಥಾಪಿಸಿದರು. ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರು ಮಾಡಿದರು. ಅವಯಸ್ಕರ ವಿವಾಹ ನಿಷೇಧಿಸಿದರು. ವಿಧವಾ ವಿವಾಹ ಪ್ರೋತ್ಸಾಹಿಸಿದರು.

ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಗಮನವಿತ್ತರು. ಪ್ರಾಥಮಿಕ ವಿದ್ಯಾಭ್ಯಾಸ ಕೆಲವೆಡೆ ಕಡ್ಡಾಯ ಮಾಡಿದರು. ಮುಸಲ್ಮಾನರ ಶಿಕ್ಷಣಕ್ಕೆ ಶ್ರಮಿಸಿದರು. ಸಮಾಜದಲ್ಲಿ ಸರ್ವರಿಗೂ ಸಮಾನ ಅವಕಾಶವಿರಬೇಕೆಂದು ನಿರಂತರ ಪ್ರಚಾರ ನಡೆಸಿದರು. ಮೂಢ ನಂಬಿಕೆ, ಸಮಾಜದ ದೋಷ ಇವನ್ನೂ ಖಂಡಿಸುತ್ತಿದ್ದರು.

ಹೆಣ್ಣುಮಕ್ಕಳು ಶಾಲೆಗೆ ಹೋಗುವುದು, ಪರಪುರುಷರೊಡನೆ ಮಾತನಾಡುವುದೂ ಅಪರಾಧವೆನಿಸಿಕೊಂಡಿದ್ದ ಕಾಲವದು. ಇಂಥ ಕಾಲದಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕ ಶಾಲೆ, ಪ್ರತ್ಯೇಕ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ಮಹಿಳೆಯರಿಗೆ ಶಿಕ್ಷಣ ಉಚಿತ. ಸೂರ್ಯಕಿರಣವನ್ನೇ ಕಾಣದ ಘೋಷಾ ಅಥವಾ ಪರ್ದ ಪದ್ಧತಿ ಆಚರಿಸುತ್ತಿದ್ದ ಮಹಿಳೆಯರನ್ನು ಶಾಲೆಗೆ ಒಯ್ದು ಮತ್ತೆ ಮನೆಗೆ ತಂದುಬಿಡಲು ಗಾಡಿ ವ್ಯವಸ್ಥೆ ಮಾಡಿದರು. ಮಹಿಳೆಯರೇ ಶಿಕ್ಷಕರಾದರು ಮಹಿಳೆಯರಿಗೆ. ಉರ್ದು ಕಲಿಯುವವರಿಗೆ, ಮಹಮ್ಮದೀಯರಿಗೇ ಪ್ರತ್ಯೇಕ ಶಾಲೆ. ಆದರೆ ಪ್ರತ್ಯೇಕತಾ ಭಾವನೆ ಬಲುದೂರ ಬೆಳೆಯಲು ಅವಕಾಶ ಕೊಡಲಿಲ್ಲ. ಮುಸ್ಲಿಂ ಶಾಲೆಗಳಿಗೆ ಪ್ರತ್ಯೇಕ ಮುಸ್ಲಿಂ ಇನ್ಸ್ಪೆಕ್ಟರುಗಳಿರಬೇಕೆಂಬ ಬೇಡಿಕೆ ತಿರಸ್ಕರಿಸಿದರು. ಆ ಕಾಲದಲ್ಲಿ 'ಅಮರ' ಕಂಠಪಾಠ ಮಾಡುವುದು ಕಡ್ಡಾಯವಾಗಿತ್ತು. ಸಂಸ್ಕೃತ ಪದಗಳನ್ನು ಮುಸ್ಲಿಂ ವಿದ್ಯಾರ್ಥಿಗಳು ಉಚ್ಚರಿಸಲು ಕಷ್ಟಪಡುತ್ತಿದ್ದರು. ಇದನ್ನು ಗಮನಿಸಿ ಕಡ್ಡಾಯವಾಗಿ ಎಲ್ಲರೂ 'ಅಮರ' ಕಲಿಯಬೇಕೆಂಬ ನಿಯಮ ರದ್ದುಮಾಡಿದರು. ಪ್ರತ್ಯೇಕತಾ ಭಾವನೆ ತೊರೆಯಲು ತಿಳಿಸಿದರು. ಅನ್ಯಮತೀಯರೊಂದಿಗೆ ಸಹೋದರ ಭಾವನೆಯಿಂದ ಬಾಳುವಂತೆ ಬೋಧಿಸುತ್ತಿದ್ದರು. ದೀರ್ಘಕಾಲದಿಂದ ಇಲ್ಲಿಯೇ ನೆಲಸಿ, ಆಸ್ತಿಪಾಸ್ತಿ ಗಳಿಸಿ, ಬಾಳಿ ಬದುಕುತ್ತಾ ಭಾರತೀಯರೇ ಆಗಿದ್ದರೂ, ದೇಶಭಾಷೆ ಕಲಿಯದೆ, ಅನ್ಯಮತೀಯರೊಡನೆ ಮಿಳಿತರಾಗದೆ, ಪ್ರತ್ಯೇಕತಾ ಭಾವನೆಯಿಂದ ಬಾಳುವುದನ್ನು ಖಂಡಿಸುತ್ತಿದ್ದರು. ಪ್ರತ್ಯೇಕತಾ ಭಾವನೆಯು ಪ್ರೋತ್ಸಾಹ ಅಖಂಡ ಭಾರತದ ವಿಭಜನೆಗೆ ದಾರಿ ಮಾಡಿಕೊಟ್ಟು, ಪಾಕಿಸ್ತಾನದ ಜನನಕ್ಕೆ ಕಾರಣವಾಯಿತು.

ಯಾವ ಸಮಾಜದಲ್ಲೂ ಕಾಣದ ಸ್ಪೃಶ್ಯ–ಅಸ್ಪೃಶ್ಯ ಎಂಬ ಜಾತಿಭೇದ ಹಿಂದೂಗಳಲ್ಲಿ ಆಚರಣೆಯಲ್ಲಿದೆ. ಈ ದುಷ್ಟ ಪದ್ಧತಿ ತೊಡೆದುಹಾಕಲು ಅನೇಕ ವಿಭೂತಿ ಪುರುಷರು ಪ್ರಯತ್ನಿಸಿದ್ದಾರೆ. ಅವರಲ್ಲಿ ವಿಶ್ವೇಶ್ವರಯ್ಯನವರೂ ಒಬ್ಬರು. ಅಸ್ಪೃಶ್ಯತೆ ಮತ್ತು ಸಮಾಜದ ಇತರ ದೋಷಗಳ ನಿವಾರಣೆಗಾಗಿ 1937ರಲ್ಲಿ ಸಿವಿಕ್ ಅಂಡ್ ಸೋಷಿಯಲ್ ಪ್ರೊಗ್ರೆಸಿವ್ ಅಸೋಸಿಯೇಶನ್ ಸ್ಥಾಪಿತವಾಯಿತು. ಸಮಾಜ ಸುಧಾರಣೆಗಾಗಿ ಸಂಘಕ್ಕೆ ಅಪರಿತ್ತ ಸಲಹೆಗಳು ಗಮನಾರ್ಹವಾಗಿವೆ. ಮುಖ್ಯವಾಗಿ ಅವು ಹೀಗಿವೆ—ಅಂತ್ಯಜರ ಉದ್ಧಾರ. ಉಪನಯನ, ಮದುವೆ, ಮರಣ ಮತ್ತು ಇತರ ಶುಭಾಶುಭ ಕಾರ್ಯಗಳಲ್ಲಿ ದುಂದುವೆಚ್ಚ ಮಾಡದಿರುವುದು. ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು ಹದಿನಾಲ್ಕಕ್ಕೆ ಹೆಚ್ಚಿಸುವುದು. ಸ್ವಯಂ ಆರ್ಜನೆಯಿಂದ ಸಂಸಾರ ನಿರ್ವಹಿಸುವ ಸಾಮರ್ಥ್ಯ ಪಡೆಯುವ ವರೆಗೆ ಯುವಕರು ವಿವಾಹ ಮಾಡಿ

ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ಕನ್ನಂಬಾಡಿ ಕಟ್ಟೆ ಕಟ್ಟುವುದರಲ್ಲಿ ಎಷ್ಟು ಶ್ರದ್ಧೆಯೋ ಗ್ರಾಮ ನೈರ್ಮಾಲ್ಯದ ವಿಷಯದಲ್ಲೂ ಅಷ್ಟೇ ಶ್ರದ್ಧೆ, ಆಸಕ್ತಿ. ಅದು ಹಿರಿದು, ಇದು ಕಿರಿದು ಭೇದಭಾವ ಕಾಣರು.

ದೇವಾಲಯಗಳ ಶುಭ್ರತೆಯ ವಿಷಯವಾಗಿ ಅವರಿತ್ತಿರುವ ಸಲಹೆ ಎಷ್ಟು ಅಮೂಲ್ಯವಾದುದು. "ದೇಗುಲ ಪ್ರವೇಶಿಸುವ ಮೊದಲು ಪ್ರತಿಯೊಬ್ಬರೂ ಕೈಕಾಲು ನೀರಿನಿಂದ ತೊಳೆದುಕೊಳ್ಳಬೇಕು. ಶುಭ್ರ ವಸ್ತ್ರದಿಂದ ಕಾಲೊರಸಿಕೊಂಡು ಒಳಕ್ಕೆ ಪ್ರವೇಶಿಸಬೇಕು. ದೇವಾಲಯದ ಒಳಭಾಗ ಕನ್ನಡಿಯಂತೆ ಶುಭ್ರವಾಗಿರಬೇಕು. ದೇವನಿರುವ ಮಂದಿರ ಅಲ್ಲವೇ ಅದು? ತೆಂಗಿನ ನಾರು, ಕಾಯಿಚೂರು, ಬಾಳೇಸಿಪ್ಪೆ, ಕಸಕಡ್ಡಿ ಕಾಗದ ಎಲೆ ಎಲ್ಲೆಂದರಲ್ಲಿ ಎಸೆಯಲಾಗದು. ಅವೆಲ್ಲವನ್ನೂ ಒಂದೆಡೆ ರಾಶಿ ಹಾಕಿ ಹೊರಕ್ಕೆ ಸಾಗಿಸಬೇಕು. ಈ ಸುಧಾರಣೆಗಳನ್ನು ರೂಢಿಗೆ ತರಲು ಸ್ವಲ್ಪ ಕಾಲ ಅಲ್ಪ ತೊಂದರೆ ಆದೀತು. ಆದರೆ ಕಾಲಕ್ರಮೇಣ ಸರಿಹೋಗುವುದರಲ್ಲಿ ಸಂದೇಹವಿಲ್ಲ."

ಜಪಾನ್ ಮತ್ತು ಇತರ ದೇಶಗಳಲ್ಲಿ ಭಿಕ್ಷಾಟನೆ ಹೋಗಲಾಡಿಸಿರುವಂತೆ ಇಲ್ಲಿಯೂ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಬಯಸುತ್ತಿದ್ದರು. ಭಿಕ್ಷಾವೃತ್ತಿ ನಿವಾರಿಸಲು ಶಾಸನ ಮಾಡಬೇಕೆಂದು ಅವರ ಸಲಹೆ. ಧರ್ಮ, ನೀತಿ, ಕಟ್ಟಲೆ, ಸಂಪ್ರದಾಯ ಇವು ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಈ ದೇಶದಲ್ಲಿ ಜನರ ಸಹಕಾರವಿಲ್ಲದೆ, ಶಾಸನಬಲದಿಂದ ಮಾತ್ರ ಭಿಕ್ಷಾಟನೆ ಹೋಗಲಾಡಿಸುವುದು ಕಠಿಣವೆಂದು ಅವರು ಅರಿತಿದ್ದರು.

'ಹಸಿದವರಿಗೆ ಅಶನವನೀಯಲುಬೇಕು.' ಅನ್ನದಾನಕ್ಕೆ ಹಿಂದೂಗಳಲ್ಲಿ ಬಹಳ ಪ್ರಮುಖ ಸ್ಥಾನವಿದೆ. ತನಗೆ ಉಣಲು ಇಲ್ಲದಿದ್ದರೂ ಮನೆಯ ಬಾಗಿಲಿಗೆ ಬಂದ ಅತಿಥಿಯನ್ನು ಸತ್ಕರಿಸಬೇಕೆಂದು ಶಾಸ್ತ್ರಗಳು ಸಾರಿ ಹೇಳುತ್ತವೆ. ಯಾತ್ರಾಸ್ಥಳಗಳಲ್ಲಿ ದಾನಿಗಳು ಅನ್ನಸತ್ರ ಕಟ್ಟಿಸಿ ಅನ್ನದಾನದ ವ್ಯವಸ್ಥೆ ಮಾಡುತ್ತಾರೆ. ಒಂದು ಕಾಲಕ್ಕೆ ಭರತಭೂಮಿಯಲ್ಲಿ ಹೊಟೇಲು, ಖಾನಾವಳಿಗಳೇ ಇರಲಿಲ್ಲ. ಹಣ ಕೊಟ್ಟು ಅನ್ನ ಕೊಳ್ಳುವ ವ್ಯವಸ್ಥೆ ಇರಲಿಲ್ಲ. ಅನ್ನ ವಿಕ್ರಯ ಪಾಪ ಎಂದು ಭಾವಿಸಲಾಗಿತ್ತು. ಕಾರ್ಯನಿಮಿತ್ತ ಪ್ರವಾಸ ಕೈಗೊಳ್ಳುತ್ತಿದ್ದ ಅಧಿಕಾರಿಗಳು ತಮ್ಮೊಡನೆ ಅಡುಗೆಗೆ ಬೇಕಾದ ಪಾತ್ರೆ, ಪದಾರ್ಥ ಮತ್ತು ಅಡುಗೆಯವನನ್ನು ಕರೆದುಕೊಂಡು ಹೋಗುತ್ತಿದ್ದರೆ, ಪಟೇಲ್, ಶ್ಯಾನುಭೋಗರು ಊಟದ ವ್ಯವಸ್ಥೆ ಮಾಡುತ್ತಿದ್ದರು. ಪ್ರವಾಸ ಕೈಗೊಳ್ಳುವ ಅಧಿಕಾರಿಗಳ ವೆಚ್ಚ ಸರ್ಕಾರ ಕೊಡುತ್ತದೆ. ಬೆಂಗಳೂರು, ಮೈಸೂರು ನಗರಗಳಿಗೆ ಅಧಿಕಾರಿಗಳು ಬಂದಾಗ ಉಳಿಯಲು ಮತ್ತು ಊಟ ಮಾಡಲು ತಕ್ಕ ವ್ಯವಸ್ಥೆ ಇರಲಿಲ್ಲ. ಇದನ್ನು ಗಮನಿಸಿ ಬೆಂಗಳೂರಿನಲ್ಲಿ ಮಾಡರನ್ ಹೊಟೇಲ್ ಸ್ಥಾಪಿತವಾಗಲು ಧನಸಹಾಯ ಸರ್ಕಾರ ನೀಡಿತು. ಮೈಸೂರಿನಲ್ಲಿ ಉತ್ತಮ ಕಟ್ಟಡ ಕಟ್ಟಿಸಿ ಮಾಡರನ್

ಇಂಡಿಯನ್ ಹೊಟೇಲಿಗೆ ಸುಲಭ ದರದಲ್ಲಿ ವಾರ್ಷಿಕ ಆಧಾರದ ಮೇಲೆ ಬಾಡಿಗೆಗೆ ಕೊಡಲಾಯಿತು. ದಸರ ಮತ್ತು ಮಹಾರಾಜರ ವರ್ಧಂತಿಯ ಕಾಲಕ್ಕೆ ನಡೆಯುತ್ತಿದ್ದ ಪ್ರಜಾಪ್ರತಿನಿಧಿ ಸಭೆಯ ಎರಡು ಅಧಿವೇಶನಗಳಿಗೆ ಬರುತ್ತಿದ್ದ ಸದಸ್ಯರ ಊಟ ವಸತಿ ಉಪಚಾರಗಳಿಗೆ ಈ ಹೊಟೇಲು ಮೀಸಲು. ಮಿಕ್ಕ ಕಾಲದಲ್ಲಿ ಇತರರಿಗೂ ಅವಕಾಶ ಉಂಟು. ಹೊಟೇಲು ಮೆಟ್ರೊಪೋಲ್ ಮಾಂಸಾಹಾರಿಗಳಿಗೆ ಮೀಸಲು. ಸರ್ಕಾರದ ವಿಶೇಷ ಅಧಿಕಾರಿಯ ಮೇಲ್ವಿಚಾರಣೆಯಲ್ಲಿ ಊಟ ಮತ್ತು ಇತರ ಎಲ್ಲ ವ್ಯವಸ್ಥೆ ನಡೆಯುತ್ತಿತ್ತು. ಪತ್ರಿಕಾ ಪ್ರತಿನಿಧಿಗಳಿಗೂ ಸೂಕ್ತ ವ್ಯವಸ್ಥೆ ಒದಗಿಸಲಾಗುತ್ತಿತ್ತು. ಮಹಾರಾಜರು ಈ ಸಂದರ್ಭಗಳಲ್ಲಿ ನೀಡುತ್ತಿದ್ದ ಸತ್ಕಾರಕೂಟದಲ್ಲಿ ಒಂದೊಂದು ಜಾತಿಯವರಿಗೂ ಪ್ರತ್ಯೇಕ ಊಟೋಪಚಾರದ ವ್ಯವಸ್ಥೆ. ಕ್ರಮೇಣ ಈ ವ್ಯವಸ್ಥೆ ನಿಲ್ಲಿಸಿ ಸತ್ಕಾರಕೂಟಗಳಲ್ಲಿ ಜಾತಿಮತ ಭೇದ ಬದಿಗೊತ್ತಿ ಎಲ್ಲರೂ ಏಕಕಾಲದಲ್ಲಿ ಏಕೀಭಾವನೆಯಿಂದ ಭಾಗವಹಿಸುವಂತೆ ಮಾಡಿದರು.

ಪ್ರಜಾಸಂಖ್ಯೆ ಅತಿಯಾಗಿ ಬೆಳೆದಿದೆ. ಇನ್ನೂ ಹೆಚ್ಚಾಗಿ ವೃದ್ಧಿಸುವುದು ಅಪಾಯ ಕಾರಿ. ಇದನ್ನರಿತು ಭಾರತ ಮತ್ತು ಜನಬಾಹುಳ್ಯ ಅಧಿಕವಿರುವ ಇತರ ದೇಶಗಳಲ್ಲಿ ಮಿತ ಸಂತಾನಕ್ಕೆ ವಿಶೇಷ ಗಮನ ಹರಿಸಲಾಗುತ್ತಿದೆ. ಈ ವಿಷಯದಲ್ಲಿ ನಮ್ಮ ದೇಶ ಗಮನ ಕೊಡದಿದ್ದ ಕಾಲದಲ್ಲಿ ವಿಶ್ವೇಶ್ವರಯ್ಯನವರು ಮಿತಸಂತಾನ ಪ್ರಚಾರ ಸಂಸ್ಥೆ ಸ್ಥಾಪಿಸುವ ಸಲಹೆ ನೀಡಿದ್ದರು. ಮನೆ ತುಂಬ ಮಕ್ಕಳಾಗಲಿ ಎಂದು ಆಶೀರ್ವದಿಸುತ್ತಿದ್ದ, ಆಶಿಸುತ್ತಿದ್ದ ಕಾಲವದು. ಮಕ್ಕಳು ಎರಡಿರಲಿ ಹೆಚ್ಚು ಬೇಡ ವೆಂದು ಹಿತ ನುಡಿಯುತ್ತಿದ್ದರು. ಮಿತ ಸಂತಾನದಿಂದ ಸುಖ ಸಂಸಾರ. ವಿಶ್ವೇಶ್ವ ರಯ್ಯನವರಿಗೆ ಸಂತಾನ ಪ್ರಾಪ್ತಿಯಿಲ್ಲ. ಆದಕಾರಣ ಈ ವೈರಾಗ್ಯ ಬೋಧನೆ ಎಂದು ಹಾಸ್ಯ ಮಾಡುವವರ ಕೊರತೆ ಇರಲಿಲ್ಲ. ಚಿಕ್ಕ ಸಂಸಾರ ಚೊಕ್ಕ ಸಂಸಾರ. ಚಿಕ್ಕ ಸಂಸಾರದಲ್ಲಿ ಮಕ್ಕಳ ಪಾಲನೆ, ಪೋಷಣೆ, ಶಿಕ್ಷಣ ಇವಕ್ಕೆ ಹೆಚ್ಚು ಗಮನ ಕೊಡಬಹುದು. ದರಿದ್ರರಿಗೆ ಮಕ್ಕಳು ಅಧಿಕ. ಮಕ್ಕಳನ್ನು ಯೋಗ್ಯ ತೃಪ್ತಿಕರ ರೀತಿಯಲ್ಲಿ ಪಾಲಿಸಿ ಬೆಳೆಸುವ ಸಾಮರ್ಥ್ಯ ಸಾಲದು. ಆದರೂ ಮಿತಸಂತಾ ನದ ಅವಶ್ಯಕತೆಗೆ ಗಮನ ಕೊಡರು. ಶಾಸ್ತ್ರೀಯ, ವೈಜ್ಞಾನಿಕ ಮಿತಸಂತಾನ ವಿಧಾನ ಇವರಲ್ಲಿ ಪ್ರಚಾರವಾಗಬೇಕು ಎನ್ನುತ್ತಿದ್ದರು. "ನನ್ನ ಆಯುಷ್ಯದ ಪರಿಮಿತಿಯಲ್ಲೇ ಭಾರತದ ಜನಸಂಖ್ಯೆ ದ್ವಿಗುಣಿತವಾಗಿದೆ" ಎಂದು ಎಚ್ಚರಿಸು ತ್ತಿದ್ದರು.

ಸಾರ್ವಜನಿಕರ ಸಹಾಯ, ಸಹಾನುಭೂತಿ, ಸಹಕಾರವಿಲ್ಲದೆ ಸಮಾಜ ಸುಧಾರಣೆ ಸುಗಮವಾಗಿ ಸಾಗದು. ಸಹಸ್ರಾರು ವರ್ಷಗಳಿಂದ ಸಾಗಿಬಂದಿರುವ ಸಂಪ್ರದಾಯ, ಅನೂಚಾನ ಪದ್ಧತಿ ತೊರೆಯುವುದು ಸುಲಭವಲ್ಲ. ನಡೆದುಬಂದ ದಾರಿಯಲ್ಲಿ ನಡೆಯುವುದು ಲೇಸು. ಬದಲಾವಣೆ ದುಸ್ಸಾಧ್ಯ. ಇದಕ್ಕೆ ಬೇಕು ಧೈರ್ಯ, ಸ್ಥೈರ್ಯ. ಸಾಮಾಜಿಕ ಸುಧಾರಣೆಯ ಪರಿಣಾಮ ಅಳೆಯುವುದು ಸುಲಭವಲ್ಲ. ಸುಧಾರಕ

ಜಗತ್ತಿನ ನಿಂದೆಗೆ, ವಿರೋಧಕ್ಕೆ ಎದೆಗೊಡಬೇಕಾಗುತ್ತದೆ. ಈ ಬಗೆಯ ವಾತಾವರಣದಲ್ಲಿ ಸಾಮಾಜಿಕ ಸುಧಾರಣೆಗೆ ಪ್ರಯತ್ನಿಸಿ, ಬಹುಮಟ್ಟಿನ ಯಶಸ್ಸು ಸಾಧಿಸಿದ ವಿರಳರಲ್ಲಿ ವಿಶ್ವೇಶ್ವರಯ್ಯನವರೂ ಒಬ್ಬರು. ಅವರ ಸಾಧನೆ ಅಗಣಿತ.

# 15. ಆಡಳಿತ ಸುಧಾರಣೆ

ಮೈಸೂರು ಐವತ್ತು ವರ್ಷಗಳ ಕಾಲ 1881ರ ವರೆಗೆ ಬ್ರಿಟಿಷರ ಅಧೀನದ ಆಳ್ವಿಕೆಯಲ್ಲಿತ್ತು. ತದನಂತರ ದತ್ತಿ ಅಥವಾ ದಾನ ಶಾಸನ ರೂಪದ ಕರಾರು ಪತ್ರದ ಮೂಲಕ ಆಡಳಿತವನ್ನು ಪುನಃ ಮೈಸೂರು ಅರಸರಿಗೆ ಒಪ್ಪಿಸಿಕೊಟ್ಟರು. ಕರಾರಿನ ಪತ್ರ ಒಮ್ಮುಖವಾದುದು. ಮೈಸೂರಿಗಿಂತ ಸಣ್ಣದಾದ ರಾಜ್ಯಗಳು, ಬ್ರಿಟಿಷ್ ಪ್ರಭುತ್ವದೊಡನೆ ಪರಸ್ಪರ ಒಡಂಬಡಿಕೆಯ ಒಪ್ಪಂದ ಮಾಡಿಕೊಂಡಿದ್ದುವು. ಮೈಸೂರಿನ ಒಪ್ಪಂದ ಮೈಸೂರಿಗೆ, ಅದರ ಘನತೆಗೆ ತಕ್ಕುದಾಗಿರಲಿಲ್ಲ. ಗೌರವಯುತ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನ ನಡೆಯುತ್ತಲೇ ಇತ್ತು. ಆದರೆ ಪ್ರಯತ್ನ ಯಶಸ್ವಿಯಾಗಿರಲಿಲ್ಲ.

ರಾಜ್ಯ ಬ್ರಿಟಿಷರ ಆಳ್ವಿಕೆಯಿಂದ ಅರಸರ ಅಧೀನಕ್ಕೆ ಬಂದ ಪ್ರಾರಂಭದಲ್ಲಿಯೇ ದಿವಾನ್ ರಂಗಾಚಾರ್ಲು ಅವರು ಪ್ರಜೆಗಳ ಸಹಕಾರದಿಂದ ರಾಜ್ಯಭಾರ ನಡೆಸಿಕೊಂಡು ಬರಲು ಪ್ರಜಾಪ್ರತಿನಿಧಿ ಸಭೆ ಸ್ಥಾಪಿಸಿದರು. 1907ರಲ್ಲಿ ದಿವಾನ್ ವಿ. ಪಿ. ಮಾಧವ ರಾಯರು ನ್ಯಾಯ ವಿಧಾಯ ಸಭೆಯನ್ನು ಅಸ್ತಿತ್ವಕ್ಕೆ ತಂದರು. ಮೈಸೂರಿನ ರಾಜ್ಯಾಡಳಿತವು ಎಷ್ಟೇ ದಕ್ಷತೆಯಿಂದ ನಡೆಯುತ್ತಿದ್ದರೂ ಪರರ ಅಧೀನದಲ್ಲಿದ್ದ ಮೈಸೂರಿಗೆ ಬ್ರಿಟಿಷರ ರಾಜ್ಯವ್ಯವಸ್ಥೆಯಲ್ಲಿ ಗೌರವ ಸ್ಥಾನ, ಯೋಗ್ಯ ಮನ್ನಣೆ ದೊರೆಯುತ್ತಿರಲಿಲ್ಲ. ಇದು ಮೈಸೂರು ಅರಸರ ಹಾಗೂ ಪ್ರಜೆಗಳ ಅಸಂತೃಪ್ತಿಗೆ ಕಾರಣವಾಗಿತ್ತು. ತಮ್ಮ ಸಂಸ್ಥಾನದಲ್ಲಿ ತಾವು ಸ್ವತಂತ್ರರಾಗಿ ಗೌರವದಿಂದ ರಾಜ್ಯಾಡಳಿತ ನಡೆಸಿಕೊಂಡು ಬರಲು ಶ್ರೀಮನ್ಮಹಾರಾಜರು ಆಶಿಸುತ್ತಿದ್ದರು. ದತ್ತಿ ಅಥವಾ ದಾನರೂಪವಾದ ಹಳೆಯ ಕರಾರನ್ನು ಮಾರ್ಪಡಿಸಿ ಬ್ರಿಟಿಷ್ ಪ್ರಭುತ್ವದೊಡನೆ ಗೌರವಯುತ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನಗಳು ಮುಂದುವರಿಯುತ್ತಲೇ ಇದ್ದುವು. ಇಂಡಿಯಾ ಸರ್ಕಾರದ ಉಪಕಾರ್ಯದರ್ಶಿ ಮಾಂಟೆಗ್ಯೂ 1913ರಲ್ಲಿ ಮೈಸೂರಿಗೆ ದಯಮಾಡಿಸಿದ್ದರು. ಭಾರತದ ವಿಷಯದಲ್ಲಿ ಅವರಿಗೆ ತುಂಬ ಸಹಾನುಭೂತಿ. ವಿಶ್ವೇಶ್ವರಯ್ಯನವರು ಮಾಂಟೆಗ್ಯೂ ಅವರನ್ನು ಸಂದರ್ಶಿಸಿ ಗೌರವಯುತ ಒಪ್ಪಂದ ಮಾಡಿಕೊಳ್ಳುವ ಪ್ರಸ್ತಾಪ ಮಾಡಿದರು. ಇದೇ ವರ್ಷದ ಡಿಸೆಂಬರ್ ಮಾಹೆಯಲ್ಲಿ ವೈಸರಾಯ್ ಲಾರ್ಡ್ ಹಾರ್ಡಿಂಜ್ ದಂಪತಿಗಳು ಮೈಸೂರಿಗೆ ಆಗಮಿಸಿದರು. ಅವರೊಡನೆಯೂ ವಿಚಾರವಿನಿಮಯವಾಯಿತು. ಹಳೆಯ ಕರಾರಿನ ಸ್ಥಾನದಲ್ಲಿ ನೂತನ ಗೌರವಯುತ ಒಪ್ಪಂದ ಏರ್ಪಟ್ಟಿತು. ಅರಸರಿಗೆ ಅಧಿಕ ಅಧಿಕಾರ ಪ್ರಾಪ್ತವಾಯಿತು. ವಿಶ್ವೇಶ್ವರಯ್ಯನವರ ಪ್ರಯತ್ನದಿಂದ ಬೆಂಗಳೂರು ದಂಡಿನ ಉಳಿತಾಯ ಹಣ ಮೈಸೂರಿಗೆ ಲಭಿಸುವಂತೆಯೂ ಆಯಿತು.

ಮಹಾರಾಜರು ಇದರಿಂದ ಸಂತುಷ್ಟರಾದರು. "ಮೈಸರಾಯರ ಮನವೊಲಿಸುವಂತೆ ತಾವು ಮಾಡಿದ ಪ್ರಯತ್ನ ನಮ್ಮ ಯಶಸ್ಸಿಗೆ ಮುಖ್ಯ ಕಾರಣ. ನಮಗೂ ನಮ್ಮ ರಾಜ್ಯಕ್ಕೂ ತಾವು ಮಾಡಿರುವ ಮಹದುಪಕಾರ ನಾವು ಎಂದಿಗೂ ಮರೆಯಲಾರೆವು. ನಾಲ್ಕು ವರ್ಷಗಳಲ್ಲಿ ಮೈಸೂರಿಗೆ ಕೀರ್ತಿ ತರುವ ಈ ದೊಡ್ಡ ಉಪಕಾರ ಮಾಡಿರುವುದು ಮಾತ್ರವಲ್ಲದೆ, ಇನ್ನೂ ಹಲವಾರು ಉನ್ನತ ಕಾರ್ಯಗಳನ್ನು ಸಾಧಿಸಿರುವಿರಿ. ತಾವು ನಮ್ಮ ರಾಜ್ಯಕ್ಕೆ ಮಾಡಿರುವ ಕಾರ್ಯಗಳನ್ನು ನಾವು ಗಮನಿಸದೆ ಇಲ್ಲ. ಎಲ್ಲವೂ ನಮ್ಮ ಮನ ಸೆಳೆದಿವೆ. ನಿಮ್ಮ ಕಾರ್ಯಗಳಲ್ಲಿ ನಮ್ಮ ಸಹಕಾರ ಸಹಾನುಭೂತಿ ಇದೆಯೆಂದು ನಾವು ಹೇಳಬೇಕಾದ ಅಗತ್ಯವಿಲ್ಲವಷ್ಟೆ." ಈ ರೀತಿಯಲ್ಲಿ ತಮ್ಮ ಸಂತೃಪ್ತಿಯನ್ನು ಮಹಾರಾಜರು ವಿಶ್ವೇಶ್ವರಯ್ಯನವರಿಗೆ ನವಂಬರ್ 2, 1913ರಲ್ಲಿ ದೀರ್ಘ ಪತ್ರ ಬರೆದು ವ್ಯಕ್ತಪಡಿಸಿರುತ್ತಾರೆ.

ವಿಶ್ವೇಶ್ವರಯ್ಯನವರು ಪ್ರಜಾಪ್ರಭುತ್ವವಾದಿ. ರಾಜ್ಯಾಡಳಿತದಲ್ಲಿ ಪ್ರಜೆ ಹೆಚ್ಚು ಪಾತ್ರ ವಹಿಸಬೇಕೆಂದು ಅವರ ನಿಲುವು. ರಂಗಾಚಾರ್ಲು ಅವರು ಸ್ಥಾಪಿಸಿದ ಪ್ರಜಾಪ್ರತಿನಿಧಿ ಸಭೆ ಕೇವಲ 'ಅರಿಕೆ' ಅಥವಾ ನಿವೇದನೆಯ ಸಭೆಯಾಗಿತ್ತು. ಸರ್ಕಾರದಿಂದ ನೇಮಿತರಾದ ಪ್ರತಿನಿಧಿಗಳು ದಸರ ಕಾಲದಲ್ಲಿ ವರ್ಷಕ್ಕೊಮ್ಮೆ ಮೈಸೂರಿಗೆ ಬಂದು ಪ್ರಜೆಗಳ ಕಷ್ಟ ಸಂಕಟ ಅರುಹುತ್ತಿದ್ದರು. ಪ್ರಾರಂಭದಲ್ಲಿ ಇದು ಸರ್ಕಾರವನ್ನು ಹೊಗಳುವ, ಕೇವಲ ಹೊಗಳುಭಟ್ಟರ ಸಭೆಯಾಗಿತ್ತು. ಸಭೆಗೆ ಬಂದ ಪ್ರತಿನಿಧಿಗಳಿಗೆ ಮೃಷ್ಟಾನ್ನ ಭೋಜನ, ಶಾಲುಜೋಡಿ, ಭಂಗಾರದ ಮೊಹರು ಬಹುಮಾನವಾಗಿ ಲಭಿಸುತ್ತಿತ್ತು. ಕಾಲಕ್ರಮೇಣ ಅಲ್ಪ ಸ್ವಲ್ಪ ಬದಲಾವಣೆಯಾಗುತ್ತ ಬಂತು. ಆದರೂ ರಾಜ್ಯವ್ಯವಸ್ಥೆಯಲ್ಲಿ ಭಾಗವಹಿಸಲು ಪ್ರತಿನಿಧಿಗಳಿಗೆ ಸಾಕಷ್ಟು ಅವಕಾಶ ದೊರೆಯುತ್ತಿರಲಿಲ್ಲ. ದಿವಾನ್ ವಿಶ್ವೇಶ್ವರಯ್ಯನವರು, ಮಹಾರಾಜರ ಸಮ್ಮತಿಯಿಂದ, ಇದೆಲ್ಲ ಮಾರ್ಪಡಿಸಿ ಸಭೆಯನ್ನು ನಿಜವಾದ ಅಧಿಕಾರವಾಣಿಯುಳ್ಳ ಪ್ರಜಾಪ್ರತಿನಿಧಿ ಸಭೆಯಾಗಿ ಪರಿವರ್ತಿಸಿದರು. ತಮ್ಮ ಪ್ರತಿನಿಧಿಗಳನ್ನು ಆರಿಸುವ ಅಧಿಕಾರ ಪ್ರತಿನಿಧಿಗಳಿಗೆ ದೊರೆಯಿತು. ಚುನಾಯಿತ ಪ್ರತಿನಿಧಿಗಳು ಸರ್ಕಾರದ ಆಡಳಿತದ ವಿಷಯದಲ್ಲಿ ಪ್ರಶ್ನೆ ಕೇಳಿ ಉತ್ತರ ಪಡೆಯುವ ಮತ್ತು ಸರ್ಕಾರಕ್ಕೆ ಶಿಫಾರಸ್ ಮಾಡುವ ಅಧಿಕಾರ ಪಡೆದರು. ರಾಜ್ಯದ ಆದಾಯ ವ್ಯಯ ಪರಿಶೀಲಿಸುವ ಅಧಿಕಾರ ಸಹ ಸಭೆ ಪಡೆಯಿತು.

ಅದುವರೆಗೆ ರಾಜ್ಯದ ಆಯ–ವ್ಯಯ ಅಂದಾಜು ಪಟ್ಟಿ ಆಂಗ್ಲಭಾಷೆಯಲ್ಲಿ ಅಚ್ಚಾಗುತ್ತಿತ್ತು. ನೂರರಲ್ಲಿ ಆರು ಜನ ಸಹ ಆಂಗ್ಲಭಾಷೆ ಬಲ್ಲವರಿರಲಿಲ್ಲ. ಮೊಟ್ಟಮೊದಲು ಕನ್ನಡದಲ್ಲಿ ಮುದ್ರಿತವಾಗತೊಡಗಿತು. ಆದಾಯ–ವ್ಯಯದ ಅಂದಾಜು ಪಟ್ಟಿ ಪರಿಷ್ಕರಿಸಲು ಸಭೆಗೆ ಸಾಕಷ್ಟು ಅವಕಾಶ ದೊರೆಯಲೆಂದು ಅಧಿವೇಶನ ವರ್ಷದಲ್ಲಿ ಎರಡಾವರ್ತಿ ದಸರ ಮತ್ತು ಮಹಾರಾಜರ ವರ್ಧಂತಿ ಉತ್ಸವಕಾಲದಲ್ಲಿ ಸೇರುವಂತೆ ವ್ಯವಸ್ಥೆ ಮಾಡಲಾಯಿತು. ಮೊಟ್ಟಮೊದಲ ಬಡ್ಜೆಟ್ ಅಧಿವೇಶನ ಏಪ್ರಿಲ್ 1917 ರಲ್ಲಿ ಮೈಸೂರಿನಲ್ಲಿ ನಡೆಯಿತು. ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯವಿಧಾಯಕರ

ಸಭೆಗೆ ಹೆಚ್ಚು ಪ್ರತಿನಿಧಿಗಳನ್ನು ಆರಿಸುವ ಹಕ್ಕು ದೊರೆಯಿತು. ಮೈಸೂರಿಗೆ ಪ್ರತಿನಿಧಿಗಳು ಬಂದಾಗ ತಂಗಲು ಪ್ರತ್ಯೇಕ ವ್ಯವಸ್ಥೆ ಮಾಡಲಾಯಿತು. ಪ್ರತಿನಿಧಿಗಳು ಮೊದಲಿಗಿಂತಲೂ ನಿರ್ಭಯ, ನಿರ್ದಾಕ್ಷಿಣ್ಯಗಳಿಂದ ಸರ್ಕಾರವನ್ನು ಟೀಕಿಸತೊಡಗಿದರು. ಸಭಾಧ್ಯಕ್ಷ ವಿಶ್ವೇಶ್ವರಯ್ಯನವರು ಈ ಟೀಕೆಗಳನ್ನು ಹರ್ಷಚಿತ್ತದಿಂದ ಆಲಿಸಿ ಪ್ರಜೆಗಳ ಕ್ಷೇಮಾಭ್ಯುದಯಕ್ಕೆ ಕೈಲಾದ ಪ್ರಯತ್ನ ಮಾಡುತ್ತಿದ್ದರು. ಸರ್ಕಾರದ ಆಡಳಿತವನ್ನೂ, ದಿವಾನರನ್ನೂ ಎಷ್ಟೇ ಕಟುವಾಗಿ ಟೀಕಿಸಿದರೂ ವಿಶ್ವೇಶ್ವರಯ್ಯನವರು ಸೈರಣೆ ಮತ್ತು ನಗುಮೊಗದಿಂದ ಎಲ್ಲವನ್ನೂ ಸ್ವಾಗತಿಸುತ್ತಿದ್ದರು. ನಿರ್ಭಯ ಟೀಕೆ ಪ್ರಜಾಪ್ರಭುತ್ವದ ಜೀವಾಳ ಎಂದವರು ಅರಿತಿದ್ದರು. ಕಳಂಕರಹಿತ ಟೀಕೆಯನ್ನು ಪ್ರೋತ್ಸಾಹಿಸುತ್ತಿದ್ದರು. ಸರ್ಕಾರದಿಂದ ದೇಶಕ್ಕೆ ಆಗುತ್ತಿದ್ದ ಅನುಕೂಲ ತಿಳಿಯಪಡಿಸುವುದಕ್ಕಾಗಿ ಮತ್ತು ಜನರ ಕಷ್ಟಸುಖ ಸರ್ಕಾರದ ಹಾಗೂ ಸಾರ್ವಜನಿಕರ ಗಮನಕ್ಕೆ ತರಲು ವೃತ್ತಪತ್ರಿಕೆಗಳ ಸ್ಥಾಪನೆಗೆ ಪ್ರೋತ್ಸಾಹವಿತ್ತರು. ಜಿಲ್ಲೆಗೊಂದು ಪತ್ರಿಕೆ ಆಗಬೇಕೆಂದು ಅವರ ಅಭಿಲಾಷೆ.

ಪ್ರಜಾಪ್ರತಿನಿಧಿ ಸಭೆಯ ಅಧಿಕಾರ ಹೆಚ್ಚಿಸಿದಂತೆಯೇ ನ್ಯಾಯ ವಿಧಾಯ ಸಭೆಯ ಅಧಿಕಾರವೂ ವಿಸ್ತರಿಸಲ್ಪಟ್ಟಿತು. ಮತಾಧಿಕಾರದ ಅಧಿಕಾರ ಪಡೆಯಲು ಅಧಿಕ ಅವಕಾಶ ಮಾಡಿಕೊಡಲಾಯಿತು.

ಕೃಷ್ಣರಾಜಸಾಗರ, ಭದ್ರಾವತಿ ಕಬ್ಬಿಣ ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಸಾಬೂನು ಕಾರ್ಖಾನೆ, ವಿಶ್ವವಿದ್ಯಾಲಯ ಮೊದಲಾದ ಬೃಹತ್ ಯೋಜನೆಗಳನ್ನು ರೂಢಿಸಲು ಪ್ರಯತ್ನಿಸುತ್ತಿದ್ದರು. ಇವುಗಳಿಗೆ ಅಗತ್ಯವಾದ ಅಂದಾಜುಪಟ್ಟಿ ಸಿದ್ಧಪಡಿಸಿ, ಪ್ರಜಾಪ್ರತಿನಿಧಿ ಸಭೆಯ ಒಪ್ಪಿಗೆಗೆ ಇಡುತ್ತಿದ್ದರು. ಇದು ದುಂದುಗಾರಿಕೆ. ಹಣ ಹೇಗೆ ಒದಗಿಸುವುದು, ಎಲ್ಲಿಂದ ತರುವುದು ಎಂಬ ಕಳವಳ ಪ್ರತಿನಿಧಿಗಳಿಗೆ. ಪ್ರಜಾ ಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳಲ್ಲಿ ಇವರು ಮಾಡುತ್ತಿದ್ದ ಮತ್ತು ಮಂಜೂರಾತಿಗೆ ಇಡುತ್ತಿದ್ದ ವೆಚ್ಚ ಕಟು ಟೀಕೆಗೆ ಒಳಗಾಗುತ್ತಿತ್ತು. "ಆದಾಯ—ವ್ಯಯ ದೇಶದ ಆರ್ಥಿಕ ಪ್ರಗತಿಯ ಸೂಚಕ. ವ್ಯಯ ಹೆಚ್ಚಿದಂತೆ ಆದಾಯವೂ ಹೆಚ್ಚುತ್ತದೆ. ಹೆಚ್ಚಿನ ವ್ಯಯ ಎಂದರೆ ಹೆಚ್ಚಿನ ಚಟುವಟಿಕೆ, ಹೆಚ್ಚಿನ ಉತ್ಪಾದನೆ, ಹೆಚ್ಚು ಗಳಿಕೆ. ದೇಶದ ಆರ್ಥಿಕೋನ್ನತಿಗಾಗಿ ಮಾಡುವ ವೆಚ್ಚ ದುಂದುವೆಚ್ಚವಲ್ಲ. ಇಂದಿಲ್ಲ ನಾಳೆ ಪ್ರಜೆ ಅದರಿಂದ ಪ್ರಯೋಜನ ಪಡೆಯುವುದು ಖಂಡಿತ. ವೆಚ್ಚವನ್ನು ಎಚ್ಚರಿಕೆಯಿಂದ ಪರಾಂಬರಿಸುವ ಸರ್ಕಾರ, ಅದರ ಪ್ರಯೋಜನ ಪಡೆಯುವ ಬುದ್ಧಿವಂತ ಜನ ಇರುವುದರಿಂದ ಹೆಚ್ಚು ವೆಚ್ಚ ಮಾಡಲು ಸರ್ಕಾರ ಹಿಂಜರಿಯುತ್ತಿಲ್ಲ." ಈ ರೀತಿಯ ಹೊಸ ಸಿದ್ಧಾಂತ ದಿಟ್ಟತನದಿಂದ ವಿಶ್ವೇಶ್ವರಯ್ಯನವರು ಮಂಡಿಸಿದರು. ದೇಶದ ಕಲ್ಯಾಣಕ್ಕಾಗಿಯೇ ಪ್ರತಿಯೊಂದು ಕಾಸೂ ವೆಚ್ಚವಾಗುತ್ತಿದೆ ಎಂಬ ಧೈರ್ಯವಿದ್ದುದರಿಂದ ಅವರಿಗೆ ಈ ದಿಟ್ಟತನ. ಈ ದಿಟ್ಟತನ ವರಮಾನ ತೆರಿಗೆಯನ್ನು ಜಾರಿಗೆ ತರಲು ಅವರಿಗೆ ಧೈರ್ಯ ಕೊಟ್ಟಿತು. ತಮ್ಮ ಎಂಟು ವರ್ಷಗಳ ದಿವಾನ್‌ಗಿರಿಯ ಅವಧಿಯಲ್ಲಿ

ಆದಾಯಕ್ಕಿಂತ ವ್ಯಯ ಯಾವ ವರ್ಷದಲ್ಲೂ ಹೆಚ್ಚು ಆಗಿಲ್ಲ. ಆದರೆ ಜನರಲ್ಲಿ ಮಾತ್ರ ಬೊಕ್ಕಸವನ್ನು ವಿಶ್ವೇಶ್ವರಯ್ಯನವರು ಬರಿದುಮಾಡುತ್ತಿದ್ದಾರೆಂಬ ಬೊಬ್ಬೆ ತಪ್ಪಲಿಲ್ಲ. ದಿವಾನ್ ಪದವಿಯಿಂದ ನಿವೃತ್ತರಾದ ಹತ್ತು ವರ್ಷಗಳ ತರುವಾಯ ಈ ತಪ್ಪು ಕಲ್ಪನೆ ಹೋಗಲಾಡಿಸಲು, ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವ, ಅಂಕಿ–ಸಂಖ್ಯೆಗಳಿಂದ ನಿಬಿಡವಾದ ಒಂದು ವಿಶೇಷ ಹೇಳಿಕೆ ಹೊರಡಿಸಿದರು.

ವಿಶ್ವೇಶ್ವರಯ್ಯನವರು ದಿವಾನ್ ಸ್ಥಾನ ಸ್ವೀಕರಿಸಿದ ಸ್ವಲ್ಪ ಕಾಲದಲ್ಲಿಯೇ ಮಹಾ ಘೋರ ಸಂಗ್ರಾಮ ಪ್ರಾರಂಭವಾಗಿ ನಾಲ್ಕೂವರೆ ವರ್ಷಗಳ ವರೆಗೆ ನಡೆಯಿತು. ಅವರು ಆಶಿಸಿದ್ದ ಅನೇಕ ಯೋಜನೆ ಮತ್ತು ರಾಜಕೀಯ ಸುಧಾರಣೆಗಳನ್ನು ಅನುಷ್ಠಾನಕ್ಕೆ ತರಲು ಇದರಿಂದ ತುಂಬ ಅಡಚಣೆ ಆಯಿತು. ಆಡಳಿತವನ್ನು ಉತ್ತಮಗೊಳಿಸಲು ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು, ಇಂಡಿಯನ್ ಸಿವಿಲ್ ಸರ್ವಿಸ್ ಪದ್ಧತಿಗೆ ಅನುಗುಣ ಪುನರುಜ್ಜೀವನಗೊಳಿಸಿದರು. ಸಮರ್ಥರೂ, ನೀತಿವಂತರೂ ಆದ ತರುಣರನ್ನು ಸಿವಿಲ್ ಸರ್ವಿಸ್ ಪರೀಕ್ಷೆಯ ಮೂಲಕ ಆಯ್ದು ಉನ್ನತ ಅಧಿಕಾರ ಸ್ಥಾನಗಳಿಗೆ ನೇಮಿಸುವುದು ಅವರ ಅಭೀಷ್ಟ. ಜಾತಿ ಭೇದ ಎಣಿಸದೆ ಸಾಮರ್ಥ್ಯ ಮತ್ತು ಗುಣಾವಗುಣ ಅವಲಂಬಿಸಿ ಅಧಿಕಾರಿಗಳನ್ನು ನೇಮಿಸಲು ಅವರು ಬಯಸುತ್ತಿದ್ದರು. ಆದರೆ ತದನುಗುಣ ನಡೆದುಕೊಳ್ಳಲು ಮಾಡಿದ ಪ್ರಯತ್ನ ಮುಳುವಾಗಿ ದಿವಾನ್ ಪದವಿಯನ್ನೇ ಕಳೆದುಕೊಳ್ಳುವಂತೆ ಆಯಿತು.

ಸ್ಥಳೀಯ ಸಂಸ್ಥೆಗಳ ಅಧಿಕಾರ ವ್ಯಾಪ್ತಿ ಮತ್ತು ಅಧಿಕಾರ ಅಧಿಕಗೊಳಿಸುವ ಕ್ರಮ ಕೈಗೊಳ್ಳಲಾಯಿತು. ಸ್ವಯಂ ಆಡಳಿತಕ್ಕಾಗಿ ಸ್ಥಳೀಯ ಸಂಸ್ಥೆಗಳು ಹಣಕಾಸು ಸಂಗ್ರಹಿಸಲು ಹೆಚ್ಚು ಅವಕಾಶ ಕೊಡಲಾಯಿತು. ಸ್ಥಳೀಯ ಸಂಸ್ಥೆಗಳಲ್ಲಿ ಖಾಸಗಿ ಸದಸ್ಯರ ಪ್ರಮಾಣ ಹೆಚ್ಚಿಸಿ ಅಧಿಕ ಹೊಣೆ ಮತ್ತು ಅಧಿಕಾರ ಕೊಡಲಾಯಿತು. ಕ್ರಮೇಣ ಚುನಾಯಿತ ಸದಸ್ಯರೇ ಸ್ಥಳೀಯ ಸಂಸ್ಥೆಗಳ ಹೊಣೆಹೊತ್ತು ಸ್ವತಂತ್ರಿಸಿ ಕಾರ್ಯ ನಿರ್ವಹಿಸಿಕೊಂಡು ಬರುವ ಅನುಭವ ಗಳಿಸಲೆಂದು ಇದರ ಗುರಿ. ಅದು ವರೆಗೂ ಜಿಲ್ಲಾಧಿಕಾರಿಗಳು ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿರುತ್ತಿದ್ದರು. ಇದನ್ನು ತಪ್ಪಿಸಿ ಖಾಸಗಿ ಸದಸ್ಯರನ್ನೇ ಜಿಲ್ಲಾ ಬೋರ್ಡುಗಳ ಅಧ್ಯಕ್ಷರಾಗಿ ನೇಮಿಸಲಾಯಿತು. ಕ್ರಮೇಣ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುವ ಅಧಿಕಾರವೂ ಪ್ರಾಪ್ತವಾಯಿತು. ಪ್ರಜಾ ಪ್ರಭುತ್ವದಲ್ಲಿ ವಿಶ್ವೇಶ್ವರಯ್ಯನವರಿಗಿದ್ದ ವಿಶ್ವಾಸವನ್ನು ಇದು ವ್ಯಕ್ತಪಡಿಸುತ್ತದೆ.

ಬ್ಯಾಂಕ್ ಮತ್ತು ಬ್ಯಾಂಕ್ ವ್ಯವಹಾರ ಭಾರತ ಸ್ವಾತಂತ್ರ್ಯ ಗಳಿಸಿ, ಹಲವು ವರ್ಷಗಳಾದಮೇಲೆ ರಾಷ್ಟ್ರೀಕೃತವಾದುದು. ಆದರೆ ವಿಶ್ವೇಶ್ವರಯ್ಯನವರ ದೂರದೃಷ್ಟಿ ಈ ಕಾರ್ಯ ಐವತ್ತು ವರ್ಷಗಳ ಹಿಂದೆಯೇ ಸಾಧಿಸಿತ್ತು. ಮೈಸೂರು ಸರ್ಕಾರ ತನ್ನದೇ ಆದ ವಿಮಾ ಸಂಸ್ಥೆ ಪಡೆಯಿತು. ಮೈಸೂರು ಬ್ಯಾಂಕು ಸರ್ಕಾರದ ಖಜಾನೆಯ ಕೆಲಸವನ್ನೂ ನಿರ್ವಹಿಸತೊಡಗಿತು. ಈ ಸ್ತುತ್ಯ ಕಾರ್ಯಕ್ಕೆ ವಿಶ್ವೇಶ್ವರಯ್ಯನವರಿಗೆ

ಲಭಿಸಿದ್ದು ಬೈಗಳು. ವಿಮೆ ಸರ್ಕಾರದ ಏಕಸ್ವಾಮ್ಯವಾಗಿ, ಇತರ ಖಾಸಗಿ ವಿಮಾ ಸಂಸ್ಥೆಗಳೊಡನೆ ಪೈಪೋಟಿ ನಡೆಸುವುದು ಸೂಕ್ತವಲ್ಲ ಎಂಬ ಆಕ್ಷೇಪ. ಸಮಾಜವಾದದ ಧೋರಣೆಯ ಭಾರತ ಸರ್ಕಾರ ಬ್ಯಾಂಕ್ ಮತ್ತು ವಿಮಾ ವ್ಯವಹಾರ ರಾಷ್ಟ್ರೀಕರಣ ಮಾಡಿರುವುದು ಸ್ತುತ್ಯ, ಯೋಗ್ಯ ಎಂಬ ಹೊಗಳಿಕೆಗೆ ಪಾತ್ರವಾಗಿದೆ. ಅಂದು ತಿರಸ್ಕೃತ, ಇಂದು ಪುರಸ್ಕೃತ. ಇವಲ್ಲದೆ ಲೆಕ್ಕಪತ್ರಗಳ ತಪಾಸಣೆ ನಡೆಸಿ, ಲೋಪ ದೋಷ ಕಂಡುಹಿಡಿಯುವ ಮತ್ತು ಇಲಾಖೆಯ ದಕ್ಷತೆ ಸಾಮರ್ಥ್ಯ ಅಳೆಯುವ 'ಎಫಿಷಿಯನ್ಸಿ ಆಡಿಟ್' ಪದ್ಧತಿ ಜಾರಿಗೆ ತಂದರು.

ವಿದ್ಯಾಭ್ಯಾಸ ಎಂದರೆ ಆರ್ಜಿಸುವ, ಉದ್ಯೋಗ ಪಡೆದುಕೊಳ್ಳುವ, ಬದುಕಿ ಬಾಳುವ ಸಾಧನ ಎಂಬ ಭಾವನೆ ಬಲವಾಗಿ ಬೆಳೆದಿದೆ. ಶಿಕ್ಷಣದ ಗುರಿ ಆತ್ಮವಿಕಾಸ, ಜ್ಞಾನಾ ರ್ಜನೆ ಎಂಬ ಉತ್ತರವನ್ನೂ ಬುದ್ಧಿವಂತರಿಂದ ನಿರೀಕ್ಷಿಸಬಹುದು. ವಿಶ್ವೇಶ್ವರಯ್ಯ ನವರ ಉತ್ತರ ಹೀಗಿದೆ: "ಶಾಲೆಯಲ್ಲಿ ಶಿಕ್ಷಣ ಪಡೆದು ಶಾಲೆ ಬಿಡುವಾಗ ಪ್ರತಿಯೊಬ್ಬ ತರುಣನ ನಡೆನುಡಿಯಲ್ಲಿ ಹಿತಮಿತ ವಾಕ್‌ಶುದ್ಧಿ; ದೇಶಭಕ್ತಿಯಲ್ಲಿ ಸರಿಯಾದ ತಿಳಿವಳಿಕೆ; ರಾಜ ಅಥವಾ ರಾಷ್ಟ್ರಭಕ್ತಿ; ಹೊಸತರ ಅನ್ವೇಷಣೆಯಲ್ಲಿ ಆಸಕ್ತಿ; ಸ್ವಯಂ ಸೇವೆಯಲ್ಲಿ ಸ್ವಾಭಿಮಾನ; ವೇಳೆಯ ಮೌಲ್ಯದ ಅರಿವು; ಶಾಸನ ಮತ್ತು ನೆಮ್ಮದಿಗೆ ಗೌರವ; ಯಾವುದಾದರೂ ಉದ್ಯೋಗ ನಿರ್ವಹಣೆಯಿಂದ ಸುಗಮ ಜೀವನ ಸಾಧಿ ಸುವ ಸಾಮರ್ಥ್ಯ ಇವುಗಳನ್ನು ಗಳಿಸಿರಬೇಕು." ಸುವರ್ಣಾಕ್ಷರಗಳಿಂದ ಶಾಲೆಗಳಲ್ಲಿ ಬರೆದಿಡಬೇಕಾದ ವಾಕ್ಯಗಳು.

ದೇಶೀಯ ಸಂಸ್ಥಾನಗಳ ಅರಸರು ಐಶ್ವರ್ಯವನ್ನು ಸ್ವದೇಶ ವಿದೇಶಗಳಲ್ಲಿ ಸ್ವೇಚ್ಛೆ ಯಾಗಿ ದುಂದುವೆಚ್ಚ ಮಾಡುತ್ತಿದ್ದ ಕಾಲವದು. ಈ ದುಂದುವೆಚ್ಚ ತಡೆಗಟ್ಟುವುದು ಪ್ರಜೆಗಳಿಂದ ಸಾಧ್ಯವಿರಲಿಲ್ಲ. ಮೈಸೂರಿನ ಯುವರಾಜ ಉತ್ಸಾಹಿ ತರುಣ. ದೇಶ ವಿದೇಶಗಳ ಪ್ರವಾಸದಿಂದ ವಿಶೇಷ ಅನುಭವ ಪಡೆದಿದ್ದ ಯುವಕ. ಈ ಲೋಕಪ್ರಜ್ಞೆ ಮತ್ತು ಉತ್ಸಾಹ ಅನಪೇಕ್ಷಿತ ಮಾರ್ಗಗಳಲ್ಲಿ ಹರಿದು ವ್ಯರ್ಥವಾಗದಿರಲೆಂದು ಅವರನ್ನು ಮಂತ್ರಿಸಂಪುಟದ ವಿಶೇಷ ಸದಸ್ಯರಾಗಿ ನೇಮಿಸುವಂತೆ ಮಹಾರಾಜರ ಮನವೊಲಿಸುವುದರಲ್ಲಿ ವಿಶ್ವೇಶ್ವರಯ್ಯನವರು ಯಶಸ್ವಿಯಾದರು.

ಆರ್ಥಿಕ, ಸಾಮಾಜಿಕ, ರಾಜಕೀಯ, ಆಡಳಿತ ಇವುಗಳ ಸುಧಾರಣೆ; ಕೈಗಾರಿಕೋ ದ್ಯಮಗಳ ಸ್ಥಾಪನೆ ಮೊದಲಾದ ಕ್ರಮಗಳಿಂದ ಮೈಸೂರು ಮಾದರಿ ಸಂಸ್ಥಾನವಾಗಿ ಬ್ರಿಟಿಷ್ ಪ್ರಾಂತಗಳಿಗಿಂತ ಮುಂದುವರಿದ ರಾಜ್ಯವೆಂಬ ಕೀರ್ತಿ ಗಳಿಸಿತು ವಿಶ್ವೇಶ್ವರಯ್ಯ ನವರ ಸಾಮರ್ಥ್ಯದಿಂದ.

# 16. ರಾಜೀನಾಮೆಯ ಪ್ರಕರಣ

"ಕಳೆದ ಎರಡು ತಿಂಗಳಿಂದ ನಾನು ಅನುಭವಿಸಿರುವಷ್ಟು ಮನಶ್ಶಾಂತಿ ಮತ್ತು ಸಾಂತ್ವನ ನಾನು ಯಾವ ಕಾಲದಲ್ಲೂ ಅನುಭವಿಸಿರಲಿಲ್ಲವೆಂದು ಹೇಳಲು ನನಗೆ ಸಂಕೋಚವಿಲ್ಲ. ತಮ್ಮ ದಕ್ಷ ಆಡಳಿತ ಇದಕ್ಕೆ ಕಾರಣ. ಇದೇ ಸ್ಥಿತಿ ದೀರ್ಘಕಾಲ ಮುಂದುವರಿಯಲೆಂದು ಹಾರೈಸುತ್ತೇನೆ." ಜುಲೈ 2, 1914ರಲ್ಲಿ ಶ್ರೀಮನ್ಮಹಾರಾಜರು ದಿವಾನ್ ವಿಶ್ವೇಶ್ವರಯ್ಯನವರಿಗೆ ಈ ಅಭಿಪ್ರಾಯದ ಪತ್ರ ಬರೆದು ಸಂತೋಷ ವ್ಯಕ್ತಪಡಿಸಿದರು. ಈ ಹರ್ಷ ಅಲ್ಪ ಅವಧಿಯಲ್ಲೇ ಹಾಲಾಹಲವಾಗಿ ಪರಿಣಮಿಸಬೇಕೆ?

ಮಹಾರಾಜರ ಅಮೃತವಾಕ್ಯಗಳು ಮತ್ತಷ್ಟು ಉತ್ಸಾಹದಿಂದ ಕಾರ್ಯನಿರತರಾಗಲು ವಿಶ್ವೇಶ್ವರಯ್ಯನವರನ್ನು ಪ್ರೋತ್ಸಾಹಿಸಿತು. ಭವಿಷ್ಯ ಆಶಾದಾಯಕವಾಗಿ ತೋರುತ್ತಿದ್ದಾಗ, ಕಾರ್ಮೋಡಗಳು ಮತ್ತೊಂದು ಕಡೆಯಲ್ಲಿ ಕವಿಯುತ್ತಿದ್ದುವು. 1916–17ರ ವೇಳೆಗೆ ನೆರೆಯ ಮದರಾಸು ಪ್ರಾಂತದಲ್ಲಿ ಬ್ರಾಹ್ಮಣ ವಿರೋಧಿ ಚಳವಳಿ ಹರಡತೊಡಗಿತು. ಅಲ್ಲಿ ಸರ್ಕಾರದ ನೌಕರಿಯಲ್ಲಿ ಬ್ರಾಹ್ಮಣರ ಸಂಖ್ಯೆ ಅಧಿಕವಾಗಿತ್ತು. ಉನ್ನತ ಅಧಿಕಾರಿಗಳೆಲ್ಲ ಆಂಗ್ಲರು. ಅವರಿಗೆ ಆಂಗ್ಲ ಭಾಷೆಯ ಹೊರತು, ಅನ್ಯ ಭಾಷೆಗಳ ಪರಿಚಯ ಇರುತ್ತಿರಲಿಲ್ಲ. ಆಡಳಿತ ನಡೆಸಲು ಆಂಗ್ಲ ಭಾಷೆ ಬಲ್ಲವರ ನೆರವು ಅವರಿಗೆ ಅಗತ್ಯವಾಗಿತ್ತು. ಆಂಗ್ಲ ಭಾಷೆ ಬಲ್ಲವರಲ್ಲಿ, ಆ ಕಾಲಕ್ಕೆ, ಬ್ರಾಹ್ಮಣರ ಬಲವೇ ಅಧಿಕ. ಸರ್ಕಾರದಲ್ಲಿ ಬ್ರಾಹ್ಮಣರ ಸಂಖ್ಯೆ ಅಧಿಕವಾಗಿರಲು ಇದೇ ಮುಖ್ಯ ಕಾರಣವಾಗಿತ್ತು. ಜಾತಿ ಕಟ್ಟುಪಾಡು ಇನ್ನೂ ಸ್ವಲ್ಪ ಬಿಗಿಯಾಗಿ ಆಚರಣೆಯಲ್ಲಿದ್ದ ಕಾಲ. ವ್ಯವಸಾಯ, ವಾಣಿಜ್ಯ, ವ್ಯಾಪಾರ, ಕೈಗಾರಿಕೋದ್ಯಮಗಳೆಲ್ಲ ಬ್ರಾಹ್ಮಣೇತರರ ಅಧೀನದಲ್ಲೇ ಇತ್ತು. ಬ್ರಾಹ್ಮಣರ ಪ್ರಾಬಲ್ಯ ಸರ್ಕಾರದಲ್ಲಿ ಕುಗ್ಗಿಸಿ, ತಮಗೆ ಹೆಚ್ಚಿನ ಅವಕಾಶ ಕೊಡಬೇಕೆಂಬ ಚಳವಳಿ ಮದರಾಸಿನಲ್ಲಿ ಪ್ರಬಲವಾಗಿ ಬೆಳೆಯಿತು. ಬ್ರಾಹ್ಮಣರಿಗೆ ದೊರೆಯುತ್ತಿದ್ದ ಸೇವಾವಕಾಶ ಕಡಮೆ ಮಾಡುವುದು; ಎಂಜಿನಿಯರಿಂಗ್, ವೈದ್ಯಕೀಯ, ಔದ್ಯೋಗಿಕ ಮತ್ತು ಇತರ ಕಲಾಶಾಲೆಗಳಲ್ಲಿ ಅವರಿಗೆ ದೊರೆಯುತ್ತಿದ್ದ ಪ್ರವೇಶಾವಕಾಶ ನಿರ್ಬಂಧಿಸುವುದು; ಈ ರೀತಿಯ ನೀತಿ ಸರ್ಕಾರ ಅನುಸರಿಸಬೇಕೆಂಬುದು ಬ್ರಾಹ್ಮಣೇತರ ಪಕ್ಷದ ಧೋರಣೆಯಾಗಿತ್ತು. ಇದೇ ನೀತಿಯನ್ನು ಮೈಸೂರು ಸರ್ಕಾರ ಅನುಸರಿಸಬೇಕೆಂದು ಇಲ್ಲಿನ ಬ್ರಾಹ್ಮಣೇತರ ಪಕ್ಷದ ಪ್ರಮುಖರೂ ಪತ್ರಿಕೆಗಳೂ ಒತ್ತಾಯ ಮಾಡತೊಡಗಿದುವು. ಬಹುಸಂಖ್ಯಾತರ ಒತ್ತಾಯಕ್ಕೆ ಮಣಿದು ಈ ಬೇಡಿಕೆ ಈಡೇರಿಸಲು ಕೈಗೊಳ್ಳಬೇಕಾದ ಕ್ರಮ ಸೂಚಿಸುವಂತೆ ಮಹಾರಾಜರು ಮೈಸೂರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಸರ್ ಲೆಸ್ಲಿ ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ ವಿಶೇಷ ಸಮಿತಿ ನೇಮಿಸಿದರು.

ಇದೇ ಕಾಲಕ್ಕೆ ಕಮಿಷನರುಗಳನ್ನು ನೇಮಿಸುವ ಅವಕಾಶ ಬಂತು. ಪರೀಕ್ಷೆಯಲ್ಲಿ ಗಳಿಸಿದ ಅಂಕ, ಸಾಮರ್ಥ್ಯ, ಯೋಗ್ಯತೆ ಇವನ್ನು ಆಧರಿಸಿ ದಿವಾನರು ಆರು ಅಭ್ಯರ್ಥಿಗಳ ಹೆಸರುಗಳನ್ನು ಮಹಾರಾಜರ ಒಪ್ಪಿಗೆಗೆ ಕಳುಹಿಸಿಕೊಟ್ಟರು. ಕಾಕತಾಳ ನ್ಯಾಯದಂತೆ ಇವರೆಲ್ಲ ಬ್ರಾಹ್ಮಣರೇ ಆಗಿದ್ದರು. ಅಂದಿನ ವಾತಾವರಣದಲ್ಲಿ ಆರು ಜನರೂ ಬ್ರಾಹ್ಮಣರೇ ಆಗಿದ್ದುದು ಮಹಾರಾಜರಿಗೆ ಸೂಕ್ತವೆಂದು ತೋರಲಿಲ್ಲ. ಪುನರ್ವಿಮರ್ಶಿಸುವಂತೆ ಪಟ್ಟಿಯನ್ನು ಮಹಾರಾಜರು ದಿವಾನರಿಗೆ ಹಿಂತಿರುಗಿಸಿದರು. ಯೋಗ್ಯತೆ ಪುರಸ್ಕರಿಸಬೇಕು. ಜಾತಿ ಗಣನೆಗೆ ತೆಗೆದುಕೊಳ್ಳುವುದರಿಂದ ದಕ್ಷತೆಗೆ ಊನ ಆದೀತು. ಇದು ವಿಶ್ವೇಶ್ವರಯ್ಯನವರ ದೃಷ್ಟಿ. ಕಡೆಗೆ ಮೂವರನ್ನು ಮಹಾರಾಜರೂ, ಮೂವರನ್ನು ದಿವಾನರೂ ನೇಮಿಸುವ ರಾಜಿ ತೀರ್ಮಾನಕ್ಕೆ ಬರಲಾಯಿತು.

ರೆವೆನ್ಯೂ ಇಲಾಖೆಗೆ ಯೋಗ್ಯರಾದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಮತ್ತೊಂದು ಅವಕಾಶ ಒದಗಿ ಬಂತು. ಮೂರನೇ ಒಂದು ಭಾಗದಷ್ಟು ಸ್ಥಾನಗಳನ್ನು ಬ್ರಾಹ್ಮಣೇತರರಿಗೆ ಮೀಸಲಾಗಿಡಬೇಕೆಂದು ಮಹಾರಾಜರ ಆಶಯ. ಅರ್ಹರಾದ ಸಾಕಷ್ಟು ಬ್ರಾಹ್ಮಣೇತರರು ಇದ್ದರೆ ಅವರಿಗೆ ಪ್ರಥಮ ಅವಕಾಶ ಕೊಡಬೇಕೆಂದು ದಿವಾನರಿಗೆ ಮಹಾರಾಜರು ಅಪ್ಪಣೆ ಕೊಡಿಸಿದರು.

ಮತ್ತೊಂದು ಘಟನೆಯನ್ನೂ ನಿದರ್ಶಿಸಬಹುದು. ಮೈಸೂರು ವಿಶ್ವವಿದ್ಯಾಲಯದ ಎರಡು ಸ್ಥಾನಗಳಿಗೆ ಇಬ್ಬರನ್ನು ಸರ್ಕಾರ ನೇಮಿಸಬೇಕಾಗಿತ್ತು. ವಿಶ್ವೇಶ್ವರಯ್ಯನವರು ಒಬ್ಬ ಬ್ರಾಹ್ಮಣ ಮತ್ತೊಬ್ಬ ಬ್ರಾಹ್ಮಣೇತರರ ಹೆಸರುಗಳನ್ನು ಮಹಾರಾಜರ ಅಂಗೀಕಾರಕ್ಕೆ ಕಳುಹಿಸಿ ಕೊಟ್ಟರು. ಆದರೆ ಮಹಾರಾಜರ ಒಪ್ಪಿಗೆ ಇದು ಪಡೆಯಲಿಲ್ಲ. ಈ ವಿಷಯದಲ್ಲಿ ಮಹಾರಾಜರು ಮತ್ತು ದಿವಾನರ ನಡುವೆ ದೀರ್ಘ ಪತ್ರ ವ್ಯವಹಾರ ನಡೆಯಿತು. ಮಹಾರಾಜರು ಮ್ಯಾಥನ್ ಮತ್ತು ಬಸವಯ್ಯ ಎಂಬ ಇಬ್ಬರು ಬ್ರಾಹ್ಮಣೇತರರನ್ನು ನೇಮಿಸಿದರು. ಮಹಾರಾಜರ ಆಣತಿಗೆ ಬಾಗಿ ನಡೆಯಲೇಬೇಕಾಯಿತು ದಿವಾನರು.

ಮಹಾರಾಜರು ಮತ್ತು ದಿವಾನರ ನಡುವೆ ನಡೆದುಬಂದಿದ್ದ ವಿಶ್ವಾಸ ಈ ಕ್ರಮಗಳಿಂದ ಸಡಿಲಗೊಂಡಿತು, ಶಿಲವಾಯಿತು. ದಿವಾನರ ಉತ್ಸಾಹಕ್ಕೆ ಭಂಗ ಬಾರದೆ ಇರಲಿಲ್ಲ. ಇದು ದಿವಾನ್ ಪದವಿಯ ಅಂತ್ಯದ ಆರಂಭಕ್ಕೆ, ದಕ್ಷತೆಯ ನಾಶದ ಪ್ರಾರಂಭಕ್ಕೆ ದಾರಿ ಮಾಡಿಕೊಟ್ಟಿತು. ಯೋಗ್ಯತೆ, ಸಾಮರ್ಥ್ಯ ಇಲ್ಲದವರನ್ನು ಉನ್ನತ ಸ್ಥಾನಗಳಿಗೆ ಏರಿಸುವುದರಿಂದ ಸರ್ಕಾರದ ಬಿಗಿ, ದಕ್ಷತೆ ಕೆಡುತ್ತದೆ. ಸರ್ಕಾರದ ಅಧಿಕಾರಿಗಳಲ್ಲಿ ಗೌರವ ಕುಗ್ಗಿದರೆ, ಸರ್ಕಾರದ ಘನತೆ ಗೌರವಕ್ಕೂ ಧಕ್ಕೆಯಾಗುತ್ತದೆ. ಹಿಂದುಳಿದ ಪಂಗಡಕ್ಕೆ ಶಿಕ್ಷಣದಲ್ಲಾಗಲಿ, ರಾಜ್ಯಾಡಳಿತದಲ್ಲಾಗಲಿ ಅವಕಾಶ ಕೊಡಬಾರದೆಂಬುದು ಖಂಡಿತ ವಿಶ್ವೇಶ್ವರಯ್ಯನವರ ಉದ್ದೇಶವಾಗಿರಲಿಲ್ಲ. ಹಿಂದುಳಿದವರ ವಿದ್ಯಾಭ್ಯಾಸಕ್ಕಾಗಿ ಇವರು ಮಾಡಿದಷ್ಟು ಪ್ರಯತ್ನ, ಒದಗಿಸಿದಷ್ಟು ಸೌಲಭ್ಯ ಅದು

ವರೆಗೆ ಯಾರೂ ಮಾಡಿರಲಿಲ್ಲ. ಆದರೆ ವಿದ್ಯೆಯನ್ನೇ ನಂಬಿ, ಹೆಚ್ಚು ಶ್ರಮದಿಂದ ಅದರಲ್ಲಿ ಮುಂದುವರೆದಿದ್ದ ಒಂದು ಗುಂಪಿಗೆ, ಅಡ್ಡಿ ಆತಂಕ ಸೃಜಿಸಿ, ಒಡ್ಡಿ ಅವರನ್ನು ಹಿಂದುಳಿದವರ ಶ್ರೇಣಿಗೆ ಸೇರಿಸಬೇಕೆಂಬ ಧೋರಣೆ ಮತ್ತು ಪ್ರಯತ್ನ ವಿಶ್ವೇಶ್ವರಯ್ಯ ನವರ ಮನಸ್ಸಿನ ಮೇಲೆ ತುಂಬ ಆಘಾತವೆಸಗಿತು. ಮುಂಬರಿಯುತ್ತಿದ್ದ ಪಂಗಡಕ್ಕೆ ಆತಂಕ ಹೂಡದೆ, ವಿದ್ಯಾರ್ಥಿವೇತನ, ವಿಶೇಷ ಶಿಕ್ಷಣಸೌಲಭ್ಯ ಮೊದಲಾದ ಕ್ರಮ ಗಳಿಂದ ಹಿಂದುಳಿದವರನ್ನು ಪ್ರೋತ್ಸಾಹಿಸಿ ಪ್ರಗತಿಪರ ಮಾರ್ಗದಲ್ಲಿ ಕೊಂಡೊಯ್ಯ ಬೇಕೆಂದು ಇವರ ಮತ. ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ನಿರ್ಮಿತವಾದ ನೂತನ ಕೈಗಾರಿಕೆಗಳು ಆಗತಾನೆ ಕಣ್ತೆರೆಯುತ್ತಿದ್ದುವು. ಜಾತಿಮತಗಳ ಆಧಾರದ ಮೇಲೆ ದಕ್ಷರಲ್ಲದವರನ್ನು ಇವುಗಳಲ್ಲಿ ಸೇರಿಸುವುದರಿಂದ ಸುಗಮವಾಗಿ ಕೆಲಸ ಸಾಗಲು ತೊಂದರೆ ಆದೀತು ಎಂಬ ಶಂಕೆ. ಈ ಕಾರಣಗಳಿಂದ ಮಿಲ್ಲರ್ ಕಮಿಟಿಯ ಸ್ಥಾಪನೆ ಇವರಿಗೆ ಸರಿದೋರಲಿಲ್ಲ. ಈ ಸಮಿತಿಯ ದೆಸೆಯಿಂದ ದೇಶದಲ್ಲಿ ಜಾತಿ ಮತಗಳ ದ್ವೇಷಾಸೂಯೆ ಬೆಳೆಯಲು ಎಡೆಗೊಟ್ಟಂತೆ ಆದೀತು. ಇದಕ್ಕೆ ಅವಕಾಶ ಕೊಡಬೇಡಿರೆಂದು ಮಹಾಸ್ವಾಮಿಗಳಲ್ಲಿ ಬಹಳವಾಗಿ ಬಿನ್ನವಿಸಿಕೊಂಡರು. ಆದರೆ ಪ್ರಭುಗಳು ಇದಕ್ಕೆ ಕಿವಿಗೊಡಲಿಲ್ಲ. ತಮ್ಮನ್ನು ಕೆಲಸದಿಂದ ನಿವೃತ್ತಿಗೊಳಿಸುವಂತೆ ಮಹಾರಾಜರಿಗೆ ಕೇಳಿಕೊಂಡರು. ನೂತನವಾಗಿ ಅಸ್ತಿತ್ವಕ್ಕೆ ಬಂದಿದ್ದ ಅನೇಕ ಕೈಗಾರಿ ಕೋದ್ಯಮಗಳಿಗೆ, ಯೋಜನೆಗಳಿಗೆ ವಿಶ್ವೇಶ್ವರಯ್ಯನವರ ನಿರ್ಗಮನದಿಂದ ಧಕ್ಕೆಯಾದೀ ತೆಂದು ಮಹಾರಾಜರು ಮನಗಂಡು ಇನ್ನು ಸ್ವಲ್ಪ ಕಾಲವಾದರೂ ಅಧಿಕಾರದಲ್ಲಿದ್ದು ನೂತನ ಉದ್ಯಮಗಳನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿ ನಿವೃತ್ತರಾಗಬಹು ದೆಂದು ಅಪ್ಪಣೆ ಕೊಡಿಸಿದರು. ಈ ವಿಷಯ ಬಹಿರಂಗವಾಗಬಾರದೆಂದು ಉಭಯ ತ್ರರೂ ಸಮ್ಮತಿಸಿದರು. ಎಂಟು ತಿಂಗಳ ಕಾಲ ಈ ವಿಷಯ ಬಯಲಿಗೆ ಬರಲಿಲ್ಲ. ಈ ಅವಧಿಯಲ್ಲಿ ಹೊಸ ಯೋಜನೆಗಳು ಸ್ಥಾಪಿತವಾಗಲಿಲ್ಲ. ಸ್ಥಾಪಿತವಾಗಿದ್ದ ಉದ್ಯಮ ಗಳನ್ನು ಭದ್ರಪಡಿಸಿ, ಸರಿಯಾದ ಬುನಾದಿಯ ಮೇಲೆ ನಿಲ್ಲಿಸಿ ಎಂಟು ತಿಂಗಳ ತರು ವಾಯ ತಮ್ಮ ದಿವಾನ್‌ಗಿರಿಗೆ ಶರಣುಹೊಡೆದು, ಕ್ಷಣಕಾಲವೂ ವಿರಾಮವಿಲ್ಲದ ಅವಿಶ್ರಾಂತ ಸೇವೆಯಿಂದ ವಿಶ್ವೇಶ್ವರಯ್ಯನವರು ನಿವೃತ್ತರಾದರು.

ಮಹಾರಾಜರ ವಿಕೋಪಕ್ಕೆ, ವಿಶ್ವೇಶ್ವರಯ್ಯನವರ ರಾಜೀನಾಮೆಗೆ ಇನ್ನೂ ಹಲವು ಕಾರಣಗಳುಂಟು. ದಿವಾನರು ಪ್ರಜಾಪ್ರತಿನಿಧಿ ಸಭೆಯ ಅಧಿಕಾರ ಹೆಚ್ಚಿಸಿದರಷ್ಟೆ. ಆದರೆ ಹೀಗೆ ಮಾಡಲು ಮಹಾರಾಜರ ಪೂರ್ವಭಾವಿ ಅನುಮತಿ ಪಡೆದಿರಲಿಲ್ಲ. ಪಡೆಯಬೇಕಾಗಿತ್ತು. ಮಹಾರಾಜರನ್ನು ನೇರವಾಗಿ ಸಂದರ್ಶಿಸುವ ಅವಕಾಶ ದಿವಾನ ರಿಗೆ ಸುಲಭವಾಗಿ ದೊರೆಯುತ್ತಿರಲಿಲ್ಲ. ಮಹಾರಾಜರ ಆಪ್ತ ಕಾರ್ಯದರ್ಶಿಗಳ ಮೂಲಕ ದಿವಾನರು ವ್ಯವಹರಿಸಬೇಕಾಗಿತ್ತು. ವಿಶ್ವೇಶ್ವರಯ್ಯನವರು ವಾಕ್ಚತುರ ರಲ್ಲ. ತಮ್ಮ ಮನದೋಟ, ತಮ್ಮ ಅಭೀಷ್ಟ, ಕಷ್ಟಸಂಕಟ, ಆಡಳಿತ ನಡೆಸುವುದ ರಲ್ಲಿದ್ದ ಆತಂಕ ಇವೆಲ್ಲ ಮಹಾರಾಜರಿಗೆ ಪತ್ರ ಮುಖೇನ ಬರೆದು ತಿಳಿಸುತ್ತಿದ್ದರು. ಇವರ ಆಕ್ಷೇಪಣೆಗಳು ಅಸ್ಪಷ್ಟ, ನಿರಾಧಾರ ಎನಿಸಿದ್ದುವು ಮಹಾರಾಜರಿಗೆ. ಜುಲೈ 3,

1914ರಲ್ಲಿ, ಇಷ್ಟು ಮನಶ್ಶಾಂತಿ ಮತ್ತು ಸಮಾಧಾನ ನಾನು ಹಿಂದೆಂದೂ ಅನುಭವಿಸಿರಲಿಲ್ಲ—ಹೀಗೆಂದು ಮಹಾರಾಜರು ಬರೆದಿದ್ದರಷ್ಟೆ. ಹೀಗೆ ಸಂತುಷ್ಟರಾಗಿದ್ದ ಮಹಾಸ್ವಾಮಿಗಳು ವಿಶ್ವೇಶ್ವರಯ್ಯನವರ ವೇತನ 5,000 ರೂಪಾಯಿಗಳಿಗೆ ಹೆಚ್ಚಿಸಲು ತೀರ್ಮಾನಿಸಿದ್ದರು. ಮಹಾರಾಜರಿಗೆ ವೈಸರಾಯರಿಂದ ಬರುತ್ತಿದ್ದ ಕಾಗದ ಪತ್ರಗಳ ವಿಷಯದಲ್ಲಿ ದಿವಾನರೊಡನೆ ಅವರು ಸಮಾಲೋಚಿಸುತ್ತಿರಲಿಲ್ಲ. 'ನನ್ನಲ್ಲಿ ತಮ್ಮ ವಿಶ್ವಾಸ ಕುಗ್ಗುತ್ತಿದೆ' ಎಂದು ವಿಶ್ವೇಶ್ವರಯ್ಯನವರು ಮಹಾರಾಜರಿಗೆ ಬರೆದಿರುವ ಪತ್ರಗಳಲ್ಲಿ ತಿಳಿಸಿರಲು ಇದೂ ಒಂದು ಕಾರಣವಾಗಿದ್ದೀತು. ಬ್ರಿಟಿಷ್ ಪ್ರಾಂತ್ಯಗಳಿಗಿಂತ, ಮೈಸೂರು ಮುಂದುವರೆಯುತ್ತಿದ್ದುದು ಮತ್ತು ಪ್ರಜಾಪ್ರಭುತ್ವದಲ್ಲಿ ದಿವಾನರಿಗಿದ್ದ ವಿಶ್ವಾಸ ವೈಸರಾಯರಿಗೆ ಆಪ್ಯಾಯಮಾನವಾಗಿರಲಿಲ್ಲ. ತಮ್ಮ ವೇತನ ಹೆಚ್ಚಿಸಬೇಡಿರೆಂದು ವಿಶ್ವೇಶ್ವರಯ್ಯನವರು ಮಹಾರಾಜರನ್ನು ಬೇಡಿಕೊಂಡರು! ಇದನ್ನು ತಿರಸ್ಕರಿಸಿ ಮಾರ್ಚಿ 22, 1918ರಲ್ಲಿ ದಿವಾನರ ವೇತನ ರೂ. 5,000 ಹೆಚ್ಚಿಸಿದ ರಾಜಾಜ್ಞೆ ಹೊರಬಿದ್ದಿತು.

ಮಹಾರಾಜರಿಗೆ, ವಿಶ್ವೇಶ್ವರಯ್ಯನವರು ಮೇಲಿಂದ ಮೇಲೆ ಬರೆಯುತ್ತಿದ್ದ ಪತ್ರಗಳು ಮಹಾಸ್ವಾಮಿಗಳ ಮನಶ್ಶಾಂತಿ ಕದಡಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಸ್ವತಃ ಮಹಾರಾಜರೇ, "ನನ್ನ ವಿವರಣೆಗಳು ನಿಮ್ಮನ್ನು ತೃಪ್ತಿಗೊಳಿಸದಿದ್ದರೆ, ಇನ್ನುಳಿದಿರುವುದು ಒಂದೇ ಮಾರ್ಗ. ನೀವು ರಾಜೀನಾಮೆ ಸಲ್ಲಿಸುವುದು, ನಾನು ಅದನ್ನು ಅಂಗೀಕರಿಸುವುದು" ಈ ರೀತಿಯಲ್ಲಿ ತಿಳಿಸಿದರು. ತನ್ನಿಂದ ಮಹಾರಾಜರು ಕುಪಿತರಾಗಿರುವುದನ್ನು ಗ್ರಹಿಸಿ ರಾಜೀನಾಮೆ ಹಿಂತೆಗೆದುಕೊಳ್ಳಲು ತಾನು ಸಿದ್ಧವೆಂದು ಮಹಾಸ್ವಾಮಿಗಳಿಗೆ ತಿಳಿಸಿದರು. ಮಹಾರಾಜರು ಸಮ್ಮತಿಸಲಿಲ್ಲ.

ಕಾರ್ಮೋಡ ಈ ರೀತಿಯಲ್ಲಿ ಕವಿಯುತ್ತಿದ್ದಾಗ, ಇಂಡಿಯಾ ಸರ್ಕಾರದಿಂದ ಬಂದ ಪತ್ರ ಕತ್ತಲನ್ನು ಕರಗಿಸಿತು. ಬೀರೂರು—ಶಿವಮೊಗ್ಗ, ಮೈಸೂರು—ನಂಜನಗೂಡು ಮತ್ತು ಬೆಂಗಳೂರು—ಮೈಸೂರು ರೈಲನ್ನು ಮೈಸೂರು ಸರ್ಕಾರಕ್ಕೆ ಬಿಟ್ಟುಕೊಟ್ಟಿರುವುದಾಗಿ ತಿಳಿಸುವ ಪತ್ರ ಇದಾಗಿತ್ತು. ಸುಮಾರು 360 ಮೈಲಿಗಳಷ್ಟು ರೈಲುಮಾರ್ಗ ಪ್ರಾಪ್ತವಾದುದಕ್ಕಾಗಿ ಮಹಾರಾಜರು ಸಂತೋಷಭರಿತರಾದರು. ನಿಮ್ಮ ಶ್ರಮದಿಂದ ಇದು ಸಾಧ್ಯವಾಯಿತೆಂದು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿ ವಿಶ್ವೇಶ್ವರಯ್ಯನವರಿಗೆ ಮಹಾರಾಜರು ಪತ್ರ ಬರೆದು ತಿಳಿಸಿದರು. ಈ ಸನ್ನಿವೇಶವೇ ದಿವಾನರ ವೇತನವನ್ನು ರೂ. 4,000 ರೂ. 5,000 ಏರಿಸಲು ಕಾರಣವಾದುದು.

ಹಲವಾರು ಕಾರಣಗಳಿಂದ ಮನನೊಂದು ವಿಶ್ವೇಶ್ವರಯ್ಯನವರು ರಾಜೀನಾಮೆ ಸಲ್ಲಿಸಿದ್ದರೂ ತನ್ನ ಪ್ರಯತ್ನದಿಂದ ಪ್ರಾರಂಭಿಸಲ್ಪಟ್ಟಿದ್ದ ಯೋಜನೆಗಳನ್ನು ಪೂರ್ಣಗೊಳಿಸದೆ ಹೋಗುವುದು ಸರಿಯಲ್ಲವೆಂದು ಅವರಿಗೆ ತೋರುತ್ತಿತ್ತು. ದಿವಾನ್ ಸ್ಥಾನದಿಂದ ವಿರಮಿಸಿದರೂ ಯೋಜನೆಗಳನ್ನು ಮುಂದುವರಿಸುವ ಅಭಿಲಾಷೆಯಿಂದ

ವಿನೂತನ ಸಲಹೆ ಸೂಚಿಸಿದರು. ತನ್ನನ್ನು ಮಂತ್ರಿಸಂಪುಟದ ಗೌರವ ಸದಸ್ಯನಾಗಿ ನೇಮಿಸಿ, ಮೋಟಾರಿನಲ್ಲಿ ಸಂಚರಿಸುವ ವೆಚ್ಚಕ್ಕಾಗಿ ತಿಂಗಳಿಗೆ ರೂ. 300 ಪ್ರಯಾಣ ಭತ್ಯ ಮತ್ತು ಸಹಾಯಕ್ಕಾಗಿ ಒಬ್ಬ ಎಂಜಿನಿಯರನ್ನು ಕೊಡುವುದು, ಇದು ಅವರು ಮಂಡಿಸಿದ ಸಲಹೆ. ತನ್ನ ಸಂಭಾವನೆ ಐದು ಸಾವಿರಕ್ಕೆ ಹೆಚ್ಚಿಸಬೇಡಿ ಎಂದು ಕೇಳಿ ಕೊಂಡ ವ್ಯಕ್ತಿ, ಉಚಿತ ಸೇವೆ ಸಲ್ಲಿಸಲು ಸಿದ್ಧವಾಗಿದ್ದುದು ಅವರ ಸೇವಾಕಾಂಕ್ಷೆ, ಜವಾಬ್ದಾರಿಯ ಅರಿವು, ದೇಶಭಕ್ತಿ ಇವನ್ನು ನಿದರ್ಶಿಸುತ್ತದೆ. ಮಹಾರಾಜರಿಂದ ಈ ಸಲಹೆಗೆ ಪುರಸ್ಕಾರ ದೊರೆಯಲಿಲ್ಲ.

ರಾಜೀನಾಮೆಯ ಪತ್ರ ಸಲ್ಲಿಸಿದ್ದರೂ ಅದು ಸ್ವೀಕೃತವಾಗುವ ವರೆಗೆ ವಿಷಯ ಬಹಿರಂಗ ಪಡಿಸದೆ ತಮ್ಮ ಕೆಲಸ ಸಾಮಾನ್ಯ ರೀತಿಯಲ್ಲಿ ಮುಂದುವರಿಸಿಕೊಂಡು ಬಂದರು. ಹೊಸ ಯೋಜನೆಗಳನ್ನು ಕೈಗೆ ಎತ್ತಿಕೊಳ್ಳಲಿಲ್ಲ. ಈ ಬಗೆಯ ಡೋಲಾಯ ಮಾನ ಪರಿಸ್ಥಿತಿ ನಡೆಸಿಕೊಂಡು ಬರಲು ಮನಸ್ಸು ಒಪ್ಪದು. ತನ್ನ ರಾಜೀನಾಮೆ ಬೇಗ ಸ್ವೀಕರಿಸುವಂತೆ ದಿನಾಂಕ ಅಕ್ಟೋಬರ 4, 1918ರಲ್ಲಿ ಮತ್ತೆ ಪತ್ರ ಬರೆದರು. ರಾಜೀನಾಮೆ ಡಿಸೆಂಬರ್ 9, 1918ರಂದು ಮಹಾರಾಜರಿಂದ ಸ್ವೀಕೃತವಾಯಿತು. ಕಚೇರಿಯ ಎಲ್ಲ ಕೆಲಸಗಳನ್ನೂ ಪೂರ್ಣಗೊಳಿಸಿರುವೆ, ಬಾಕಿ ಏನನ್ನೂ ಉಳಿಸಿಲ್ಲ ವೆಂದು ಮಹಾರಾಜರಿಗೆ ತಿಳಿಸಿದರು. ಅಧಿಕಾರ ತ್ಯಜಿಸಿ ಕಚೇರಿಯಿಂದ ನಿರ್ಗಮಿಸುವ ಮುನ್ನ ಇಲಾಖೆಯ ಮುಖ್ಯಾಧಿಕಾರಿಗಳನ್ನು ಅಠಾರ ಕಚೇರಿಯ ಸಭಾಂಗಣಕ್ಕೆ ಬರಮಾಡಿಕೊಂಡು ಎಲ್ಲರಿಗೂ ವಂದನೆ ಸಮರ್ಪಿಸುತ್ತಾ, ತಾನು ಹಾಕಿಕೊಂಡಿದ್ದ ಗುರಿ ಸಾಧಿಸಲು ಸಾಧ್ಯವಿಲ್ಲದೆ ಹೋದುದಕ್ಕಾಗಿ ವಿಷಾದ ವ್ಯಕ್ತಪಡಿಸಿದರು. ರಾಜೀ ನಾಮೆ ಸಲ್ಲಿಸಬೇಕಾಗಿ ಬಂದ ಕಾರಣ ತಿಳಿಸಲಿಲ್ಲ. ಮೇಲ್ನೋಟಕ್ಕೆ ಶಾಂತಚಿತ್ತ ರಾಗಿದ್ದಂತೆ ತೋರುತ್ತಿದ್ದರೂ, ಸಮುದ್ರದ ತೆರೆಯಂತೆ ಮನಸ್ಸು ಅಲ್ಲೋಲಕಲ್ಲೋಲ ವಾಗಿತ್ತು. ಕಂಠ ಗದ್ಗದಿತವಾಗಿ ಬರೆದು ತಂದಿದ್ದ ವಂದನಾ ಸಮರ್ಪಣೆಯ ಪತ್ರ ಓದಲೂ ಸಾಧ್ಯವಾಗಲಿಲ್ಲ. ಮೈಸೂರಿನ ಸೇವಾವಕಾಶ ಕಡಿದುಹೋಯಿತಲ್ಲಾ ಎಂಬ ಸಂಕಟ ಅವರ ಮನಸ್ಸನ್ನು ತಲ್ಲಣಿಸುತ್ತಿತ್ತು. ವಂದನೆ, ಕೃತಜ್ಞತೆ ಸಲ್ಲಿಸು ತ್ತಲೇ ದಡದಡನೆ ಮೆಟ್ಟಲು ಇಳಿದು ಕಾದಿದ್ದ ತಮ್ಮ ಸ್ವಂತ ಮೋಟಾರಿನಲ್ಲಿ ತೆರಳಿದರು.

ದಿವಾನರಾಗಿ, ಅಧಿಕಾರ ಸ್ಥಾನದಿಂದ ಸೇವೆ ಸಲ್ಲಿಸುವ ಅವಕಾಶ ಕಳೆದುಹೋಯಿತು. ಆದರೂ ತಾನೇ ನಿರ್ಮಿಸಿದ ಮಾದರಿ ಮೈಸೂರಿಗೆ, ಶ್ರೀಮನ್ಮಹಾರಾಜರಿಗೆ, ಮೈಸೂ ರಿನ ಮಹಾ ಜನತೆಗೆ ಸೇವೆ ಸಲ್ಲಿಸುವ ಮನೋಭಿಲಾಷೆ ಇನ್ನೂ ಉಳಿದಿತ್ತು. ಕುಗ್ಗಿರ ಲಿಲ್ಲ. ಬಿರುಗಾಳಿ ಮಂದಮಾರುತವಾಗಿ ಬೀಸುತ್ತಿತ್ತು. ಮೈಸೂರಿಗೆ ಮಹಾರಾಜ ರಿಂದ ಕರೆ ಬಂದರೆ ಸೇವೆ ಸಲ್ಲಿಸಲು ಬರುವ ಆಶ್ವಾಸನೆ ನೀಡಿ ಪತ್ರ ಬರೆದರು. ಭದ್ರಾವತಿ ಕಬ್ಬಿಣ ಕಾರ್ಖಾನೆ ಕಟ್ಟಿದ್ದಾಗ ಕರೆಗೆ ಓಗೊಟ್ಟು ಬಂದು ಕೊಟ್ಟ ಮಾತಿನಂತೆ ನಡೆದುಕೊಂಡರು.

"ವಿಶ್ವೇಶ್ವರಯ್ಯನವರು ಮೈಸೂರು ಸರ್ಕಾರದಲ್ಲಿ ಅಧಿಕಾರ ಸ್ವೀಕರಿಸಿದ ಮೊದಲಿನಿಂದ ದೇಶದ ಆರ್ಥಿಕೋನ್ನತಿಗಾಗಿ ಏಕಮನಸ್ಸಿನಿಂದ ಶ್ರಮಿಸಿರುತ್ತಾರೆ. ದಿವಾನರಾಗಿ ಅವರ ಆಡಳಿತದ ಫಲವಾಗಿ ಶಿಕ್ಷಣ, ನೀರಾವರಿ, ರೈಲುಸಂಪರ್ಕ ಮತ್ತು ಕೈಗಾರಿಕೆ ಇವುಗಳಲ್ಲಿ ಪ್ರಮುಖ ಹಾಗೂ ಬಹಳ ವ್ಯಾಪಕವೂ ಆದ ಬೆಳವಣಿಗೆಯಾಗಿ, ಭವಿಷ್ಯದಲ್ಲಿ ರಾಜ್ಯದ ಸಮೃದ್ಧ ಪ್ರಗತಿಗೆ ಸುಭದ್ರ ಅಸ್ತಿಭಾರ ಸ್ಥಾಪಿತವಾಗಿದೆ." ಈ ವಾಕ್ಯಗಳಲ್ಲಿ ಅವರ ಸೇವೆ ಪ್ರಶಂಸಿಸಿ ಮೈಸೂರು ಸರ್ಕಾರ ವಿಶೇಷ ಗಜೆಟ್ ಪ್ರಕಟಿಸಿತು.

"ಕಬ್ಬಿಣದಂತೆ ತುಕ್ಕು ಹಿಡಿದು ನಶಿಸಬೇಡ. ಉಕ್ಕಿನಂತೆ ತೇದು ಸವೆದು ಸೇವೆ ಸಲ್ಲಿಸು" ಎಂಬ ತಮ್ಮ ನುಡಿಯಂತೆ ನಡೆದು ಮೈಸೂರಿನ ದಿವಾನ್ ಪದವಿಯಿಂದ ಡಿಸೆಂಬರ್ 9, 1918ರಿಂದ ನಿರ್ಗಮಿಸಿದರು.

# 17. ಸ್ವದೇಶಾಭಿಮಾನ

ನಮ್ಮ ನಾಡನ್ನು ನವನಾಗರಿಕವಾಗಿ ಮಾಡುವ ಬಯಕೆ ವಿಶ್ವೇಶ್ವರಯ್ಯನವರಿಗೆ. ಇದಕ್ಕಾಗಿ ಅವರು ಮುಂದುವರೆದಿದ್ದ ಪಾಶ್ಚಾತ್ಯ ದೇಶಗಳಿಗೆ ಆರು ಸಾರಿ ಹೋಗಿದ್ದರು. ವಿಹಾರದ ಪರ್ಯಟನವಲ್ಲ. ಉದ್ದೇಶಪೂರಿತ ಪ್ರವಾಸಗಳು. 1898ರಲ್ಲಿ ಜಪಾನಿಗೆ ಹೋದರು. ಅಲ್ಲಿನ ಕೈಗಾರಿಕೋದ್ಯಮಗಳ ಪರಿಶೀಲನೆ ನಡೆಸಿ, ವರದಿ ಸಿದ್ಧಪಡಿಸಿದರು. ಆಗ ಅವರು ಸರ್ಕಾರದ ನೌಕರಿಯಲ್ಲಿದ್ದುದರಿಂದ ವರದಿ ಪ್ರಕಟಿಸುವುದು ಉಚಿತವಲ್ಲವೆಂದು ಪ್ರಕಟಿಸಲಿಲ್ಲ. ಕಡೆಯ ವರೆಗೂ ವರದಿ ಬೆಳಕು ಕಾಣದೆ ಅಮೂಲ್ಯ ಕೊಡುಗೆಯೊಂದು ಲಭಿಸದಂತಾಯಿತು. 1908–09ರಲ್ಲಿ ಯೂರೋಪ್, ಇಂಗ್ಲೆಂಡ್ ಮತ್ತು ಅಮೇರಿಕಗಳ ಭೇಟಿ. 1919–20ರಲ್ಲಿ ವಿಶ್ವ ಪರ್ಯಟನ. 1926–27ರಲ್ಲಿ ಕಬ್ಬಿಣ ಮತ್ತು ಉಕ್ಕಿನ ತಯಾರಿಕೆ ಕ್ರಮ ಪರಿಶೀಲಿಸಲು ಸ್ವೀಡನ್, ಯೂರೋಪ್, ಇಂಗ್ಲೆಂಡ್, ಅಮೇರಿಕ ಮತ್ತು ಕೆನಡ ಸಂದರ್ಶನ. 1935ರಲ್ಲಿ ಬೊಂಬಾಯಿಯಲ್ಲಿ ಮೋಟಾರು ತಯಾರಿಕೆ ಕಾರ್ಖಾನೆ ಸ್ಥಾಪಿಸುವ ಉದ್ದೇಶದಿಂದ ಯೂರೋಪ್, ಇಂಗ್ಲೆಂಡ್, ಅಮೇರಿಕ ಮತ್ತು ಕೆನಡ ದೇಶಗಳಲ್ಲಿ ಸಂಚಾರ. 1946–47ರಲ್ಲಿ ಅಖಿಲ ಭಾರತ ತಯಾರಿಕರ ಸಂಘದ ಸದಸ್ಯರೊಡನೆ ಕೈಗಾರಿಕೋದ್ಯಮಗಳ ಕ್ಷೇತ್ರಗಳನ್ನು ಪರಿಶೀಲಿಸಲು ಪ್ರವಾಸ. ಈ ಪ್ರವಾಸ ಕೈಗೊಂಡಾಗ ಅವರ ವಯಸ್ಸು 86 ಆಗಿತ್ತು. ಈ ಇಳಿವಯಸ್ಸಿನಲ್ಲೂ ಅದಮ್ಯ ಉತ್ಸಾಹ.

ಒಂದು ದೇಶದ ನಾಗರಿಕತೆಯನ್ನು ಆ ದೇಶ ಬಳಸುವ ವಿದ್ಯುತ್, ಪೆಟ್ರೋಲ್ ಮತ್ತು ಮೋಟಾರು ವಾಹನಗಳಿಂದ ಅಳೆಯಬಹುದು. ವಿಶ್ವೇಶ್ವರಯ್ಯನವರ ಕಾಲಕ್ಕೆ ಭಾರತವು ವಿದೇಶಗಳಿಂದ ಕೋಟ್ಯಂತರ ರೂಪಾಯಿಗಳ ಮೋಟಾರು ವಾಹನ, ವಿದ್ಯುದುಪಕರಣ ಮತ್ತು ಪೆಟ್ರೋಲ್ ಆಮದು ಮಾಡಿಕೊಳ್ಳುತ್ತಿತ್ತು. ಅಪಾರ ಪ್ರಮಾಣದಲ್ಲಿ ವಿದೇಶಗಳಿಗೆ ಹರಿದುಹೋಗುತ್ತಿದ್ದ ಹಣದಿಂದ ದೇಶ ಬಡವಾಗುತ್ತಿತ್ತು. ಹರಿದುಹೋಗುತ್ತಿದ್ದ ಹಣ ದೇಶದಲ್ಲಿಯೇ ಉಳಿಯುವಂತೆ ಮಾಡಬೇಕು. ಮೋಟಾರ್ ತಯಾರಿಸುವ ಕಾರ್ಖಾನೆ ನಮ್ಮ ದೇಶದಲ್ಲಿ ಆಗಬೇಕು. ಈ ಉದ್ದೇಶದಿಂದ ತಮ್ಮ ಸ್ವಂತ ವೆಚ್ಚದಲ್ಲಿ ಯೂರೋಪ್ ಮತ್ತು ಅಮೇರಿಕಗಳಿಗೆ ಹೋಗಿ ಮೋಟಾರ್ ವಾಹನ ತಯಾರಿಸುತ್ತಿದ್ದ ಮಾರಿಸ್, ಆಸ್ಟಿನ್, ಡಾಗನ್‌ಹ್ಯಾಂ, ಫೋರ್ಡ್, ವಾಕ್ಸ್‌ಹಾಲ್, ಫಿಯಟ್, ಸ್ವಾ, ಲಾನ್ಸಿಯಾ, ಸ್ಕೋಡ ಮೊದಲಾದ ಕಾರ್ಖಾನೆಗಳನ್ನು ಸಂದರ್ಶಿಸಿ ಅಲ್ಲಿನ ವ್ಯವಸ್ಥಾಪಕರೊಡನೆ ಭಾರತದಲ್ಲಿ ಮೋಟಾರು ತಯಾರಿಸುವ ಬಗ್ಗೆ ವಿಚಾರ

ವಿನಿಮಯ ಮಾಡಿದರು. ಬರ್ಮಿಂಗ್‌ಹ್ಯಾಂನಲ್ಲಿ ಆಸ್ಟಿನ್ ಮೋಟಾರ್ ಕಂಪನಿಯ ಲಾರ್ಡ್ ಆಸ್ಟಿನ್ ಅವರು ಬಡ ಭಾರತಕ್ಕೆ ಸಣ್ಣ ಮೋಟಾರ್ ವಾಹನವೇ ಉತ್ತಮ ವೆಂದು ತಿಳಿಸಿದರು.

ಇಂಗ್ಲೆಂಡಿನಿಂದ ಇಟಲಿ, ಜರ್ಮನಿ, ಫ್ರಾನ್ಸ್ ದೇಶಗಳಿಗೆ ಹೋದರು. ಟ್ಯೂರಿನ್‌ನಲ್ಲಿ 'ಫಿಯಟ್' ಕಂಪನಿಗೆ ಹಲವು ಸಾರಿ ಹೋಗಿ ಅಲ್ಲಿನ ಕಾರ್ಯವಿಧಾನ ಕೂಲಂಕಷವಾಗಿ ಪರಿಶೀಲಿಸಿದರು. ಏಳು ಅಂತಸ್ತಿನ ಕಟ್ಟಡ. ಕೆಳಗಿನಿಂದ ಮೇಲಕ್ಕೆ ಚಕ್ರಾಕಾರವಾಗಿ ಸುತ್ತುವ 'ಟ್ರಾಂ' ಗಾಡಿಯು ಮೋಟಾರಿನ ಬಿಡಿಭಾಗಗಳನ್ನು ಒಯ್ಯುವುದು. ಉಭಯ ಪಾರ್ಶ್ವಗಳಲ್ಲಿ ಕಾರ್ಮಿಕರು ನಿಂತು ಬೇಕಾದ ಭಾಗಗಳನ್ನು ತೆಗೆದುಕೊಂಡು, ಜೋಡಿಸಿ ವಾಹನ ತಯಾರಿಸುವರು.

ಲಂಡನ್ನಿನ 'ಡೇಲಿ ಹೆರಾಲ್ಡ್' ಪತ್ರಿಕೆಯ ಬಾತ್ಮೀದಾರ ವಿಶ್ವೇಶ್ವರಯ್ಯನವರನ್ನು ಸಂದರ್ಶಿಸಿದ ವರದಿ ಪ್ರಕಟಿಸಿತು. "ಭಾರತದಲ್ಲಿ ಅಣೆಕಟ್ಟು ಕಟ್ಟುವುದರಲ್ಲಿ ತುಂಬ ವಿಖ್ಯಾತರಾಗಿರುವ ವಿಶ್ವೇಶ್ವರಯ್ಯನವರು ತಮ್ಮ ದೇಶದಲ್ಲಿ ದೊಡ್ಡ ಮೋಟಾರು ಕಾರ್ಖಾನೆ ಸ್ಥಾಪಿಸುವ ಉದ್ದೇಶದಿಂದ ಇಲ್ಲಿಗೆ ದಯಮಾಡಿಸಿದ್ದಾರೆ. ಅವರ ಎಂಜಿನಿಯರಿಂಗ್ ಸಾಮರ್ಥ್ಯದ ಸ್ಮಾರಕಗಳು ದೇಶಾದ್ಯಂತ ಹರಡಿವೆ. ಈ ಎಂಜಿನಿಯರಿಂಗ್ ಚಾಣಾಕ್ಷ ಅಲ್ಪ ಕಾಲದಲ್ಲೇ ಭಾರತದ ಹೆನ್ರಿ ಫೋರ್ಡ್ ಆಗಬಹುದು. ಭಾರತದಲ್ಲಿ ಬೃಹತ್ ಮೋಟಾರು ಕಾರ್ಖಾನೆ ಸ್ಥಾಪಿಸುವುದರಲ್ಲಿ ಅವರು ಯಶಸ್ಸು ಸಾಧಿಸದೆ ಇರಲಾರರು. ಮೈದಾಸನಂತೆ ಮುಟ್ಟಿದ್ದೆಲ್ಲ ಬಂಗಾರ ಮಾಡುವ ಸಾಮರ್ಥ್ಯ ಅವರಲ್ಲುಂಟು. ಸಿದ್ಧಸಾಧನೆ ಅವರ ಹಸ್ತಗುಣ." ಇದು ಸಂದರ್ಶನ ಸಾರ. ವಿಶ್ವೇಶ್ವರಯ್ಯನವರ ಶಕ್ತಿ ಸಾಮರ್ಥ್ಯದಲ್ಲಿ ಅಷ್ಟು ವಿಶ್ವಾಸ.

ಮುಂದೆ ಅಮೇರಿಕಕ್ಕೆ ಪ್ರಯಾಣ. ಫೋರ್ಡ್ ಕಂಪನಿಯ ಜನರಲ್ ಮ್ಯಾನೇಜರ್ ಸೋರೆನ್‌ಸನ್ ಮತ್ತು ಇತರರನ್ನು ಕಂಡು ವಿಚಾರವಿನಿಮಯ ನಡೆಸಿದರು. ಡೆಟ್ರಾಯಿಟ್‌ನಲ್ಲಿ ಒಂದು ತಿಂಗಳ ಕಾಲ ಉಳಿದಿದ್ದು, ದಿನವಹಿ ಫೋರ್ಡ್ ಕಂಪನಿಗೆ ಹೋಗಿ ಪರಿಶೀಲಿಸುತ್ತಿದ್ದರು. ಭಾರತಕ್ಕೆ ಮರಳಿ ಏಪ್ರಿಲ್ 1936ರಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸುವ ವಿಷಯದಲ್ಲಿ ಸಣ್ಣ ಪುಸ್ತಿಕೆ ಪ್ರಕಟಿಸಿದರು. ಪ್ರಪಂಚದಲ್ಲಿ ಬಳಕೆಯಲ್ಲಿದ್ದ ಮೋಟಾರು ವಾಹನಗಳ ಸಂಖ್ಯೆ, ಆ ದೇಶಗಳು ಸಿದ್ಧಪಡಿಸುತ್ತಿದ್ದ ಅವುಗಳ ಸಂಖ್ಯೆ, ಭಾರತ ಮತ್ತು ಬರ್ಮ ಆಮದು ಮಾಡಿಕೊಳ್ಳುತ್ತಿದ್ದ ವಾಹನಗಳು, ಅವುಗಳ ಬೆಲೆ ಮೊದಲಾದ ವಿವರಗಳನ್ನು ಪುಸ್ತಿಕೆ ಒಳಗೊಂಡಿತ್ತು. ಇಂಗ್ಲೆಂಡ್ ಅಥವಾ ಅಮೇರಿಕದ ಸಹಕಾರದಿಂದ ಭಾರತದಲ್ಲಿ ವರ್ಷಕ್ಕೆ 10,000 ಮೋಟಾರು 5,000 ಟ್ರಕ್ ತಯಾರಿಸುವ ಯೋಜನೆ ಸಿದ್ಧಪಡಿಸಿದರು. ಮೋಟಾರಿನ ಅಂದಾಜು ವೆಚ್ಚ ಪ್ರಾರಂಭದಲ್ಲಿ ರೂ. 1,420. ಕ್ರಮೇಣ ಇದನ್ನು ರೂ. 1,200ಕ್ಕೆ ಇಳಿಸಬಹುದು. ಯಂತ್ರ, ಕಟ್ಟಡ ಇವುಗಳಿಗೆ 90 ಲಕ್ಷ, ಚಾಲ್ತಿ ವೆಚ್ಚಕ್ಕೆ 60 ಲಕ್ಷ, ಒಟ್ಟು

150 ಲಕ್ಷದ ಅಂದಾಜು. ಆ ಕಾಲಕ್ಕೆ ನ್ಯೂಯಾರ್ಕಿನಿಂದ ಆಮದುಮಾಡಿಕೊಳ್ಳುತ್ತಿದ್ದ ಮೋಟಾರು ವಾಹನದ ಬೆಲೆ ರೂ. 3,200.

ಕೈಗಾರಿಕೋದ್ಯಮಗಳಲ್ಲಿ ಭಾರತ ಮುಂದುವರೆಯುವುದು ಬ್ರಿಟಿಷ್ ಪ್ರಭುತ್ವಕ್ಕೆ ಬೇಡವಾಗಿತ್ತು. ತನ್ನ ಪ್ರಮುಖ ಮಾರುಕಟ್ಟೆ ಹೋದೀತಲ್ಲ ಎಂಬ ಭಯ. ಅಪೂರ್ವ ತಾಳ್ಮೆಯಿಂದ ಆರು ವರ್ಷದಷ್ಟು ದೀರ್ಘಕಾಲ ಕಾರ್ಖಾನೆ ಸ್ಥಾಪಿಸಲು ಆಗತ್ಯವಾದ ಅನುಮತಿಗಾಗಿ ಇಂಡಿಯಾ ಸರ್ಕಾರದೊಡನೆ ಪತ್ರವ್ಯವಹಾರ ನಡೆಸಿದರು. ಯಾವ ಸ್ವಾರ್ಥಕ್ಕಾಗಿ ಅಲ್ಲ, ದೇಶದ ಅಭಿವೃದ್ಧಿಗಾಗಿ. ಕಾಂಗ್ರೆಸ್ ಅಧಿಕಾರ ಸೂತ್ರ ಕೇಂದ್ರ ಮತ್ತು ಹಲವು ಪ್ರಾಂತಗಳಲ್ಲಿ ವಹಿಸಿಕೊಂಡಾಗ ವಿಶ್ವೇಶ್ವರಯ್ಯನವರ ಉತ್ಸಾಹ ಮತ್ತೆ ಉಕ್ಕಿತು. ದೇಶ ಇನ್ನೂ ಸಂಪೂರ್ಣ ಸ್ವಾತಂತ್ರ್ಯ ಗಳಿಸಿಕೊಂಡಿರಲಿಲ್ಲ. ಆದರೂ ಬೊಂಬಾಯಿ ಪ್ರಾಂತ ಸರ್ಕಾರ ಅಗತ್ಯ ಸೌಲಭ್ಯಗಳನ್ನು ನೀಡುವ ಭರವಸೆ ಕೊಟ್ಟಿತು. ಇದರಿಂದ ಉತ್ಸಾಹಿತರಾದ ವಾಲ್‌ಚಂದ್ ಹೀರಾಚಂದ್ ಮತ್ತು ಕೈಗಾರಿಕೆ ಇಲಾಖೆಯ ಡೈರೆಕ್ಟರ್ ಪಿ. ಬಿ. ಅದ್ವಾನಿ ಇಬ್ಬರೂ ಜೊತೆಗೂಡಿ ಡೆಟ್ರಾಯಿಟ್‌ಗೆ ಹೋದರು. ಹಲವು ಮೋಟಾರು ತಯಾರಿಸುವ ಕಂಪನಿಯವರನ್ನು ಸಂದರ್ಶಿಸಿ ವಿಚಾರ ವಿನಿಮಯ ನಡೆಸಿದರು. ಫೋರ್ಡ್ ಕಂಪೆನಿಯವರು ಷೇರು ಬಂಡವಾಳದಲ್ಲಿ ಶೇಕಡ ೫೧ ಭಾಗ ತನಗೆ ಕೊಡುವುದಾದರೆ ಮಾತ್ರ ಭಾರತದಲ್ಲಿ ಕಾರ್ಖಾನೆ ಸ್ಥಾಪಿಸಲು ನೆರವು ನೀಡುವು ದಾಗಿ ತಿಳಿಸಿ, ಈ ಷರತ್ತು ಭಾರತದ ದೃಷ್ಟಿಯಿಂದ ಯೋಗ್ಯವೆನಿಸಲಿಲ್ಲ. ಒಪ್ಪಂದ ಕುದುರಲಿಲ್ಲ. ಕಡೆಗೆ ಡೆಟ್ರಾಯಿಟ್‌ನ ಕ್ರೈಸಲಿಕ್ ಕಂಪನಿ ತಾಂತ್ರಿಕ ಸಲಹೆ ನೀಡಲು ಒಪ್ಪಿತು.

ವಾಲ್‌ಚಂದ್ ಹೀರಾಚಂದ್ ಮತ್ತು ಅದ್ವಾನಿ ಈ ಭರವಸೆ ಪಡೆದು ಭಾರತಕ್ಕೆ ಮರಳಿದರು. ಆದರೆ ಇಲ್ಲಿ ಇನ್ನೂ ಹೆಚ್ಚಿನ ಅಡೆತಡೆಗಳನ್ನು ಎದುರಿಸಿ ಜೀರ್ಣಿಸಿಕೊಳ್ಳ ಬೇಕಾಗಿತ್ತು. ಬೊಂಬಾಯಿ ಕಾಂಗ್ರೆಸ್ ಸರ್ಕಾರ ಸಹಾಯಕವಾಗಿದ್ದರೂ ಕೇಂದ್ರ ಸರ್ಕಾರ ಈ ಔದಾರ್ಯ ತೋರಲಿಲ್ಲ. ಮೋಟಾರು ವಾಹನ ಮತ್ತು ಅದರ ಬಿಡಿ ಭಾಗಗಳ ಮೇಲೆ ಕೇಂದ್ರ ಸರ್ಕಾರ ಸುಂಕ ವಿಧಿಸುತ್ತಿತ್ತು. ಇದೇ ಸುಂಕವನ್ನು ರಕ್ಷಣಾ ತೆರಿಗೆಯಾಗಿ, ಭಾರತದ ಕಂಪನಿ ಭದ್ರವಾಗಿ ಬೇರೂರುವ ವರೆಗೂ ಮುಂದುವರಿಸಿ ಕೊಂಡು ಬರುವಂತೆಯೂ, ಕಂಪನಿ ತರಿಸಿಕೊಳ್ಳುವ ಯಂತ್ರೋಪಕರಣಗಳ ಮೇಲೆ ತೆರಿಗೆ ವಿಧಿಸಬಾರದೆಂದೂ ವಿಶ್ವೇಶ್ವರಯ್ಯನವರು ಭಾರತ ಸರ್ಕಾರಕ್ಕೆ ಪ್ರಾರ್ಥನೆ ಸಲ್ಲಿಸಿದರು. ಮುಂದುವರೆದ ಫ್ರಾನ್ಸ್, ಜರ್ಮನಿ ದೇಶಗಳಲ್ಲೂ ಇಂಥ ರಕ್ಷಣಾ ತೆರಿಗೆ ವಿಧಿಸುತ್ತಿರುವುದನ್ನು ಸರ್ಕಾರದ ಗಮನಕ್ಕೆ ತಂದರು. ಆದರೆ ಭಾರತ ಸರ್ಕಾರ ಒಪ್ಪಿಗೆ ಕೊಡಲಿಲ್ಲ.

ಭಾರತದ ಧೋರಣೆಯಿಂದ ಧೃತಿಗೆಡದ ವ್ಯವಸ್ಥಾಪಕರು ಮೈಸೂರು ಸಂಸ್ಥಾನದಲ್ಲಿ ಕಾರ್ಖಾನೆ ಸ್ಥಾಪಿಸಲು ಪತ್ರವ್ಯವಹಾರ ನಡೆಸಿದರು. ದಿವಾನ್ ಮಿರ್ಜಾ ಇಸ್ಮಾ

ಯಿಲರು, ಮಹಾರಾಜರ ಸಮ್ಮತಿಯಿಂದ ಸರ್ವ ವಿಧವಾದ ಸೌಲಭ್ಯ ನೀಡುವ ಭರವಸೆ ಕೊಟ್ಟರು. ಆದರೆ ಮೈಸೂರು ಸರ್ಕಾರ ಸ್ವತಂತ್ರಿಸಿ ವ್ಯವಹರಿಸುವ ಸ್ಥಿತಿ ಯಲ್ಲಿರಲಿಲ್ಲ. ಸಂಸ್ಥಾನ ಭಾರತ ಸರ್ಕಾರದ ಅಧೀನ. ಬೆಂಬಿಡದೆ ಭೂತದಂತೆ ಕಾರ್ಖಾನೆಯ ಸ್ಥಾಪನೆಗೆ ಅವಕಾಶ ಕೊಡದಂತೆ ತನ್ನ ಪ್ರತಿನಿಧಿ ರೆಸಿಡೆಂಟರಿಗೆ ಆಜ್ಞಾಪಿಸಿತು. ಸರ್ ಮಿರ್ಜಾ ಇಸ್ಮಾಯಿಲರು ಈ ಕಾರ್ಖಾನೆ ಸ್ಥಾಪಿತವಾಗುವುದರಲ್ಲಿ ತುಂಬ ಉತ್ಸಾಹ ತಾಳಿದ್ದರು. ಮಿರ್ಜಾ ಅವರು ದಿವಾನ್ ಪದವಿಗೆ ರಾಜೀನಾಮೆ ನೀಡಲು ಇದೂ ಒಂದು ಪ್ರಮುಖ ಕಾರಣವಾಯಿತು.

ಏಳು ವರ್ಷಗಳ ಭಗೀರಥ ಪ್ರಯತ್ನ ವಿಫಲಗೊಂಡಾಗ ಇಂಡಿಯಾ ಸರ್ಕಾರದೊಡನೆ ನಡೆಸಿದ ಪತ್ರವ್ಯವಹಾರ ಮುದ್ರಿಸಿ ಪ್ರಕಟಿಸಿದರು. "ಈ ದೀರ್ಘ ಅವಧಿಯಲ್ಲಿ ಮೇಲಿಂದಮೇಲೆ ನಾನು ಒತ್ತಾಯ ಮಾಡುತ್ತಿದ್ದರೂ, ನಮ್ಮೊಡನೆ ಮನಬಿಚ್ಚಿ ಮಾತನಾಡುವ ಅಭಿಲಾಷೆಯನ್ನೂ ತೋರಿಸಲಿಲ್ಲ. ಇಲ್ಲದ ನೆಪಗಳನ್ನು ಸೃಜಿಸಿ ಹೂಡಿ ಎಷ್ಟು ಅಡೆತಡೆಗಳನ್ನು ಒಡ್ಡಬಹುದೋ ಅಷ್ಟನ್ನೂ ಒಡ್ಡುತ್ತಾ, ನಮ್ಮ ಒಂದು ಪ್ರಾರ್ಥನೆಯನ್ನೂ ಸ್ವೀಕರಿಸದೆ, ಅನ್ಯ ಪ್ರತಿಯೋಜನೆಯನ್ನೂ ಕೊಡದೆ, ಕೇವಲ ಸಹಾನುಭೂತಿ ವ್ಯಕ್ತಪಡಿಸುತ್ತ, ಒಂದು ಸೂಜಿಮೊನೆಯಷ್ಟು ಪ್ರೋತ್ಸಾಹವನ್ನೂ ನೀಡಿರುವುದಿಲ್ಲ." ಮೃದು ಸ್ವಭಾವದವರೂ, ಸಜ್ಜನಿಕೆಯ ಮೂರ್ತಿವೆತ್ತವರೂ ಆದ ವಿಶ್ವೇಶ್ವರಯ್ಯನವರ ಸ್ವಭಾವಕ್ಕೇ ವಿರುದ್ಧವಾದುದು.

ವಿಶ್ವೇಶ್ವರಯ್ಯನವರು 1908ರಲ್ಲಿ ಕೈಯಿಟ್ಟ ಪ್ರಯತ್ನ ಫಲಿಸಲು ನಲವತ್ತು ವರ್ಷಗಳ ದೀರ್ಘ ಕಾಲ ಬೇಕಾಯಿತು. ನಲವತ್ತು ವರ್ಷಗಳ ತರುವಾಯ 'ಪ್ರೀಮಿಯರ್ ಆಟೊಮೊಬೈಲ್ ಕಂಪೆನಿ,' ಅದೇ ಕ್ರೈಸ್ಲರ್ ಕಂಪನಿಯ ಸಹಕಾರದಿಂದ ಅಸ್ತಿತ್ವಕ್ಕೆ ಬಂತು.

ಮೋಟಾರು ಕಾರ್ಖಾನೆ ಸ್ಥಾಪಿಸಲು ಅನುಮತಿ ಕೊಡದೆ ಹೋದ ಬ್ರಿಟಿಷ್ ಪ್ರಭುತ್ವ, ವಿಮಾನ ಕಾರ್ಖಾನೆ ಸ್ಥಾಪಿಸಲು ನೀಡಿದ ಪ್ರೋತ್ಸಾಹಕ್ಕೆ ಅವರ ಸಂಕಟ ಸಮಯವೇ ಕಾರಣ. ದ್ವಿತೀಯ ವಿಶ್ವ ಸಂಗ್ರಾಮ ತಾಂಡವವಾಡುತ್ತಿತ್ತು. ಇಂಗ್ಲೆಂಡ್ ಸಾಹಸಿಗಳಿಂದ ಕೂಡಿದ ಒಂದು ದ್ವೀಪ. ಯುದ್ಧಕ್ಕೆ ಬೇಕಾಗಿದ್ದ ಶಸ್ತ್ರಾಸ್ತ್ರ, ದಿನನಿತ್ಯದ ಜೀವನಕ್ಕೆ ಅಗತ್ಯವಾದ ಅನ್ನ, ಆಹಾರ, ತರಕಾರಿ, ಹಾಲು, ಬೆಣ್ಣೆ, ಮಾಂಸ ಎಲ್ಲಕ್ಕೂ ಬ್ರಿಟನ್ ಪರಾವಲಂಬಿ. ಇಂಗ್ಲೆಂಡಿನ ಬಂದರುಗಳಿಗೆ ಹಲವಾರು ದೇಶಗಳಿಂದ ಅಗತ್ಯ ಸರಕುಗಳು ಬರುತ್ತವೆ. ಜರ್ಮನಿಯ ಜಲಾಂತರ್ಗತ ಸಬ್‌ಮರಿನ್, ಸಮರನೌಕೆ, ಭಯಂಕರ ಅವ್ಯಾಹತ ವಿಮಾನ ಧಾಳಿ, ಸರಕುಸಾಮಗ್ರಿ ಹೊತ್ತು ತರುತ್ತಿದ್ದ ಜಹಜುಗಳನ್ನು ಮುಳುಗಿಸುತ್ತಿದ್ದುವು. ವಿಮಾನಧಾಳಿಯಿಂದ ಕಾರ್ಖಾನೆಗಳು ಪುಡಿಪುಡಿಯಾಗಿಹೋಗಿದ್ದುವು.

ಇಂಥ ಸಂದಿಗ್ಧ ಸಮಯದಲ್ಲಿ ಅಮೇರಿಕ ಇಂಗ್ಲೆಂಡಿನ ನೆರವಿಗೆ ಬಂತು. ಅಪಾರ ಯುದ್ಧಸಾಮಗ್ರಿಗಳನ್ನು ಒದಗಿಸಿತು. ಇದರಿಂದ ಧೈರ್ಯ ತಳೆದ ಬ್ರಿಟನ್, ಜರ್ಮನಿಯ ವಿರುದ್ಧ ಪ್ರತಿಧಾಳಿ ನಡೆಸಲು ನಿಶ್ಚಯಿಸಿತು. ಫ್ರಾನ್ಸ್ ಸಹ ಜರ್ಮನಿಯ ವಶವಾಗಿತ್ತು. ಜರ್ಮನಿಯ ಸೇನೆ ಫ್ರಾನ್ಸಿನಲ್ಲಿ ಬೀಡುಬಿಟ್ಟಿತ್ತು. ಈ ಸೇನೆಯ ಮೇಲೆ ಧಾಳಿ ನಡೆಸಲು ಫ್ರಾನ್ಸಿನ ತೀರ ಪ್ರದೇಶ ಡನ್ಕರ್ಕಿನಲ್ಲಿ ಅಮೇರಿಕದಿಂದ ಪಡೆದಿದ್ದ ಅಪಾರ ಶಸ್ತ್ರಾಸ್ತ್ರ, ಅಗಣಿತ ಸೇನಾಬಲ ಇಳಿಸಿತು. ಕಾರ್ಯಾಚರಣೆ ಗೋಪ್ಯವಾಗಿ ನಡೆದಿದ್ದರೂ ಜರ್ಮನಿ ಹೇಗೋ ಗುಟ್ಟನ್ನು ತಿಳಿದು ಡನ್ಕರ್ಕಿನಲ್ಲಿ ಇಳಿದಿದ್ದ ಸೇನೆಯ ಮೇಲೆರಗಿತು. ಧಾಳಿ ತಡೆಯಲಾರದೆ, ಅಪಾರ ಯುದ್ಧಸಾಮಗ್ರಿ ಅಲ್ಲಿಯೇ ಬಿಟ್ಟು ಸೇನೆ ಇಂಗ್ಲೆಂಡಿಗೆ ಹಿಮ್ಮೆಟ್ಟಿತು.

ಸಂಕಟ ಬಂದರೆ ವೆಂಕಟರಮಣ. ಈ ಸಂಕಟ ಪರಿಸ್ಥಿತಿ ತನ್ನ ಧೋರಣೆ ಇಂಗ್ಲೆಂಡ್ ಬದಲಾಯಿಸುವಂತೆ ಮಾಡಿತು. ವಿಶಾಖಪಟ್ಟಣ ನೌಕಾನಿರ್ಮಾಣ ಕಾರ್ಯಕ್ಕೆ ಸೂಕ್ತವೆಂದು ಜಹಜು ಕಟ್ಟುವ ಕೆಲಸ ಕೈಗೊಳ್ಳಲು ವಾಲ್‌ಚಂದ್ ಹೀರಾಚಂದ್ ಅವರಿಗೆ ಸರ್ಕಾರ ತಿಳಿಸಿತು. ಆಳವಾದ ಬಂದರಿನಲ್ಲಿ ಕಟ್ಟೆಕಟ್ಟುವುದು ಸುಲಭವಿರಲಿಲ್ಲ. ಹೀರಾಚಂದರು ಇದನ್ನು ಬಗೆಹರಿಸಲು ವಿಶ್ವೇಶ್ವರಯ್ಯನವರ ನೆರವು ಕೋರಿದರು. ಸಿಮೆಂಟ್ ತುಂಬಿದ ದೋಣಿಗಳನ್ನು ಮುಳುಗಿಸುವಂತೆ ಅವರು ಸೂಚಿಸಿದರು. ಇದು ಭದ್ರ ತಳಹದಿ ಒದಗಿಸುತ್ತದೆ. ಇದರ ಮೇಲೆ ಕಟ್ಟೆ ಕಟ್ಟಬಹುದೆಂದು ಅವರು ಸೂಚಿಸಿದರು.

ಈ ಸಮಯದಲ್ಲಿ ವಾಲ್‌ಚಂದ್ ಹೀರಾಚಂದ್ ಕಂಪನಿಯ ತಾಂತ್ರಿಕ ಸಲಹೆಗಾರ ಪಿ. ಬಿ. ಅಡ್ವಾನಿ ಅಮೇರಿಕಾಗೆ ಹೋಗಿ ಅಲ್ಲಿಂದ ವಿಮಾನದಲ್ಲಿ ಭಾರತಕ್ಕೆ ಬರುತ್ತಿದ್ದರು. ಇವರ ಪಕ್ಕದಲ್ಲಿ ವಿಮಾನ ಕಟ್ಟುವ ತಜ್ಞ ಪಾವ್‌ಲೆ ಕುಳಿತಿದ್ದರು. ಚೀಣದಲ್ಲಿ ವಿಮಾನ ಕಾರ್ಖಾನೆ ಸ್ಥಾಪಿಸುವ ಬಗೆಗೆ ಸಲಹೆ ನೀಡಲು ಇವರು ಹೊರಟಿದ್ದರು. ಇಂಥ ಕಾರ್ಖಾನೆ ಭಾರತದಲ್ಲಿ ಸ್ಥಾಪಿಸಲು ಸೂಕ್ತ ಯೋಜನೆ ಕಳುಹಿಸಿ ಕೊಡುವಂತೆ ಪಾವ್‌ಲೆ ಅವರನ್ನು ಅಡ್ವಾನಿ ಕೋರಿದರು. ಅಂತೆಯೇ ಅವರು ಕಳುಹಿಸಿ ಕೊಟ್ಟರು. ಕಾರ್ಖಾನೆ ಸ್ಥಾಪಿಸಲು ಮೊದಲು ಸೇನಾ ದಂಡನಾಯಕರ ಒಪ್ಪಿಗೆ ಅಗತ್ಯವಾಗಿತ್ತು. ಆರು ತಿಂಗಳಾದರೂ ಕೋರಿಕೆಯ ಪತ್ರಕ್ಕೆ ಅವರು ಉತ್ತರ ದಯಪಾಲಿಸಲಿಲ್ಲ, ಭೇಟಿ ಕೊಡಲಿಲ್ಲ. ಆದರೆ ಡನ್ಕರ್ಕಿನ ದುರಂತ ತನ್ನ ಕಠಿಣ ಧೋರಣೆ ಬದಲಾಯಿಸುವಂತೆ ಬಲವಂತ ಪಡಿಸಿತು. ಜಹಜಿಗಿಂತ ವಿಮಾನ ಹೆಚ್ಚು ಅಗತ್ಯವಾಗಿತ್ತು ಇಂಗ್ಲೆಂಡಿಗೆ. ಜಹಜು ಕಟ್ಟೆಯ ಕೆಲಸ ನಿಲ್ಲಿಸಿ ವಿಮಾನ ಕಾರ್ಖಾನೆ ಸ್ಥಾಪಿಸುವ ಕೆಲಸ ಕೂಡಲೇ ಕೈಗೊಳ್ಳುವಂತೆ ಇಂಡಿಯಾ ಸರ್ಕಾರ ವಾಲ್‌ಚಂದ್ ಹೀರಾಚಂದರಿಗೆ ತಿಳಿಸಿತು. ಅಡಚಣೆಗಳು ಮಾಯವಾದುವು. ಈ ಕಾರ್ಯ ತೀವ್ರಗತಿಯಿಂದ ಸಾಗಲು ಡೌ ಎಂಬ ಅಧಿಕಾರಿಯನ್ನು ಸರ್ಕಾರ ನೇಮಿಸಿತು. ಕೇಬಲ್ ಕಳುಹಿಸಿ ಅಮೇರಿಕದಿಂದ ತಜ್ಞ ಪಾವ್‌ಲೆ ಅವರನ್ನು ಬರಮಾಡಿಕೊಳ್ಳಲಾಯಿತು. ಕೆಲವು ತಾಂತ್ರಿಕರೊಡನೆ ಅವರು ಬಂದರು.

ಹೀರಾಚಂದ್ ಕಂಪನಿಯ ಎಂಜಿನಿಯರ್ ಎಂ. ಎಚ್. ಷಾ, ವಿಶಾಖಪಟ್ಟಣದಲ್ಲಿ ಹಡಗು ಕಟ್ಟೆಯ ಕಟ್ಟೋಣದಲ್ಲಿ ತೊಡಗಿದ್ದರು. ವಿಮಾನ ಕಾರ್ಖಾನೆಯನ್ನು ಬೊಂಬಾಯಿಯಲ್ಲಿ ಸ್ಥಾಪಿಸಲು ತೀರ್ಮಾನಿಸಲಾಗಿತ್ತು. ಸಮುದ್ರತೀರದ ಬೊಂಬಾಯಿಯಲ್ಲಿ ಕಾರ್ಖಾನೆ ಕಟ್ಟಲು ತೀರ್ಮಾನಿಸಲಾಗಿತ್ತು. ಸಮುದ್ರ ತೀರಪ್ರದೇಶ ಈ ಬಗೆಯ ಕಾರ್ಖಾನೆ ಕಟ್ಟಲು ಸೂಕ್ತವಲ್ಲ, ಸುರಕ್ಷಿತವಲ್ಲ. ವಿಮಾನ ಮತ್ತು ನೌಕಾ ಧಾಳಿಗೆ ಸುಲಭವಾಗಿ ಬಲಿಯಾಗಬಲ್ಲದೆಂದು ಸರ್ ಎಂ. ವಿಶ್ವೇಶ್ವರಯ್ಯನವರೂ ಮೈಸೂರಿನ ಆಗಿನ ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲರೂ ಇಂಡಿಯಾ ಸರ್ಕಾರದ ಮನವೊಲಿಸುವುದರಲ್ಲಿ ಯಶಸ್ವಿಯಾದರು. ಸಮುದ್ರತೀರದಿಂದ ದೂರವಿರುವ ಉತ್ತಮ ಹವಾಗುಣ ಹೊಂದಿರುವ ಬೆಂಗಳೂರಿಗೆ ಬನ್ನಿ ಎಂದು ಮಿರ್ಜಾ ಆಹ್ವಾನಿಸಿದರು. ಕಾರ್ಖಾನೆಗೆ ಸಕಲ ಸೌಲಭ್ಯ ನೀಡುವ ಭರವಸೆ ನೀಡಿದರು. ಭೂಮಿ, ನೀರು, ವಿದ್ಯುತ್ ಮತ್ತು ಧನಸಹಾಯ ನೀಡುವ ಮಾತು ಕೊಟ್ಟಿತು ಮೈಸೂರು ಸರ್ಕಾರ. ಹಿಂದುಸ್ಥಾನ್ ವಿಮಾನ ಕಾರ್ಖಾನೆ ಲಿಮಿಟೆಡ್ ಕಂಪನಿಯಾಗಿ ಅಸ್ತಿತ್ವಕ್ಕೆ ಬಂತು. ಮೈಸೂರು ಸರ್ಕಾರ ಪಾಲುಗಾರಿಕೆ ಪಡೆಯಿತು. ಷೇರುಗಳನ್ನು ಕೊಂಡಿತು. 1,000 ಎಕರೆ ಜಮೀನು ಕೊಟ್ಟಿತು. ನೀರು, ವಿದ್ಯುತ್ ಒದಗಿಸಿತು. ವಿಶಾಖಪಟ್ಟಣದಿಂದ ಎಂ. ಎಚ್. ಷಾ ಅವರನ್ನು ಬರಮಾಡಿಕೊಳ್ಳಲಾಯಿತು. ಕೃಷ್ಣರಾಜ ಪ್ರಭುಗಳ ಮತ್ತು ದಿವಾನ್ ಮಿರ್ಜಾ ಅವರ ಚಾಕಚಕ್ಯತೆಯಿಂದ ಬಂದ ಅಡಚಣೆಗಳು ನಿವಾರಿತವಾದುವು. ಏಷ್ಯದಲ್ಲೇ ಅತಿ ದೊಡ್ಡ ಕಾರ್ಖಾನೆ ಎನಿಸಿಕೊಂಡಿರುವ ವಿಮಾನ ಕಾರ್ಖಾನೆ ಸ್ಥಾಪಿತವಾದುದರ ಹಿನ್ನೆಲೆ ಇದು.

ತಮ್ಮ ಪ್ರಯತ್ನದಿಂದ ವಾಲ್‌ಚಂದ್ ಹೀರಾಚಂದರಿಗೆ ಭಾರತದಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸಲು ಸಾಧ್ಯವಾಗದೆ ಹೋದರೂ, ವಿಮಾನ ಕಾರ್ಖಾನೆ ಸ್ಥಾಪಿಸಲು ಅವರಿಗೆ ದೊರೆತ ಅವಕಾಶಕ್ಕಾಗಿ ವಿಶ್ವೇಶ್ವರಯ್ಯನವರು ಹಿಗ್ಗಿದರು. ಹರ್ಷ ವ್ಯಕ್ತಪಡಿಸುವ ತಂತಿ ಹೀರಾಚಂದರಿಗೆ ಕಳುಹಿಸಿದರು. ಕಾರ್ಖಾನೆಗೆ ಅಗತ್ಯವಾದ ಕಟ್ಟಡಗಳ ಕೆಲಸ ಪ್ರಾರಂಭಿಸಲು ವಿಶಾಖಪಟ್ಟಣದಿಂದ ಷಾ ಬೆಂಗಳೂರಿಗೆ ಬಂದರು. ಕಟ್ಟೋಣ ಪ್ರಾರಂಭವಾಯಿತು. ವಿಶ್ವೇಶ್ವರಯ್ಯನವರ ಉತ್ಸಾಹ ಹೇಳತೀರದು. ಪ್ರತಿದಿನ ಕೆಲಸದ ಪ್ರಗತಿ ನೋಡಲು ಮೋಟಾರಿನಲ್ಲಿ ಅತ್ತ ಹೋಗುವರು. ಸುಂಕದ ಕಟ್ಟೆ ಬಳಿ ಮೋಟಾರು ನಿಲ್ಲಿಸಿ ಒಂದು ಮೈಲು ಸರಸರನೆ ನಡೆದು ಕ್ರಮಿಸುವರು. ಇಷ್ಟಕ್ಕೆ ಇವರೇನೂ ಸಂಭಾವನೆ ಪಡೆಯುವ ಮೇಲ್ವಿಚಾರಕರಲ್ಲ. ದೇಶಕ್ಕೆ ಸದವಕಾಶ ದೊರೆಯಿತಲ್ಲ ಎಂಬ ಸಮಾಧಾನ. ವಿಮಾನ ನಿರ್ಮಾಣದಲ್ಲಿ ಅಗತ್ಯವಾದ ಭಾಗಗಳು ಎಲ್ಲಿಂದ ಬರುತ್ತವೆ? ಉಕ್ಕು ಭದ್ರಾವತಿಯಲ್ಲಿ ತಯಾರಿಸಬಹುದಲ್ಲ? ಹೀಗೆ ಪ್ರಶ್ನಿಸುವರು, ಷಾ ಅವರನ್ನು. ರೆಕ್ಕೆಗಳಿಗೆ ಡ್ಯೂರಾಲುಮಿನ್ ಮಿಶ್ರಲೋಹ ಬೇಕು ಎಂದು ಷಾ ತಿಳಿಸಿದಾಗ. ಭದ್ರಾವತಿಯಲ್ಲಿ ತಯಾರಿಸಬಹುದಲ್ಲ? ಭದ್ರಾವತಿ ಬಳಿಯಲ್ಲೇ ಕಾರ್ಖಾನೆ ಸೂಕ್ತವಲ್ಲವೇ? ಮರ, ಜಲ, ಲೋಹ, ವಿದ್ಯುತ್ ಎಲ್ಲ ಸೌಲಭ್ಯ ಅಲ್ಲಿದೆಯಲ್ಲ ಎನ್ನುವರು. ಪ್ರಶ್ನೆಗಳ ಸುರಿಮಳೆಯೇ ಆಗುವುದು. ಈಗ

ಉತ್ತರಿಸಲು ಸಾಧ್ಯವಿಲ್ಲದಿದ್ದರೆ, ಪ್ರಶ್ನೆ ಬರೆದುಕೊಂಡು ಸಮಾಲೋಚಿಸಿ ಸಾವಧಾನವಾಗಿ ಉತ್ತರ ಕೊಡಿ ಎನ್ನುವರು.

"ಷಾ, ನಿಮಗೆ ಬಿಡುವಿಲ್ಲದ ಕೆಲಸ. ನಿಮ್ಮ ವೇಳೆ ನಾನು ತೆಗೆದುಕೊಳ್ಳುವುದು ಹಿತವಲ್ಲ. ಆದಕಾರಣ, ಇನ್ನು ಮುಂದೆ ನಾನು ಪ್ರತಿ ಶನಿವಾರ ಸಂಜೆ 5 ಘಂಟೆಗೆ ಬರುವೆ" ಎಂದು ಗೊತ್ತುಮಾಡಿಕೊಂಡರು. ಪ್ರತಿ ಶನಿವಾರ ಸಂಜೆ 5ಕ್ಕೆ ಹತ್ತು ನಿಮಿಷಕ್ಕೆ ಮೊದಲು "ನಾನು ಬರಲೇ, ಬಿಡುವಾಗಿದ್ದೀರಾ" ಎಂದು ಟೆಲಿಫೋನ್ ಮಾಡುವರು. ವಯೋವೃದ್ಧರೂ, ಜ್ಞಾನವೃದ್ಧರೂ ಆದ ವಿಶ್ವೇಶ್ವರಯ್ಯನವರ ಅದಮ್ಯ ಉತ್ಸಾಹ, ಸಯವಿನಯ ನಡತೆ, ಉನ್ನತ ಚಾರಿತ್ರ್ಯ, ವಿಮಾನದ ಬಗೆಗೆ ಅವರು ಸಂಗ್ರಹಿಸಿದ್ದ ವಿಷಯ ತನ್ನನ್ನು ನಾಚಿಸುವಂತಿತ್ತು ಎಂದಿರುತ್ತಾರೆ ಷಾ.

ಬೃಹತ್ ವಿಮಾನ ಕಾರ್ಖಾನೆ ಹಲವಾರು ಸಣ್ಣ ಉದ್ಯಮಗಳ ಸ್ಥಾಪನೆಗೆ ಅವಕಾಶ ನೀಡಿದೆ. ಸಾವಿರಾರು ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಿಕೊಟ್ಟಿದೆ. ಭಾರತೀಯರ ತಂತ್ರಜ್ಞಾನಕ್ಕೆ ಪ್ರೋತ್ಸಾಹ ನೀಡುತ್ತಿದೆ. ಒಂದು ಕಾರ್ಖಾನೆಯಿಂದ ವಿಶ್ವೇಶ್ವರಯ್ಯನವರು ತೃಪ್ತರಾಗಲಿಲ್ಲ. ಇಂಥ ಹಲವಾರು ಕಾರ್ಖಾನೆಗಳು ಸ್ಥಾಪಿತವಾಗಬೇಕೆಂದು ಆಶಿಸುತ್ತಿದ್ದರು.

# 18. ಮಹೋನ್ನತರು

"ನನ್ನ ನಿಶ್ಚಿತ ಅಭಿಪ್ರಾಯ ಎಂತೇ ಇರಲಿ. ನಿಮ್ಮ ಸಹಕಾರ ದೊರೆಯುವ ಒಳ್ಳೆಯ ಅದೃಷ್ಟ ನನ್ನ ಪಾಲಿಗೆ ಲಭಿಸಲಿ ಅಥವಾ ನಿಮ್ಮ ಪ್ರಾಮಾಣಿಕ ವಿರೋಧ ಎದುರಿಸ ಬೇಕಾದ ಸನ್ನಿವೇಶ ಪ್ರಾಪ್ತವಾಗಲಿ, ನಿಮ್ಮ ಶ್ರೇಷ್ಠ ಸಾಮರ್ಥ್ಯ, ದೇಶಪ್ರೇಮ—ಇವು ಗಳಲ್ಲಿ ನನಗಿರುವ ಅತ್ಯುನ್ನತ ಗೌರವಕ್ಕೆ ಕುಂದು ಎಂದೂ ಬಾರದು."

ಈ ವಾಕ್ಯಗಳನ್ನು ಬರೆದಿರುವವರು ಸಾಮಾನ್ಯ ವ್ಯಕ್ತಿ ಅಲ್ಲ. ಅಸಾಮಾನ್ಯ ವಿಶ್ವ ಖ್ಯಾತಿ ಗಳಿಸಿದ ಮಹಾತ್ಮ ಗಾಂಧಿ.

ಮೋಹನದಾಸ ಕರಮಚಂದ್ ಗಾಂಧಿ ಸಾಮಾನ್ಯ ವ್ಯಕ್ತಿಯಾಗಿ ಜನಿಸಿ ತಮ್ಮ ಚಿಂತನ, ಶಕ್ತಿಸಾಮರ್ಥ್ಯ, ಕ್ರಿಯೆಗಳಿಂದ 'ಮಹಾತ್ಮ' ಎಂದು ಲೋಕವಿಖ್ಯಾತ ರಾದರು. ಅವರಿಗೆ ಸಮಾನರಾದ ಮತ್ತೊಬ್ಬರನ್ನು ದೃಷ್ಟಾಂತರಿಸುವುದು ದುಸ್ಸಾಧ್ಯ. 'ಗಗನಂ ಗಗನಾಕಾರಂ, ಸಾಗರಂ ಸಾಗರೋಪಮ' ಎಂಬಂತೆ ಸಾಟಿ ಇಲ್ಲದ 'ಮಹಾ–ಆತ್ಮ' ಅವರು.

ಗಾಂಧೀಜಿ ಮತ್ತು ದೀರ್ಘ ಕಾಲ ಸಾರ್ಥಕ ಜೀವನ ನಡೆಸಿದ ವಿಶ್ವೇಶ್ವರಯ್ಯನವರು ಸಮಕಾಲೀನರು. ಇವರದೂ ಮಹೋನ್ನತ ವ್ಯಕ್ತಿತ್ವ. ವೃತ್ತಿ ಧೋರಣೆ ಭಿನ್ನವಿದ್ದರೂ ಪರಸ್ಪರ ಗೌರವಕ್ಕೆ ಚ್ಯುತಿ ಬರಲಿಲ್ಲ. ಗಾಂಧೀಜಿ 'ಸತ್ಯಶೋಧನೆ' ಎಂಬ ಅನ್ವರ್ಥ ನಾಮದಲ್ಲಿ ತಮ್ಮ ಆತ್ಮಕಥೆ ಬರೆದಿರುತ್ತಾರೆ. ಇದು ಅಪೂರ್ಣ. ನನ್ನ 'ಉದ್ಯೋಗ ಜೀವನದ ನೆನಹುಗಳು' ಎಂಬ ಶೀರ್ಷಿಕೆಯ ಸಣ್ಣ ಪುಸ್ತಕದಲ್ಲಿ ತಾವು ಮಾಡಿದ ಕೆಲಸ ಗಳ ನಿದರ್ಶನಗಳನ್ನು ಮಾತ್ರ ನಿರೂಪಿಸಿರುತ್ತಾರೆ ವಿಶ್ವೇಶ್ವರಯ್ಯನವರು. ಆತ್ಮ ಪ್ರಶಂಸೆಯ ಉತ್ಪ್ರೇಕ್ಷಿತ ಒಂದು ಮಾತೂ ಇದರಲ್ಲಿ ಕಾಣಸಿಗದು.

ಗಾಂಧೀಜಿಯವರ ಆತ್ಮಕಥನ ಅಪೂರ್ವ ಶ್ರೇಣಿಗೆ ಸೇರಿದ, ಕಹಿಸಿಹಿಗಳನ್ನು ಮರೆ ಮಾಚದ, ತಪ್ಪು ನೆಪ್ಪುಗಳನ್ನು ತಿಳಿಸುವ, ಸತ್ಯಾಂಶಗಳನ್ನು, ಜೀವನದ ಆಗುಹೋಗು ಗಳನ್ನು ಯಥಾವತ್ತಾಗಿ ನಿರೂಪಿಸುವ ಆತ್ಮಕಥೆ. ಮೋಕ್ಷ ಸಾಧನೆ ಇವರ ಜೀವನ ಧ್ಯೇಯ. ದೇಶಸೇವೆಯೂ ಈಶಸೇವೆಯೆಂದು ತಿಳಿಯುತ್ತ, ಸತ್ಯಶೋಧನೆಯ ಅವಿರತ ಪ್ರಯತ್ನದಲ್ಲಿ ತೊಡಗಿ, ಹಿಮಗಿರಿಯ ಶಿಖರದಂತೆ ಅತ್ಯುನ್ನತ ಮಟ್ಟಕ್ಕೆ ಏರಿ ವಿಶ್ವ ಮಾರ್ಗದರ್ಶಕರಾದರು.

ತಮ್ಮದೇ ಆದ ನಿಷ್ಠುರ ಕ್ರಮಗಳನ್ನು ರೂಪಿಸಿಕೊಂಡು, ಅದರ ಚೌಕಟ್ಟಿನಲ್ಲಿ, ಭಾರತ ಪ್ರಗತಿ ಮತ್ತು ಪುನರುದ್ಧಾರಕ್ಕಾಗಿ, ಪಾಶ್ಚಾತ್ಯರ ವ್ಯವಸ್ಥಿತ ವೈಜ್ಞಾನಿಕ ಪದ್ಧತಿ ನಮ್ಮ ದೇಶದ ಪರಿಸ್ಥಿತಿಗೆ ಹೊಂದಿಸಿಕೊಂಡು ಅನುಸರಿಸುವುದರಿಂದ ಮಾತ್ರ ದೇಶದ ಪುನರುದ್ಧಾರವಾದೀತು ಎಂದು ನಂಬಿ ಅದರಂತೆ ನಡೆದು ತೋರಿದ ವ್ಯಕ್ತಿ ವಿಶ್ವೇಶ್ವರಯ್ಯ.

ಧ್ಯೇಯ ಸಾಧನೆಗೆ ಉಭಯತ್ರರು ಅನುಸರಿಸುತ್ತಿದ್ದ ಮಾರ್ಗ ಪ್ರತ್ಯೇಕ. ಪಥದಲ್ಲಿ ಮಾತ್ರವಲ್ಲ, ದೃಷ್ಟಿಯಲ್ಲೂ ಭಿನ್ನ. ಅತ್ಯಂತ ದೀನದಲಿತರನ್ನೂ ತನ್ನಲ್ಲಿ ಕಾಣುವ ತಾದಾತ್ಮ್ಯಭಾವನೆ ಗಾಂಧಿಯವರ ಲಕ್ಷಣ. ದರಿದ್ರನಾರಾಯಣನ ಮೂರ್ತಿಸ್ವರೂಪಿ. ವಿಶ್ವಕುಟುಂಬಿ. ಅತ್ಯಂತ ದರಿದ್ರನು ಪಡೆಯಲಾರದುದನ್ನು ತಾನು ಪಡೆದಿರಲಾಗದು. ಇದು ಅವರ ಅಳತೆಗೋಲು. 'ತುಂಡು ಮುಂಡು ಫಕೀರಿ' ಎಂದು ಇಂಗ್ಲೆಂಡಿನ ಮಹಾ ಪ್ರಧಾನಿ ಚರ್ಚಿಲ್ಲರ ಅಪಹಾಸ್ಯಕ್ಕೆ ಗುರಿಯಾದ ವ್ಯಕ್ತಿ. "ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ದುಂಡುಮೇಜಿನ ಪರಿಷತ್ತಿಗೆ ನೀವು ಹೋಗುತ್ತಿರುವಿರಿ. ಆದಕಾರಣ ಇದರ ಅಂತಸ್ತಿಗೆ ಅನುಗುಣವಾದ ಉಡುಪು ಧರಿಸುವುದು ಸೂಕ್ತ" ಎಂದು ವಿಶ್ವೇಶ್ವರಯ್ಯನವರು, ಮಹಾತ್ಮರಿಗೆ ಬರೆದು ತಿಳಿಸಿದರು. ಇದಕ್ಕೆ ಪ್ರತಿಯಾಗಿ ವಿಶ್ವೇಶ್ವರಯ್ಯನವರು ಸರಿಯಾಗಿ ಒಗೆದು, ಗರಿಗರಿ ಇಸ್ತ್ರಿ ಮಾಡಿದ ಶ್ರೇಷ್ಠ ದರ್ಜೆಯ ಉತ್ತಮ ಉಡುಪು ತೊಡುತ್ತಿದ್ದರು. ಉಟ್ಟ ಮೇಲೆ ಉಡುಪು ಇಸ್ತ್ರಿಯಾಗುತ್ತಿದ್ದೋ, ಇಸ್ತ್ರಿಯಾದ ಉಡುಪು ಇವರು ತೊಡುತ್ತಾರೋ ಎಂದು ಮದರಾಸಿನ ಪ್ರಧಾನಿ ಸಿ. ರಾಜಗೋಪಾಲಾಚಾರ್ಯರು ಹಾಸ್ಯ ಮಾಡುವರು.

ಅಂತ್ಯಕಾಲದವರೆಗೂ ಮಾನವನಿಗೆ ಉತ್ತಮವಾದ ಸಸ್ಯಾಹಾರ ಕುರಿತು ತನ್ನ ಮೇಲೆ ಪ್ರಯೋಗ ಮಾಡಿಕೊಳ್ಳುತ್ತಿದ್ದರು. ಅಮೃತವೆನಿಸಿಕೊಳ್ಳುವ ಆಕಳ ಹಾಲು ಕೂಡ ಪ್ರಾಣಿಜನ್ಯವಲ್ಲವೇ ಎಂಬ ಸಂದೇಹ. ಇದಕ್ಕೆ ಪ್ರತಿಯಾದ ಆಹಾರ ಶೋಧಿಸಲು ಪ್ರಯತ್ನಿಸುತ್ತಿದ್ದರು. ಐದು ವ್ಯಂಜನಗಳಿಗಿಂತ ಅಧಿಕ ಮಿಶ್ರಿತವಾದ ಆಹಾರ ಉಣರು. ಬೀಸುಕಲ್ಲಿನಲ್ಲಿ ಅರೆದು ಮಾಡಿದ ಹಿಟ್ಟು ಕುಟ್ಟಿದ ಅಕ್ಕಿ, ಬೆಲ್ಲ ಸೇವಿಸುವರು. ಸಕ್ಕರೆ ಕೂಡದು.

ವಿಶ್ವೇಶ್ವರಯ್ಯನವರೂ ಮಿತ ಆಹಾರಿ. ತೂಕ ಮಾಡಿದಂತೆ ಊಟ. ಒಂದು ಮಿಳ್ಳೆ ಹೆಚ್ಚು ಕಡಿಮೆ ಆಗದು. ನಿರ್ದಿಷ್ಟ ವೇಳೆಗೆ ಊಟ. ಭೋಜನಕೂಟಗಳಲ್ಲಿ ಊಟ, ಉಪಾಹಾರ ಸೇವಿಸರು.

ಇಬ್ಬರೂ 'ಸ್ವದೇಶಿ' ಭಕ್ತರು. 'ಸ್ವದೇಶಿ' ಎಂದರೆ ಸ್ವದೇಶದಲ್ಲೇ ತಯಾರಾದ ಮಾಲು. ಆದರೆ ಈರ್ವರ ದೃಷ್ಟಿಯಲ್ಲಿ 'ಸ್ವದೇಶಿ'ಯ ವ್ಯಾಖ್ಯಾನ ಸ್ವಲ್ಪ ಭಿನ್ನತೆ ಉಂಟು. ಸಂಪೂರ್ಣವಾಗಿ ನಮ್ಮ ದೇಶದಲ್ಲೇ ತಯಾರಾದ ವಸ್ತು ಮಾತ್ರ

ಗಾಂಧೀಜಿ ಬಳಸುವರು. ಗ್ರಾಮೀಣ ವಸ್ತುಗಳಿಗೆ ಆದ್ಯ ಸ್ಥಾನ. ನಮ್ಮ ದೇಶದಲ್ಲಿ ತಯಾರಾಗದಿದ್ದ ಅಗತ್ಯವೆನಿಸಿಕೊಂಡ ಅನೇಕ ವಸ್ತುಗಳನ್ನು ಅವರು ಬಳಸರು. ಸಾಬೂನು, ಗುಂಡುಸೂಜಿ, ಫೌಂಟನ್ ಪೆನ್ ಮೊದಲಾದ ವಸ್ತುಗಳು ನಮ್ಮ ದೇಶದಲ್ಲಿ ತಯಾರಾಗುವ ವರೆಗೆ ಅವರು ಉಪಯೋಗಿಸುತ್ತಿರಲಿಲ್ಲ. ವಿದೇಶೀ ಮಾಲು ದೊರೆತರೂ ಬಳಸದೆ ಆಗುತ್ತಿದ್ದ ತೊಂದರೆ ಅನುಭವಿಸುತ್ತಿದ್ದರು.

ವಿಶ್ವೇಶ್ವರಯ್ಯನವರೂ ಸ್ವದೇಶಿ ಭಕ್ತರೇ. ಆದರೆ ಅವರ ಸ್ವದೇಶಿ ಪ್ರೇಮ, ಗಾಂಧಿಯವರಂತೆ, ಅದರ ಅಭಾವದಿಂದಾಗುವ ಅನಾನುಕೂಲ ಸಹಿಸಿಕೊಳ್ಳುವಷ್ಟು ದೂರ ಹೋಗದು. ಸ್ವದೇಶಿ ಆಗಲಿ, ವಿದೇಶಿ ಆಗಲಿ ಅವರು ಅಪೇಕ್ಷಿಸುತ್ತಿದ್ದುದು ಉತ್ತಮ ದರ್ಜೆಯ ಮಾಲು. ಕಳಪೆ ಆದರೂ ಸ್ವದೇಶಿಯನ್ನೇ ಬಳಸಬೇಕೆಂಬ ಉತ್ಕಟತೆ ಅವರಲ್ಲಿ ಇರಲಿಲ್ಲ. ತನ್ನ ಕೈಯಾರೆ ಮಾಡಿದ ನೂಲಿನಿಂದ, ಕೈಮಗ್ಗದಲ್ಲಿ ತಯಾರಾದ ಒರಟುಮೊರಟು ಖಾದಿ ಗಾಂಧೀಜಿ ಬಳಸುವರು. ಕಡೆಕಡೆಗೆ ಹೊಲಿದ ಬಟ್ಟೆ ತೊಡುವುದನ್ನೂ ಬಿಟ್ಟರು. ವಿದೇಶೀ ವಸ್ತ್ರ ದಹನವೂ ವಿದೇಶೀ ವಸ್ತು ಬಹಿಷ್ಕಾರದಲ್ಲಿ ಒಂದಾಗಿತ್ತು.

ಗೃಹಕೈಗಾರಿಕೆ, ಗ್ರಾಮೋದ್ಯೋಗ, ನೂಲುವುದು, ನೇಯುವುದು ಇವೇ ಮೊದಲಾದ ಗ್ರಾಮೋದ್ಯೋಗಗಳಿಂದ ಗ್ರಾಮೀಣರ ಬಡತನ ಹೋಗಲಾಡಿಸಬಹುದೆಂದು ಗಾಂಧಿಯವರ ನಂಬಿಕೆ. ಇದಕ್ಕೆ ಅಗತ್ಯವಾದ ಬಂಡವಾಳ ಅತ್ಯಲ್ಪ.

ಕೇವಲ ಗ್ರಾಮೋದ್ಯೋಗಗಳಿಂದ ಮಾತ್ರ ದೇಶದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗದು. ಮೂಲ ಕೈಗಾರಿಕೆಗಳಿಗೆ ಆದ್ಯತೆ ಅಗತ್ಯ. ಮೂಲಕೈಗಾರಿಕೆಗಳಿಲ್ಲದೆ ಇತರ ಕೈಗಾರಿಕೆಗಳು ವೃದ್ಧಿಸಲಾರವು. ಇದು ವಿಶ್ವೇಶ್ವರಯ್ಯನವರ ನಿಲುವು.

ಯಂತ್ರದ ಅತಿ ಬಳಕೆ, ಔದ್ಯೋಗೀಕರಣ ಇವುಗಳ ವಿರೋಧಿ ಗಾಂಧೀಜಿ. ಯಂತ್ರವು, ಯಂತ್ರೋದ್ಯಮವು ಅದರ ಮಾಲೀಕನು ಸಾವಿರಾರು ಜನರ ಶಕ್ತಿ ಶೋಷಿಸಲು ನೆರವಾಗುತ್ತದೆ. ಯಂತ್ರವು ನಾಗರಿಕ ಮಾನವನಿಗೆ ಅಗತ್ಯವಾದುದೇ. ಆದರೆ ಅದು ಜಟಿಲವಿರಬಾರದು. ಶೋಷಣೆಗೆ ಎಡೆಗೊಡಬಾರದು. ಈ ದೇಹವೂ ಅತಿ ಸೂಕ್ಷ್ಮವೂ ಜಟಿಲವೂ ಆದ ಯಂತ್ರ. ಮುಕ್ತಿ ಸಾಧನೆಗೆ ಅಡ್ಡ. ಹೀಗೆಂದು ಆತ್ಮಹತ್ಯೆ ಮಾಡಿಕೊಳ್ಳಬಹುದೇ? ದೇಹ ಹೇಗೆ ಅಗತ್ಯವೋ, ಯಂತ್ರವೂ ಅಷ್ಟೇ ಅಗತ್ಯ. ಅನಿವಾರ್ಯ. ಯಂತ್ರೋದ್ಯಮ, ಯಂತ್ರಸಮೂಹ ಕೇಂದ್ರೀಕರಣಕ್ಕೆ ಎಡೆಗೊಡುತ್ತದೆ. ಅದರ ಮಾಲೀಕತ್ವ ಕೆಲವೇ ವ್ಯಕ್ತಿಗಳ ಅಧೀನವಾಗಲು ಅವಕಾಶ ಕೊಡುತ್ತದೆ. ಯಂತ್ರ ಮಾನವನ ಸೇವಕನಾಗುವುದಕ್ಕೆ ಪ್ರತಿಯಾಗಿ, ಮಾನವನೇ ಯಂತ್ರದ ಗುಲಾಮನಾದಾನು ಎಂದು ಎಚ್ಚರಿಸುತ್ತಿದ್ದರು ಗಾಂಧೀಜಿ. ಔದ್ಯೋಗೀಕರಣದಿಂದ ಆಗುವ ಅನಾಹುತಗಳಿಗೆ ಗಾಂಧೀಜಿ ಅಂಜುತ್ತಿದ್ದರು.

ವಿಶ್ವೇಶ್ವರಯ್ಯನವರಿಗೆ ಮೋಟಾರು, ವಿದ್ಯುತ್, ವಿಮಾನ ಇವು ಆಧುನಿಕ ನಾಗರಿಕತೆಯ ಆವಶ್ಯಕತೆಗಳಾಗಿದ್ದುವು. ಮೋಟಾರು ವಾಹನ ವಿಶ್ವೇಶ್ವರಯ್ಯನವರ ಆರ್ಥಿಕ ದೃಷ್ಟಿಯ ಸಂಕೇತ ಎನ್ನಬಹುದು. ಇದಕ್ಕೆ ಪ್ರತಿಯಾಗಿ ರಾಟೆ ಮಹಾತ್ಮರ ಆರ್ಥಿಕ ಧೋರಣೆಯ ಸಂಕೇತ. ಇಬ್ಬರೂ ಮಹಾನ್ ದೇಶಭಕ್ತರು. ಒಬ್ಬರು ವಿಶ್ವಕ್ಕೇ ನೂತನ ಸತ್ಯ ಅಹಿಂಸೆಯ ಮಾರ್ಗದರ್ಶನ ನೀಡಿದ ಮಹಾತ್ಮರು. ಇನ್ನೊಬ್ಬರು ಅಣೆಕಟ್ಟು, ಕೈಗಾರಿಕೋದ್ಯಮಗಳಿಂದ ಅನ್ನ, ವಸ್ತ್ರ, ವಸತಿ ನೀಡಿ ಬಹುಜನರ ಬಡತನ ನಿವಾರಿಸಿದ ಭಾರತರತ್ನ.

ಗಾಂಧೀಜಿ ಮತ್ತು ವಿಶ್ವೇಶ್ವರಯ್ಯ ಉಭಯತ್ರರೂ ದೇಶದ ಸ್ವಾವಲಂಬನೆ ಬಯಸುತ್ತಿದ್ದರು. ದೇಶರಕ್ಷಣೆಯ ಯಂತ್ರೋಪಕರಣಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದುದನ್ನು ವಿಶ್ವೇಶ್ವರಯ್ಯನವರು ತೀವ್ರವಾಗಿ ಖಂಡಿಸಿರುತ್ತಾರೆ. ಯುದ್ಧೋಪಕರಣಗಳನ್ನು ಇಲ್ಲಿಯೇ ತಯಾರಿಸಲು ಬೇಕಾದ ಅಗತ್ಯ ಕಾರ್ಖಾನೆಗಳನ್ನು ಇಲ್ಲಿಯೇ ಸ್ಥಾಪಿಸಬೇಕೆಂದು ಒತ್ತಾಯ ಮಾಡುತ್ತಿದ್ದರು. ದೊಡ್ಡ ಜಹಜುಗಳು, ಸಮರನೌಕೆಗಳು, ಜಲಾಂತರ್ಗಾಮಿ ನೌಕೆಗಳು, ವಿಮಾನ, ಟ್ಯಾಂಕ್, ಬಾಂಬರ್ ವಿಮಾನ, ಕ್ಷಿಪಣಿ, ಮೋಟಾರು, ಫಿರಂಗಿ, ಮದ್ದುಗುಂಡು ಎಲ್ಲವೂ ಇಲ್ಲಿಯೇ ತಯಾರಾಗಬೇಕು. ಮೋಟಾರು ಮತ್ತು ಸೈಕಲ್ ತಯಾರಿಸುವ ಕಾರ್ಖಾನೆಗಳನ್ನು ಸುಲಭವಾಗಿ ಯುದ್ಧೋಪಕರಣ ತಯಾರಿಸಬಹುದೆಂದು ಅವರು ಅರಿತಿದ್ದರು.

ಭಾರತ ಈಗ ಸ್ವತಂತ್ರವಾಗಿದೆ. ದೇಶರಕ್ಷಣೆ ನಮ್ಮ ಹೊಣೆಯಾಗಿದೆ. ಇದುವರೆಗೂ ಬ್ರಿಟನ್ನಿನ ಛತ್ರಛಾಯೆಯಲ್ಲಿ ಭಾರತ ಸುಭದ್ರವಾಗಿತ್ತು. ಅದೇ ಬ್ರಿಟನ್ ಈಗ ನಿರ್ಬಲವಾಗಿದೆ. ಯಾವ ರಾಷ್ಟ್ರವೇ ಆಗಲಿ ನಮ್ಮ ಮೇಲೆ ಧಾಳಿ ಮಾಡಬಂದರೆ, ಅದನ್ನು ಹಿಮ್ಮೆಟ್ಟಿಸುವ ಶಕ್ತಿ ನಾವು ಸ್ಥಾಪಿಸಿಕೊಳ್ಳಬೇಕು. ದುರ್ಬಲ ರಾಷ್ಟ್ರ ಪ್ರಬಲ ರಾಷ್ಟ್ರಕ್ಕೆ ವೀಳಯವಿತ್ತು ಆಹ್ವಾನಿಸಿದಂತೆ ಆದೀತು. ಜೋಕೆ, ಎಂದು ಎಚ್ಚರಿಸುತ್ತಿದ್ದರು. ಕಡ್ಡಾಯ ಮಿಲಿಟರಿ ಶಿಕ್ಷಣ ಕಾಲೇಜುಗಳಲ್ಲಿ ಜಾರಿಗೆ ತರಬೇಕು ಎನ್ನುತ್ತಿದ್ದರು.

ಯಂತ್ರೀಕರಣ, ಕೇಂದ್ರೀಕರಣದ ವಿರೋಧಿ ಗಾಂಧಿ. ಹೀಗೆ ಇವರೀರ್ವರ ದೃಷ್ಟಿ ಭಿನ್ನ. ಗ್ರಾಮ ಕೈಗಾರಿಕೆ ಬೆಳೆಸುವ ಉದ್ದೇಶದಿಂದ ಅಖಿಲ ಭಾರತ ಗ್ರಾಮೋದ್ಯೋಗ ಸಂಘ ಗಾಂಧೀಜಿ ಸ್ಥಾಪಿಸಿದರು. ಅವರೆ ಸಂಘದ ಅಧ್ಯಕ್ಷರು. ಪರಸ್ಪರ ದೃಷ್ಟಿ ಎಷ್ಟೇ ಭಿನ್ನವಿದ್ದರೂ, ವಿಶ್ವೇಶ್ವರಯ್ಯನವರ ಜ್ಞಾನಾನುಭವ ಪಡೆಯಲು ಈ ಸಂಘದ ಸಲಹಾ ಸಮಿತಿಯ ಸದಸ್ಯರಾಗಿರುವಂತೆ ಗಾಂಧೀಜಿ ಅವರನ್ನು ಆಹ್ವಾನಿಸಿದರು. ಎಲ್ಲ ಸಭೆಗಳಿಗೂ ಬರಬೇಕಾದ್ದಿಲ್ಲ. ಅವರು ಪರಿಣತಿ ಪಡೆದ ವಿಷಯದಲ್ಲಿ ಮಾತ್ರ ತಮ್ಮ ಸಲಹೆ ಅಪೇಕ್ಷಿಸಿದಾಗ ನೀಡಿದರೆ ಸಾಕೆಂದರು. ಅಷ್ಟು ಸೌಜನ್ಯ.

ಸಂಘದ ಸದಸ್ಯರಾಗಿರಲು ವಿಶ್ವೇಶ್ವರಯ್ಯನವರು ಸಮ್ಮತಿಸಲಿಲ್ಲ. ಸೇನೆಗೆ ಅಗತ್ಯವಾದ ಉಪಕರಣಗಳ ತಯಾರಿಕೆಯಲ್ಲಿ ಗ್ರಾಮೀಣರನ್ನು ಬಳಸಿಕೊಳ್ಳುವುದನ್ನು ತನ್ನಿಂದ ಒಪ್ಪಲು ಸಾಧ್ಯವಾಗದು ಎಂದು ಗಾಂಧೀಜಿ ಭಾವೋದ್ರೇಕದಿಂದ ಉತ್ತರಿಸಿದರು. "ನಿಮ್ಮ ಸಹಕಾರ ಪಡೆಯುವ ಸುಯೋಗ ನನಗೆ ಲಭಿಸಲಿ ಅಥವಾ ನಿಮ್ಮ ಪ್ರಾಮಾಣಿಕ ವಿರೋಧ ಎದುರಿಸಬೇಕಾಗಿ ಬರಲಿ, ನಿಮ್ಮಲ್ಲಿ ನನಗಿರುವ ಅಭಿಮಾನ ಏಕರೀತಿಯಾಗಿದ್ದೀತು, ಅದಕ್ಕೆ ಎಂದೂ ಲೋಪ ಬಾರದು" ಎಂದು ತಿಳಿಸಿದರು.

ಇಡೀ ದೇಶದ ಗೌರವಕ್ಕೆ ಪಾತ್ರರಾದ ಪೂಜ್ಯ ಗಾಂಧಿಯವರೊಡನೆ ಕತ್ತಿ ಮಸೆಯಲು ವಿಶ್ವೇಶ್ವರಯ್ಯನವರ ಮನ ಒಪ್ಪಲಿಲ್ಲ. ಮಹಾತ್ಮರಿಗೆ ಗ್ರಾಮಕೈಗಾರಿಕೆಗಳಲ್ಲಿ ಮಾತ್ರ ಒಲವು. ತನಗೆ ಗ್ರಾಮಕೈಗಾರಿಕೆ ಹಾಗೂ ಬೃಹತ್ ಯಂತ್ರೋದ್ಯಮ ಎರಡರಲ್ಲೂ ವಿಶ್ವಾಸ. ಭಿನ್ನತೆ ಇರುವುದು ಗುರಿ ಸಾಧಿಸುವ ಕ್ರಮದಲ್ಲಿ. ತಾನು ಸೂಚಿಸುತ್ತಿರುವ ಕ್ರಮದಿಂದ ಇತರ ರಾಷ್ಟ್ರಗಳು ಮುಂದುವರಿದಿವೆ. ಇದು ವಿಶ್ವೇಶ್ವರಯ್ಯನವರ ಧೋರಣೆಯ ನಮ್ರ ಉತ್ತರವಾಗಿತ್ತು.

ನಿಶ್ಶಸ್ತ್ರವಾಗಿ ಅಹಿಂಸಾತ್ಮಕ ಕ್ರಮದಿಂದ ದೇಶರಕ್ಷಣೆ, ಶಾಂತಿಪಾಲನೆ ಸಾಧ್ಯ ಎಂಬ ಮಹಾತ್ಮರ ವಾದದಲ್ಲಿ ವಿಶ್ವೇಶ್ವರಯ್ಯನವರಿಗೆ ವಿಶ್ವಾಸವಿರಲಿಲ್ಲ. ಸಕಲ ವಿಧ ಶಸ್ತ್ರಗಳಿಂದ ಸಜ್ಜಿತವಾಗಿ ಸೇನೆ ದೇಶ ಸದಾ ಸಿದ್ಧವಾಗಿರಬೇಕು. ಇದು ಅಯ್ಯನವರ ದೃಷ್ಟಿ. ದೀರ್ಘಾವಧಿಯ ನಿರಶನ ಕೈಗೊಂಡು ಗಾಂಧೀಜಿ ತಮ್ಮ ದೇಹಾರೋಗ್ಯ ಕೆಡಿಸಿಕೊಳ್ಳುವುದನ್ನು ವಿಶ್ವೇಶ್ವರಯ್ಯನವರು ಒಪ್ಪುತ್ತಿರಲಿಲ್ಲ. "ತಾವು ದೇಶದ ಆಸ್ತಿ. ತಮ್ಮ ದೇಹಾರೋಗ್ಯ ದೇಶದ ಹಿತದೃಷ್ಟಿಯಿಂದ ಕೆಡಿಸಿಕೊಳ್ಳುವುದು ವಿಹಿತವಲ್ಲ" ಎಂದು ಮಹಾತ್ಮರಿಗೆ ತಿಳಿಸಿರುತ್ತಾರೆ. ಆದರೆ ಬಹಿರಂಗವಾಗಿ ಮಹಾತ್ಮರನ್ನು ಟೀಕಿಸಲು ಅವರು ಒಪ್ಪುತ್ತಿರಲಿಲ್ಲ.

ವಿದೇಶಗಳಿಗೆ ಹಲವಾರು ಸಾರಿ ವಿಶ್ವೇಶ್ವರಯ್ಯನವರು ಹೋಗಿ ಬಂದಿದ್ದರೂ ಮಾಂಸ, ಮದ್ಯ, ಧೂಮಪಾನ ಇವುಗಳಿಂದ ದೂರವಾಗಿದ್ದರು. ಆದರೆ ದೇಶದ ಆರ್ಥಿಕ ಸ್ಥಿತಿ ಗಮನಿಸಿ, ಗಾಂಧಿಯವರ ಸಂಪೂರ್ಣ ಪಾನ ನಿರೋಧ ಜಾರಿಗೆ ತರುವುದು ಸಕಾಲಿಕವೇ ಎಂದು ಪ್ರಶ್ನಿಸಿರುವರು.

ಭದ್ರಾವತಿ ಕಬ್ಬಿಣ ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಕನ್ನಂಬಾಡಿ ಕಟ್ಟೆ ಮೊದಲಾದ ಯೋಜನೆಗಳು ಸಂಸ್ಥಾನದ ಬೊಕ್ಕಸವನ್ನು ಬರಿದು ಮಾಡುತ್ತಿರುವುದಾಗಿ ಮಹಾತ್ಮರಿಗೂ ವಿಶ್ವೇಶ್ವರಯ್ಯನವರ ವಿರುದ್ಧ ದೂರು ಸಲ್ಲಿಸಿದ್ದರು ಕೆಲವು ಮಹನೀಯರು. 1927ರಲ್ಲಿ ಗಾಂಧೀಜಿ ಮೈಸೂರಿಗೆ ಆಗಮಿಸಿ, ಪರಿವಾರದೊಡನೆ, ಕನ್ನಂಬಾಡಿ ಕಟ್ಟೆ, ಭದ್ರಾವತಿ ಕಾರ್ಖಾನೆ ಇವನ್ನು ಸಂದರ್ಶಿಸಿದರು. ವಿಷಯ ಪರಿಶೀಲಿಸಿದರು. ಇವನ್ನು ನೋಡಿದ ಮೇಲೆ ವಿಶ್ವೇಶ್ವರಯ್ಯನವರಲ್ಲಿ ಅವರಿಗಿದ್ದ ಗೌರವ ಮತ್ತಷ್ಟು ಹೆಚ್ಚಿತು. "ನಾಳೆಯೇ ಭದ್ರಾವತಿ ಕಾರ್ಖಾನೆ ಮುಚ್ಚಿಹೋದರೂ, ಭಾರತೀಯರು ಕೇವಲ ಮಾತುಗಾರರಲ್ಲ, ಕರ್ತೃತ್ವಶಕ್ತಿಯೂ ಅವರಲ್ಲಿದೆ ಎಂದು

ಭದ್ರಾವತಿ ಉದಹರಿಸಿದೆ. ಕನ್ನಂಬಾಡಿ ಕಟ್ಟೆಯು ಏಷ್ಯದಲ್ಲೇ ಅತಿ ದೊಡ್ಡ ಜಲಾಶಯ ವಾಗಿದೆ. ವಿಶ್ವೇಶ್ವರಯ್ಯನವರು ಮಹೋನ್ನತ ದೇಶಭಕ್ತರು." ಈ ರೀತಿಯಲ್ಲಿ ಅವರನ್ನು ಬಹಿರಂಗ ಸಭೆಗಳಲ್ಲಿ ಹೊಗಳಿದರು.

1937ರಲ್ಲಿ ಮಹಾನದಿಯ ಮಹಾ ಪ್ರವಾಹದಿಂದ ಒರಿಸ್ಸ ತತ್ತರಿಸಿಹೋಗಿತ್ತು. ಉಕ್ಕೇರಿದ ಮಹಾನದಿಯಿಂದ ಆಗಾಗ ಮಹಾ ದುರಂತ ಸಂಭವಿಸುತ್ತಲೇ ಇತ್ತು. ನೆರೆಯ ಹಾವಳಿ ತಪ್ಪಿಸಲು ಸೂಕ್ತ ಸಲಹೆ ನೀಡುವಂತೆ ಗಾಂಧೀಜಿ, ವಿಶ್ವೇಶ್ವರಯ್ಯ ನವರ ನೆರವು ಕೋರಿದರು. ಎಪ್ಪತ್ತಾರು ವಯಸ್ಸು ಮೀರಿದ ವಿಶ್ವೇಶ್ವರಯ್ಯ ನವರು ಮಹಾತ್ಮರ ಮನವಿ ಮನ್ನಿಸಿ ಒರಿಸ್ಸಾಗೆ ಹೋಗಿ, ಮಹಾನದಿಯ ಜಲಾನಯನ ಪ್ರದೇಶದಲ್ಲಿ ಸುತ್ತಾಡಿ, ವರದಿಗಳಿಂದ ವಿಷಯ ಸಂಗ್ರಹಿಸಿ, ನೆರೆಯ ಹಾವಳಿಯಿಂದ ಪಾರಾಗಲು ಕೈಗೊಳ್ಳಬೇಕಾದ ಸೂಕ್ತ ಯೋಜನೆ ಸಲ್ಲಿಸಿದರು. ಒರಿಸ್ಸ ಸರಕಾರ ಸಲ್ಲಿಸಿದ ಸಂಭಾವನೆ ತೆಗೆದುಕೊಳ್ಳಲಿಲ್ಲ. ಜನನಾಯಕ ಮಹಾತ್ಮಾ ಗಾಂಧಿಯವರ ಕೋರಿಕೆಯಂತೆ ಕಾರ್ಯ ನಿರ್ವಹಿಸಿರುವುದಾಗಿ ಸಂಭಾವನೆ ಸ್ವೀಕರಿಸಲು ಅವರು ಒಪ್ಪಲಿಲ್ಲ. ಮಹಾತ್ಮರಲ್ಲಿ ಅಷ್ಟು ಗೌರವ.

1947ರಲ್ಲಿ ಗಾಂಧೀಜಿ ದಿಲ್ಲಿಯ ಬಿರ್ಲಾ ಭವನದಲ್ಲಿ ಬಿಡಾರ ಹೂಡಿದ್ದರು. ಇದೇ ಕಾಲಕ್ಕೆ ವಿಶ್ವೇಶ್ವರಯ್ಯನವರೂ ದಿಲ್ಲಿಗೆ ಹೋಗಿದ್ದರು. ರಾಜಕೀಯದ ಪರ್ವಕಾಲ. ಸಂಸ್ಥಾನಿಕರು ಮತ್ತು ದೇಶೀಯ ಸಂಸ್ಥಾನಗಳ ಮಂತ್ರಿಗಳು ಮಹಾತ್ಮರ ಮಾರ್ಗದರ್ಶನಕ್ಕಾಗಿ ಬಿರ್ಲಾ ಭವನದಲ್ಲಿ ಸಭೆಸೇರಿದ್ದರು. ಎಷ್ಟೇ ಸಂಭಾವಿತರಿದ್ದರೂ ಎಲ್ಲರೂ ನೆಲದ ಮೇಲೆ ಹಾಸಿದ್ದ ಜಮಖಾನದ ಮೇಲೆ ಮಂಡಿಸಿದ್ದರು. ಈ ಸನ್ನಿವೇಶದಲ್ಲಿ ವಿಶ್ವೇಶ್ವರಯ್ಯನವರು ಬಿರ್ಲಾ ಭವನಕ್ಕೆ ಬಂದರು. ಮಹಾತ್ಮರನ್ನು ಸಂದರ್ಶಿಸಲು ಮೊದಲೇ ಗೊತ್ತುಮಾಡಿಕೊಂಡಿರಲಿಲ್ಲ. ಆದಕಾರಣ ಬಾಗಿಲ ಬಳಿ ಇದ್ದವ ರನ್ನು ಕಂಡು, ಗಾಂಧಿಯವರಿಗೆ ತನ್ನ ನಮಸ್ಕಾರ ತಿಳಿಸುವಂತೆ ಹೇಳಿ ಹೊರಡಲು ಉದ್ಯುಕ್ತರಾದರು. ಇಷ್ಟರಲ್ಲಿ ವಿಶ್ವೇಶ್ವರಯ್ಯನವರು ದಯಮಾಡಿಸಿದ್ದ ವಿಷಯ ಗಾಂಧೀಜಿಗೆ ಗೊತ್ತಾಯಿತು. ಅವರನ್ನು ಒಳಕ್ಕೆ ಬರಮಾಡಿಕೊಂಡರು. ಅಯ್ಯನವರು ಒಳಕ್ಕೆ ಬರಲು, ಕುಳಿತಿದ್ದ ಗಾಂಧೀಜಿ ಎದ್ದು ಅವರನ್ನು ಆಹ್ವಾನಿಸಿದರು. ರಾಜ ಮಹಾರಾಜರು, ಸಚಿವರು ಮಂಡಿಯೂರಿ ನೆಲದ ಮೇಲೆ ಮಂಡಿಸಿದ್ದಾಗ, ವಿಶ್ವೇಶ್ವ ರಯ್ಯನವರಿಗಾಗಿ ಕುರ್ಚಿ ತರಿಸಿದರು. ಕೆಳಗೆ ಕೂಡಲು ನಿಮ್ಮಿಂದ ಆಗದು ಎಂದು ಸಮಾಧಾನ ಹೇಳಿದರು. ಪರಸ್ಪರ ಯೋಗಕ್ಷೇಮ ವಿಚಾರಿಸಿಕೊಂಡರು. ಗಾಂಧೀಜಿ ಬಾಗಿಲ ವರೆಗೂ ಬಂದು ಅಯ್ಯನವರನ್ನು ಬೀಳ್ಕೊಟ್ಟರು. ಭಿನ್ನತೆ ಏನೇ ಇರಲಿ, ಪರಸ್ಪರ ಅಭಿಮಾನ ಹೀಗಿತ್ತು. ಇದು ಮಹೋನ್ನತರ ಗುಣ, ಲಕ್ಷಣ.

'ಔದ್ಯೋಗೀಕರಣ ಇಲ್ಲವೇ ಮರಣ'–ಇದು ವಿಶ್ವೇಶ್ವರಯ್ಯನವರ ತಂತ್ರ. 'ಔದ್ಯೋ ಗೀಕರಣದಿಂದ ಮರಣ'. ಇದು ಮಹಾತ್ಮರ ದೃಷ್ಟಿ. 'ಲೋಕಾಸ್ಸಮಸ್ತಾಃಸ್ಸುಖಿನೋ ಭವಂತು!' ಇದು ಉಭಯತ್ರರ ಗುರಿ.

# 19. ಗಂಗಾ ಸೇತುವೆ

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಈ ದೇಶಕ್ಕೆ ಸಲ್ಲಿಸಿರುವ ಸೇವೆ ಅಪಾರ. ಅವರ ಸೇವಾಕ್ಷೇತ್ರವೂ ಅಷ್ಟೇ ವಿಶಾಲ ಮತ್ತು ವೈವಿಧ್ಯಮಯ. ಎಲ್ಲಕ್ಕೂ ಮಿಗಿಲಾಗಿ ನೀರಾವರಿ ಮತ್ತು ನಗರಾಭಿವೃದ್ಧಿಯಲ್ಲಿ ಅವರದು ಎತ್ತಿದ ಕೈ. ಬೊಂಬಾಯಿ, ಹೈದರಾಬಾದ್, ಮೈಸೂರು ಸಂಸ್ಥಾನಗಳಲ್ಲದೆ ಬರೋಡ, ಭೂಪಾಲ್, ಗ್ವಾಲಿಯರ್, ಇಂದೋರ್, ಕಾಥೇವಾಡ್, ಕೊಲ್ಲಾಪುರ, ಭಾವನಗರ, ಸಾಂಗ್ಲಿ, ಅಕ್ಕಲಕೋಟೆ, ಮೌರವಿ, ಫಲ್ಟೆದ್, ವಂಕನೇರ ಮೊದಲಾದ ದೇಶೀಯ ಸಂಸ್ಥಾನಗಳೂ; ಕರಾಚಿ, ಸಕ್ಕೂರ್, ಸೂರತ್, ಧೂಲಿಮ, ನಾಸಿಕ್, ಪಂಢರಾಪುರ, ಬಿಜಾಪುರ, ನಾಗಪುರ, ಧಾರವಾಡ, ಬೆಳಗಾಂ, ಅಹಮದಾಬಾದ್, ಪುಣೆ, ರಾಜಕೋಟೆ, ಗೋವ, ಏಡನ್ ಮೊದಲಾದ ನಗರಗಳೂ ಇವರ ಸೇವೆಯ ಸೌಲಭ್ಯ ಪಡೆದಿವೆ. ಗಂಗಾ, ಸಿಂಧೂ, ಮಹಾನದಿ, ಮೂಸಿ, ಇಯಾಸಿ, ಕಾವೇರಿ, ತುಂಗಭದ್ರ ಮೊದಲಾದ ನದಿಗಳನ್ನು ನಿಯಂತ್ರಿಸುವುದರಲ್ಲಿ ಇವರ ಪಾತ್ರ ಕಡಮೆ ಇರಲಿಲ್ಲ.

ಭರತ ಭೂಮಿಯ ಜೀವನದಿಗಳಲ್ಲಿ ಗಂಗೆ ಅತ್ಯಂತ ಪುನೀತ ನದಿ ಎಂಬ ಕೀರ್ತಿ ಗಳಿಸಿದೆ. ಈ ನದಿಯಲ್ಲಿ ಸ್ನಾನ ಮಾಡುವುದರಿಂದ ಪಾಪ ಪರಿಹಾರವಾಗುತ್ತದೆ ಎಂಬ ನಂಬಿಕೆ ಹಿಂದೂಗಳಿಗೆ. ಹಿಮಗಿರಿಯಲ್ಲಿ ಹುಟ್ಟಿ ಮಳೆಗಾಲದಲ್ಲಿ ಮಳೆಯಿಂದಲೂ, ಬೇಸಿಗೆ ಯಲ್ಲಿ ಮಂಜು ಕರಗಿ ನೀರಾಗಿ ನದಿಗೆ ಸೇರುವುದರಿಂದಲೂ ಗಂಗೆ ಸದಾ ಜಲಭರಿತ ವಾಗಿರುತ್ತದೆ. ಒಂದು ಸಾವಿರ ಮೈಲಿಗಿಂತ ಹೆಚ್ಚು ದೂರ ಹರಿದು ಕಲ್ಕತ್ತೆಯ ಸಮೀಪದಲ್ಲಿ ಗಂಗೆ ಬಂಗಾಳ ಕೊಲ್ಲಿಯಲ್ಲಿ ಮಿಳಿತವಾಗುತ್ತದೆ. ನದೀಮುಖಜ ಭೂಮಿಯಿಂದ ಸುಮಾರು ಎಪ್ಪತ್ತು ಮೈಲಿ ಮೇಲಿನ ವರೆಗೂ ಜಹಜುಗಳ ಸಂಚಾರಕ್ಕೆ ಗಂಗೆ ಯೋಗ್ಯವಾಗಿದೆ. ಪ್ರವಾಹಕಾಲದಲ್ಲಿ ನದಿಯು ತನ್ನ ಮುಖಜ ಭೂಮಿಯಲ್ಲಿ ಹಿರಿಂದ 20 ಮೈಲಿಗಳ ಅಗಲವಾಗಿ ಹರಡಿಕೊಳ್ಳುತ್ತದೆ. ಆಳ, ಅಗಲವಾಗಿ ಹರಿಯುವ ನದಿಗೆ ಸೇತುವೆ ಕಟ್ಟುವುದು ತುಂಬ ಪ್ರಯಾಸದ ಕೆಲಸ. ನದಿ ಹಾಯಲು ದೋಣಿ ಗಳನ್ನು ಹೆಚ್ಚಾಗಿ ಬಳಸಲಾಗುತ್ತದೆ. 1907ರಲ್ಲಿ ಬಿಹಾರ್ ಪ್ರಾಂತದ ಮುಖ್ಯ ಪಟ್ಟಣ ಪಾಟ್ನ ಬಳಿ ಗಂಗೆಗೆ ಅಡ್ಡಲಾಗಿ ಸೇತುವೆ ನಿರ್ಮಿಸುವ ಅಗತ್ಯ ಪ್ರಬಲವಾ ಯಿತು. 1945ರಲ್ಲಿ ಮೊಖಾಮೆ ಎಂಬಲ್ಲಿ ಗಂಗೆಗೆ ಅಡ್ಡಲಾಗಿ ಸೇತುವೆ ಕಟ್ಟಬಹು ದೆಂಬ ನಿರ್ಣಯ ರೈಲ್ವೆ ಬೋರ್ಡ್ ತೆಗೆದುಕೊಂಡಿತು. ಆದರೆ ವೆಚ್ಚ ಭರಿಸುವ ವಿಷಯದಲ್ಲಿ ಭಿನ್ನ ಅಭಿಪ್ರಾಯ ತಲೆದೋರಿ ಕೆಲಸ ಪ್ರಾರಂಭವಾಗಲಿಲ್ಲ.

ವೆಚ್ಚದಲ್ಲಿ ಮಾತ್ರವಲ್ಲ ಸೇತುವೆ ಎಲ್ಲಿ ನಿರ್ಮಿತವಾಗಬೇಕು ಈ ವಿಷಯದಲ್ಲೂ ಏಕಮತವಿರಲಿಲ್ಲ. ಭಾರತ ಸ್ವಾತಂತ್ರ್ಯ ಗಳಿಸಿತ್ತು. ಬಾಬು ರಾಜೇಂದ್ರ ಪ್ರಸಾದರು ರಾಷ್ಟ್ರಪತಿ ಆಗಿದ್ದರು. ಅವರು ಹುಟ್ಟಿ ಬೆಳೆದುದು ಬಿಹಾರದಲ್ಲಿ. ಡಾಕ್ಟರ್ ಸೈಯದ್ ಮಹಮ್ಮದ್ ಬಿಹಾರದ ರಾಜ್ಯಪಾಲ. ಪಾಟ್ನಾದ ಬಳಿಯೇ ಸೇತುವೆ ಆಗಬೇಕೆಂದರು ರಾಜ್ಯಪಾಲರು. ಪಶ್ಚಿಮ ಬಂಗಾಳದ ವಣಿಕ್ ವೃಂದಕ್ಕೆ ಫರಕ್ಕಾ ಅಥವಾ ರಾಜಮಹಲ್ ಸೂಕ್ತ ಸ್ಥಳ ಎನಿಸಿತ್ತು. ಅಸ್ಸಾಂ ಟೀ ತೋಟಗಳಿಗೆ ಪ್ರಸಿದ್ಧ. ಭಾರಿ ಜಮೀನ್ದಾರರು. ಸಕ್ರಿಗಲ್ಲಿ–ಮಣಿಹಾರಿ ಇಲ್ಲಿ ನಿರ್ಮಿತವಾಗುವುದು ಉಪಯುಕ್ತ ಎಂಬ ಅನಿಸಿಕೆ. ಇಲ್ಲಿ ಒಂದು ದಡದ ರೈಲಿನಿಂದ ಮತ್ತೊಂದು ದಡದ ರೈಲಿಗೆ ದೋಣಿಗಳು ಸರಕು ಮತ್ತು ಪ್ರಯಾಣಿಕರನ್ನು ಒಯ್ಯುತ್ತವೆ. ಕೇಂದ್ರ ಸರ್ಕಾರಕ್ಕೂ ಮೊಖಾಮೆಯೇ ಸೂಕ್ತ ಸ್ಥಳವೆಂದು ಮನವರಿಕೆ ಆಯಿತು. ಇಷ್ಟರಲ್ಲಿ 'ನಾರಾಯಣಿ' ಹೆಸರಿನ ದೋಣಿ ಮೊಖಾಮೆಯಿಂದ ಅನತಿ ದೂರದಲ್ಲಿ ಮುಳುಗಿ, ನೂರಾರು ಜನ ಗಂಗೆಯ ಪಾಲಾದರು. ಇದರಿಂದ ವಾದವಿವಾದ ಮತ್ತೆ ಚಿಗುರಿತು. ಪುಣೆಯ ಬಳಿಯ ಜಲನಿಯಂತ್ರಣ ಪ್ರಯೋಗ ಕೇಂದ್ರ ಮತ್ತೊಂದು ಹೊಸ ಸಲಹೆ ಮಂಡಿಸಿತು.

ವಾದವಿವಾದ ತೀವ್ರಗೊಳ್ಳುತ್ತಿದ್ದಂತೆ ಅಖಂಡ ಭಾರತ ಇಭ್ಭಾಗವಾಗಿ, ಸಮಸ್ಯೆ ಮತ್ತಷ್ಟು ಜಟಿಲವಾಯಿತು. ಒಂದು ತಾಂತ್ರಿಕ ವಿಷಯ ರಾಜಕೀಯ ಸಮಸ್ಯೆಯಾಗಿ ಪ್ರಧಾನಿ ಜವಾಹರಲಾಲರಿಗೆ ತಲೆನೋವು ಕೊಡತೊಡಗಿತು. ಸಚ್ಚಾರಿತ್ರರೂ, ಸ್ಥಳೀಯ ಮತ್ತು ಪ್ರಾಂತೀಯ ಭಾವನೆಗಳಿಗೆ ಮಣಿಯದವರೂ, ವಿಶಾಲದೃಷ್ಟಿಯುಳ್ಳವರೂ, ವಿಷಯನಿರ್ವಿಕಾರ ಭಾವನೆಯಿಂದ ತೂಗಿ, ತುಲನೆಮಾಡಿ ತೀರ್ಪು ಕೊಡಬಲ್ಲವರಿಂದ ಈ ಸಮಸ್ಯೆ ಬಗೆಹರಿಸಲು ಸಾಧ್ಯ ಎನಿಸಿತ್ತು ಕೇಂದ್ರ ಮಂತ್ರಿಸಂಪುಟಕ್ಕೆ. ಇಂಥ ಯೋಗ್ಯತೆ ಉಳ್ಳವರು ವಿಶ್ವೇಶ್ವರಯ್ಯನವರು ಒಬ್ಬರೇ. ಅವರ ತೀರ್ಪನ್ನು ಕೇಂದ್ರ ಸರ್ಕಾರ ಮರುವಿಚಾರ ಮಾಡದೆ ಒಪ್ಪಿಕೊಳ್ಳಬಹುದು ಎಂದರು ನೆಹರು. ಕೇಂದ್ರ ಸಂಪುಟ ಹೂಂಗುಟ್ಟಿತು. ಈ ತೀರ್ಮಾನದಂತೆ ಆಗ ರೈಲ್ವೆ ಮತ್ತು ರಹದಾರಿಯ ಸಚಿವರಾಗಿದ್ದ ಎನ್. ಗೋಪಾಲಸ್ವಾಮಿ ಅಯ್ಯಂಗಾರ್ಯರು ವಿಶ್ವೇಶ್ವರಯ್ಯನವರಿಗೆ ದಿನಾಂಕ ಜನವರಿ 7, 1952ರಂದು ದೀರ್ಘ ಪತ್ರ ಬರೆದು ಅವರ ಸಹಕಾರ ಕೋರಿದರು, ಸಮಸ್ಯೆ ಬಿಡಿಸಲು. ಅಗತ್ಯವಾದ ಸಕಲ ಸೌಲಭ್ಯಗಳನ್ನು ಒದಗಿಸುವ ಭರವಸೆ ಪತ್ರದಲ್ಲೇ ನಮೂದಾಗಿತ್ತು.

ಸ್ವತಂತ್ರ ಭಾರತದ ಪ್ರಥಮ ಪ್ರಧಾನಿ ಜವಾಹರಲಾಲರ ಪ್ರಾರ್ಥನೆಗೆ ಮನ್ನಣೆ ನೀಡಬೇಕಾದುದು ತನ್ನ ಕರ್ತವ್ಯವೆಂದು ತೊಂಭತ್ತು ಮೀರಿದ ವಯೋವೃದ್ಧ ವಿಶ್ವೇಶರಯ್ಯನವರು ಹೊಣೆಹೊರಲು ತಾನು ಸಿದ್ಧನೆಂದು ಉತ್ತರಿಸಿದರು. ತಾನೊಬ್ಬನೇ ತೀರ್ಪುಗಾರನಾಗಿ ತೀರ್ಪು ನೀಡುವುದು ವ್ಯಾವಹಾರಿಕ ದೃಷ್ಟಿಯಿಂದ ಸೂಕ್ತವಾಗಿರದೆಂದು, ತನಗೆ ಸಹಾಯವಾಗಿ ಡಿ. ಸಿ. ಬೈಚಾಲ್, ಬಿ. ಬಿ. ವರ್ಮಾ, ಎ. ಪಿ. ಭಂಡಾರಿ, ಪಿ. ಬಿ. ಅದ್ವಾನಿ ಇವರನ್ನು ನೇಮಿಸುವಂತೆ ಸರ್ಕಾರಕ್ಕೆ ತಿಳಿಸಿದರು. ಬೈಚಾಲ್

ಅವರು ಸಮಿತಿಯ ಕಾರ್ಯದರ್ಶಿಗಳಾದರು. ಸಮಿತಿಯ ಅನುಕೂಲಕ್ಕಾಗಿ ಏಳು ಡಬ್ಬಿಗಳ ಸುಸಜ್ಜಿತ ರೈಲು ಸಿದ್ಧವಾಯಿತು. ನದಿಯ ಮೇಲುಗಡೆ ಹಾರಾಡಿ ವೀಕ್ಷಿಸಲು ವಿಮಾನ, ನದಿಯ ದಡದಲ್ಲಿ ಸಂಚರಿಸಲು ಜಹಜು ಎಲ್ಲ ವ್ಯವಸ್ಥೆಯಾಯಿತು.

ವಿಶ್ವೇಶ್ವರಯ್ಯ ಸಲಹಾ ಸಮಿತಿ ದಿಲ್ಲಿಯಲ್ಲಿ ದಿನಾಂಕ ಮಾರ್ಚ್, 27, 1952ರಲ್ಲಿ ಸಭೆಸೇರಿತು. ರೈಲ್ವೆ ಬೋರ್ಡಿನ ಅಧ್ಯಕ್ಷರೊಡನೆ ವಿಚಾರವಿನಿಮಯ ಮಾಡಿ, ವಿಶೇಷ ರೈಲಿನಲ್ಲಿ ಬಿಹಾರಕ್ಕೆ ಹೊರಟಿತು. ಪಾಟ್ನಾದಿಂದ ಜಂಗಿಪುರದ ವರೆಗೆ, 20 ಮೈಲಿಗಳ ದೂರ ಗಂಗೆಯ ಓಟವನ್ನು, ವಿಶೇಷ ವಿಮಾನದಲ್ಲಿ ಚಾಲಕನ ಪಕ್ಕದಲ್ಲಿಯೇ ಕುಳಿತು ಅಯ್ಯನವರು ಕೆಳಮಟ್ಟದಿಂದ ವೀಕ್ಷಿಸಿದರು. ಕಲ್ಕತ್ತದಿಂದ ಖಟ್‌ಮುಂಡುವರೆಗೆ ರೈಲು, ಜಹಜು, ಮೋಟಾರು ವಾಹನಗಳನ್ನು ಬಳಸಿಕೊಂಡು ಸೇತುವೆ ಕಟ್ಟಲು ಸೂಕ್ತವೆಂದು ಸೂಚಿತವಾಗಿದ್ದ ಪ್ರತಿಯೊಂದು ಸ್ಥಳವನ್ನೂ ಸೂಕ್ಷ್ಮವಾಗಿ ಅವಲೋಕಿಸಿದರು. ಹೋದೆಡೆಯಲ್ಲೆಲ್ಲ ಎಂಜಿನಿಯರುಗಳು, ಅಧಿಕಾರಿಗಳು, ಸಂಘ ಸಂಸ್ಥೆಗಳ ಪ್ರತಿನಿಧಿಗಳನ್ನು ಆಹ್ವಾನಿಸಿ ವಿಚಾರವಿನಿಮಯ ನಡೆಸಿದರು. ದಿಲ್ಲಿಯಲ್ಲಿ ಭಾರತದ ಸೇನೆಯ ಮಹಾದಂಡನಾಯಕ ಜನರಲ್ ತಿಮ್ಮಯ್ಯ ಮತ್ತು ದಳಾಧಿಪತಿ ಜನರಲ್ ಥೋರತ್ ಅವರೊಡನೆ ರಾಷ್ಟ್ರರಕ್ಷಣೆಯ ದೃಷ್ಟಿಯಿಂದ ಎಲ್ಲಿ ಸೇತುವೆ ನಿರ್ಮಿಸುವುದು ಸೂಕ್ತವೆಂದು ಸಂಭಾಷಿಸಿದರು.

ಬಿಹಾರದ ಗವರ್ನರ್ ಎಂ. ಎಸ್. ಅಣೆ, ತಮ್ಮ ಆತಿಥ್ಯ ಸ್ವೀಕರಿಸುವಂತೆ ವಿಶ್ವೇಶ್ವರಯ್ಯನವರನ್ನು ಆಮಂತ್ರಿಸಿದರು. ಆಹ್ವಾನ ತಮ್ಮೊಬ್ಬರಿಗೇ ಮೀಸಲಾಗಿದ್ದುದನ್ನು ಗಮನಿಸಿ, ಸಮಿತಿಯ ಇತರರಿಗೆ ಆಹ್ವಾನವಿಲ್ಲದಿದ್ದುದರಿಂದ ಆತಿಥ್ಯ ಸ್ವೀಕರಿಸಲು ಒಪ್ಪಲಿಲ್ಲ. ಉರಿಬಿಸಿಲಿನಲ್ಲಿ ರೈಲು ಡಬ್ಬಿಯಲ್ಲಿಯೇ ಉಳಿಯುವುದಾಗಿ ತಿಳಿಸಿದರು. ತನ್ನ ತಪ್ಪು ಗ್ರಹಿಸಿದ ಅಣೆ, ವಿಶ್ವೇಶ್ವರಯ್ಯ ಮತ್ತು ಸಮಿತಿಯ ಎಲ್ಲ ಸದಸ್ಯರನ್ನೂ ಆಹ್ವಾನಿಸಿದ ನಂತರವೇ ಆತಿಥ್ಯ ಸ್ವೀಕೃತವಾಯಿತು. ವಯೋವೃದ್ಧರ ಕರ್ತವ್ಯನಿಷ್ಠೆ, ಸಹಪಾಟಿಗಳ ಗೌರವ ಕಾಪಾಡುವ ಅವರ ಮನೋಗತ ಹೊಗಳಿ ಅಣೆ ಅವರು ರಾಷ್ಟ್ರಪತಿಗಳಿಗೆ ಪತ್ರ ಬರೆದರು.

ಹಿಂದೆ ರೂಪಿತವಾಗಿದ್ದ ವರದಿ, ವಿಪುಲ ಅಂಕೆಸಂಖ್ಯೆ, ಭಿನ್ನ ದೃಷ್ಟಿಯ ಅಭಿಪ್ರಾಯ ಎಲ್ಲವನ್ನೂ ಕೂಲಂಕಶವಾಗಿ ಪರಿಶೀಲಿಸಿ ಸ್ವತಃ ವಿಶ್ವೇಶ್ವರಯ್ಯನವರು ಒಂದು ಕರಡು ವರದಿ ಸಿದ್ಧಗೊಳಿಸಿದರು. ವರದಿಯಲ್ಲಿ ಅಡಕವಾಗಿರಬೇಕಾದ ವಿಷಯ ಮತ್ತು ಪರಿಚ್ಛೇದಗಳ ಶೀರ್ಷಿಕೆಗಳನ್ನು ಸೂಚಿಸಿ, ಕಾರ್ಯದರ್ಶಿ ಬೈಜಾಲರ ಕೈಗಿತ್ತು, ಇತರ ಸದಸ್ಯರೊಡನೆ ಸಮಾಲೋಚಿಸಿ ವರದಿ ಸಿದ್ಧಪಡಿಸುವಂತೆ ತಿಳಿಸಿದರು. ವೃದ್ಧ ವಿಶ್ವೇಶ್ವರಯ್ಯನವರ ಆರೋಗ್ಯ ಅಷ್ಟೇನೂ ಸಮರ್ಪಕವಾಗಿರಲಿಲ್ಲ. ದಿಲ್ಲಿಯ ಹವಾಗುಣ ಒಗ್ಗುತ್ತಿರಲಿಲ್ಲ. ಇವರ ಅನುಕೂಲದ ದೃಷ್ಟಿಯಿಂದ ಬೊಂಬಾಯಿಯಲ್ಲಿ ಕಚೇರಿ ಏರ್ಪಡಿಸಲಾಯಿತು. ಇವರ ಸೂಚನೆಯಂತೆ ವರದಿ ಸಿದ್ಧವಾಯಿತು.

ಅದನ್ನು ಪರಿಶೀಲಿಸಿ ಕಾರ್ಯದರ್ಶಿ ಮತ್ತು ಸಮಿತಿಯ ಸದಸ್ಯರಿಗೆ, ಸಹಾಯಕರಿಗೆ ಕೃತಜ್ಞತೆ ಅರ್ಪಿಸುವುದು ತನ್ನ ಕರ್ತವ್ಯವೆಂದು ಸ್ವಹಸ್ತ ಎರಡು ಪ್ಯಾರಾ ಸೇರಿಸಿದರು. ಮೊಖಾಮೆಯೇ ಸೂಕ್ತ ಜಾಗ ಸೇತುವೆ ಕಟ್ಟಲು ಎಂದು ತೀರ್ಮಾನಿಸಿದರು. ಗೋಪಾಲ ಸ್ವಾಮಿ ಅಯ್ಯಂಗಾರ್ಯರು ಈ ವೇಳೆಗೆ ರಕ್ಷಣಾ ವಿಭಾಗದ ಮಂತ್ರಿಗಳಾಗಿದ್ದರು. ವರದಿ ಅವಲೋಕಿಸಿ, "ತಮ್ಮ ಶಿಫಾರಸುಗಳು ಮತ್ತು ಅವುಗಳ ಆಧಾರಗಳು ನಿರ್ವಿಕಲ್ಪ ದೃಷ್ಟಿಯಿಂದ ಕೂಡಿವೆ. ವಿವರಗಳು ಸ್ಫುಟವಾಗಿವೆ. ಈ ಬಗೆಯ ವರದಿ ಗಳಲ್ಲಿ ವಿಷಯ ನಿರೂಪಣೆ ಇಷ್ಟು ತಿಳಿಯಾಗಿರುವುದು ಅಪೂರ್ವ" ಎಂದು ಶ್ಲಾಘಿಸಿ ವಿಶ್ವೇಶ್ವರಯ್ಯನವರಿಗೆ ಪತ್ರ ಬರೆದು ತಿಳಿಸಿದರು. ಕೇಂದ್ರ ಸಂಪುಟ ವರದಿಯನ್ನು ಸಂಪೂರ್ಣ ಸ್ವೀಕರಿಸಿತು.

ಎಲ್ಲ ಸೇತುವೆಗಳೂ, ಅಣೆಕಟ್ಟುಗಳೂ ದೋಷರಹಿತವಾಗಿ ಸುಭದ್ರವಾಗಿರಬೇಕಾ ದುದು ಅತ್ಯಗತ್ಯವಷ್ಟೆ. ಅದರಲ್ಲೂ ಈ ಭಾರಿ ಸೇತುವೆ ನಿರ್ಮಾಣಕ್ಕೆ ಅತಿ ಹೆಚ್ಚಿನ ಜಾಗರೂಕತೆ ವಹಿಸಬೇಕು. ಆ ಕಾಲಕ್ಕೆ ನಮ್ಮ ದೇಶದಲ್ಲಿ ಶ್ರೇಷ್ಠ ದರ್ಜೆಯ ಉಕ್ಕು, ಸಾಕಷ್ಟು ಸಿಮೆಂಟ್ ತಯಾರಾಗುತ್ತಿರಲಿಲ್ಲ. ಎಂಜಿನಿಯರುಗಳಿಗೂ ಕೆಲಸಗಾರರಿಗೂ ಅನುಭವದ ಕೊರತೆ. ಇವೆಲ್ಲ ಗಮನಿಸಿ ಸೇತುವೆ ನಿರ್ಮಾಣದಲ್ಲಿ ಪಾಶ್ಚಾತ್ಯ ಕಂಪನಿ ಗಳ ನೆರವು ಪಡೆಯುವುದು ಅಗತ್ಯವೆಂದು, ಸುರಕ್ಷತೆಯ ದೃಷ್ಟಿಯಿಂದ ಸ್ವದೇಶಾಭಿ ಮಾನಿ ವಿಶ್ವೇಶ್ವರಯ್ಯನವರು ತಿಳಿಸಿದ್ದುದಕ್ಕೆ ಆಶ್ಚರ್ಯಪಡಬೇಕಾದುದಿಲ್ಲ. ಸೇತು ವೆಯ ವಿನ್ಯಾಸ, ರಚನೆ ಮತ್ತು ನಿರ್ಮಾಣಕ್ಕಾಗಿ ಪ್ರಪಂಚದ ಎಲ್ಲ ಭಾಗಗಳಿಂದ 'ಟೆಂಡರ್' ತರಿಸಿಕೊಳ್ಳಲಾಯಿತು. ಉಕ್ಕಿನ ದೂಲಗಳು ಇಂಗ್ಲೆಂಡಿನಿಂದ ಬಂದುವು.

ಸೇತುವೆಯ ನಿರ್ಮಾಣ ಸೆಪ್ಟೆಂಬರ್ 1953ರಲ್ಲಿ ಪ್ರಾರಂಭವಾಗಿ ಮೇ 1959ಕ್ಕೆ ಮುಗಿಯಿತು. ಆದ ವೆಚ್ಚ 13,96,89,000 ರೂಪಾಯಿಗಳು.

# 20. ವಿಶ್ವಮಾನ್ಯ

ವಿಶ್ವೇಶ್ವರಯ್ಯನವರ ನಿಷ್ಪಕ್ಷಪಾತದ ಸಮತೋಲನ ತೀರ್ಪು ನೀಡಬಲ್ಲ ಗುಣ ಅವರನ್ನು ಹಲವಾರು ಸಮಿತಿಗಳ ಅಧ್ಯಕ್ಷರು ಅಥವಾ ಸದಸ್ಯರಾಗಿ ಕಾರ್ಯ ನಿರ್ವಹಿಸು ವಂತೆ ಮಾಡಿತು. ಗಂಗೆಯಂತೆಯೇ ತುಂಗಭದ್ರೆ, ಮಹಾನದಿ, ಸಿಂಧು ಈ ನದಿಗಳೂ ಒಂದಲ್ಲ ಮತ್ತೊಂದು ರೀತಿಯಲ್ಲಿ ಇವರ ಸೇವೆ ಪಡೆದುವು. ಕೆಲವು ಪೌರಸಭೆಗಳೂ, ವಿಚಾರಣಾ ಸಮಿತಿಗಳೂ ಇವರ ನಿರ್ವಿಕಾರ ಭಾವನೆಯ ತೀರ್ಮಾನದ ಸೌಲಭ್ಯ ಗಳಿಸಿದುವು.

ಮಹಾನದಿ, ತಾನು ಹರಿಯುವ ಪ್ರದೇಶಗಳಲ್ಲಿ, ಹೆಸರಿಗೆ ತಕ್ಕಂತೆ ಮಹದುಪಕಾರ ಮಾಡುತ್ತದೆ. ಆದರೆ ಪ್ರವಾಹ ಬಂದಾಗ ಭಯಂಕರ ರೂಪು ತಾಳಿ ವಿನಾಶಕಾರಿ ಆಗುತ್ತದೆ. ತೀರ ಪ್ರದೇಶದ ನಿವಾಸಿಗಳು ವರ್ಷಂಪ್ರತಿ ಪ್ರವಾಹದ ವಿಕೋಪಕ್ಕೆ ಒಳಗಾಗಿ ಕಷ್ಟ, ನಷ್ಟ, ಪ್ರಾಣಹಾನಿ ಮೊದಲಾದ ಸಂಕಟ ಅನುಭವಿಸುತ್ತಲೇ ಬಂದಿರು ತ್ತಾರೆ. ಇದೇ ರೀತಿಯಲ್ಲಿ 1937ರಲ್ಲಿ ಒರಿಸ್ಸ ಅತಿ ದಾರುಣ ಸಂಕಟ ಅನುಭವಿಸಿತು. ಒರಿಸ್ಸದ ಮುಖ್ಯಮಂತ್ರಿ ವಿಶ್ವನಾಥ ದಾಸರ ಮೊರೆಗೆ ಓಗೊಟ್ಟು ಮಹಾತ್ಮ ಗಾಂಧಿ ಅಲ್ಲಿಗೆ ಹೋದರು. ನೆರೆಯ ಹಾವಳಿಗೆ ತುತ್ತಾದ ಜನರ ಸಂಕಟ ಕಣ್ಣಾರೆ ಕಂಡು ಮರುಗಿದರು. ಆಗಾಗ ಸಂಭವಿಸುವ ಪ್ರವಾಹದಿಂದ ಆಗುವ ಹಾನಿ ತಪ್ಪಿಸಲು ಶಾಶ್ವತ ಪರಿಹಾರ ಕ್ರಮ ಅಗತ್ಯವೆಂದು ಮನಗಂಡರು. ಸೂಕ್ತ ಸಲಹೆ ನೀಡಲು ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಳ್ಳುವಂತೆ ವಿಶ್ವನಾಥದಾಸರಿಗೆ ತಿಳಿಸಿದರು. ಅಲ್ಲದೆ, ಒರಿಸ್ಸದ ಮುಖ್ಯ ಮಂತ್ರಿಯವರಿಂದ ಬರಲಿರುವ ಆಮಂತ್ರಣ ಸ್ವೀಕರಿಸಿ ಶಕ್ತಿಮೀರಿ ಸಹಾಯ ಮಾಡುವಂತೆ ತಿಳಿಸಿದರು. "ಶಕ್ತಿಮೀರಿ ಸಹಾಯ ಮಾಡುವಿರೆಂಬ ವಿಶ್ವಾಸ ನನಗಿದೆ" ಎಂಬ ವಾಕ್ಯ ಜೋಡಿಸಿದರು.

ಒರಿಸ್ಸದ ಮುಖ್ಯಮಂತ್ರಿಯಿಂದ ನಿರೀಕ್ಷಿಸಿದಂತೆ ಪತ್ರ ಬಂತು. ವಿಶ್ವೇಶ್ವರಯ್ಯ ನವರು ಒರಿಸ್ಸಕ್ಕೆ ಹೋದರು. 1927–28ರಲ್ಲಿ ಮೂವರು ತಜ್ಞ ಎಂಜಿನಿಯರುಗಳ ಸಮಿತಿ, ಇಲ್ಲಿನ ಪರಿಸ್ಥಿತಿ ಪರಿಶೀಲಿಸಿ ಹಠಾತ್ತನೆ ಉಕ್ಕೇರಿ ಹರಿಯುವ ಮಹಾನದಿಗೆ ಅಣೆಕಟ್ಟು ಕಟ್ಟುವುದು ಅಸಾಧ್ಯವೆಂದು ವರದಿ ಸಲ್ಲಿಸಿತ್ತು. ಈ ವರದಿಯ ಆಧಾರದ ಮೇಲೆ ತಮ್ಮ ವರದಿ ವಿಶ್ವೇಶ್ವರಯ್ಯನವರು ಸಲ್ಲಿಸಬೇಕಾಗಿತ್ತು. ಈ ವರದಿಯಲ್ಲಿ ಅವರು ನಿರೀಕ್ಷಿಸಿದ್ದ ವಿವರಗಳು ಇರಲಿಲ್ಲ. ಆದಕಾರಣ ಅವರು ಒಂದು ತಾತ್ಕಾಲಿಕ ವರದಿ 1937ರಲ್ಲಿ ಸಲ್ಲಿಸಿದರು. ಹೆಚ್ಚಿನ ವಿಷಯ ಸಂಗ್ರಹಿಸಲು ಮೂವರು ಎಂಜಿ

ನಿಯರುಗಳ ಸಮಿತಿ ನೇಮಿಸುವಂತೆ ತಿಳಿಸಿದರು. ಮೂವರು ತಜ್ಞರ ಹೆಸರುಗಳನ್ನೂ ಇವರೇ ಸೂಚಿಸಿದರು.

ಒರಿಸ್ಸಾಗೆ ದಯಮಾಡಿಸಿ ಪ್ರವಾಹದ ಹಾವಳಿ ತಪ್ಪಿಸಲು ಸಲಹೆ ನೀಡುವಂತೆ ಮಾರನೆಯ ವರ್ಷವೇ ಮತ್ತೆ ಕರೆ ಬಂದಿತು. ವಿಶ್ವೇಶ್ವರಯ್ಯನವರು ಮತ್ತೆ ಒರಿಸ್ಸಾಗೆ ಹೋಗಿ, ಹತ್ತು ದಿನ ಉಳಿದು, ನದಿಯ ಮುಖಜಭೂಮಿಯಲ್ಲಿ ಸಂಚರಿಸಿ ವಿಷಯ ಸಂಗ್ರಹಿಸಿದರು. ಮಹಾನದಿಗೆ ಸೇರುವ ಮೂರು ಮುಖ್ಯ ಉಪನದಿಗಳು ಪ್ರವಾಹ ಸಂಭವಿಸಲು ಸಹಾಯಕವಾಗಿವೆ. ಈ ನದಿಗಳಿಗೆ ಅಣೆಕಟ್ಟು ಕಟ್ಟಿ ಅವುಗಳ ನೀರು ಅಧಿಕ ಪ್ರಮಾಣದಲ್ಲಿ ಜಲವಾಹಿನಿಯಾಗಿ ಮಹಾನದಿಗೆ ಸೇರದಂತೆ ತಡೆಗಟ್ಟಬಹುದು. ಹೆಸರಿಗೆ ತಕ್ಕಂತೆ ಮಹಾನದಿಯು ವರ್ಷಂಪ್ರತಿ ಅಪಾರ ಪ್ರಮಾಣದಲ್ಲಿ ನೀರು ಮತ್ತು ಮೆಕ್ಕಲುಮಣ್ಣನ್ನು ಹೊತ್ತು ತಂದು ನದಿಯ ಮುಖಜಭೂಮಿಯಲ್ಲಿ ತುಂಬುತ್ತದೆ. ಇದರ ಪರಿಣಾಮವಾಗಿ ನದಿಯ ತಳದ ಮಟ್ಟ ಏರುತ್ತ ಬರುತ್ತದೆ. ನೀರು ದಡದ ಮೇಲೇರಿ ಉಕ್ಕಿ ಹರಿಯುತ್ತದೆ. ನದಿಯ ನೀರು, ಮರಳು, ಮಣ್ಣು ಮುಖಜಭೂಮಿಯಲ್ಲಿ ಹರಡಿಕೊಳ್ಳಲು 25 ಮೈಲುಗಳಿಗೂ ಕಡಿಮೆ ಇಲ್ಲದಷ್ಟು ಮುಖಜಭೂಮಿ ಅಗತ್ಯವಾದೀತು. ಆಗಿಂದಾಗ ನದಿಯ ನೀರು ಸಮುದ್ರಕ್ಕೆ ಸರಾಗವಾಗಿ ಹರಿದು ಹೋಗಲು ಯಂತ್ರಗಳ ಸಹಾಯದಿಂದ ಹೂಳು ಎತ್ತುತ್ತಲೇ ಇರಬೇಕು. ಸದಾ ಜಾಗರೂಕರಾಗಿ ನದಿಯ ಚಲ್ಲಾಟ ಗಮನಿಸುತ್ತಿರಬೇಕು.

1927ರಲ್ಲಿ ನೇಮಿತವಾಗಿದ್ದ ಸಮಿತಿಯು ಮಹಾನದಿಯ ನೀರನ್ನು ಮೊನಾಗುಣೆ ನದಿಯ ಮೂಲಕ ಚಿಲಕ ಸರೋವರಕ್ಕೆ ಸಾಗಿಸುವ ಸಲಹೆ ನೀಡಿತ್ತು. ಎರಡು ನದಿಗಳಿಗೆ ಸಂಪರ್ಕ ಕಲ್ಪಿಸಬೇಕಾದ ಕಾಲುವೆ ತುಂಬ ಆಳವಾಗಿರಬೇಕಾಗುತ್ತದೆ. ಅಪಾರ ವೆಚ್ಚ ಮಾಡಬೇಕಾದೀತು. ಇದಕ್ಕೆ ಪ್ರತಿಯಾಗಿ ವಿಶ್ವೇಶ್ವರಯ್ಯನವರು ತಮ್ಮದೇ ಆದ ವಿನೂತನ ಸಲಹೆ ಕೊಟ್ಟರು. ಮಹಾನದಿಗೆ ಎತ್ತರವಾದ ಅಣೆಕಟ್ಟುವುದು. ಪ್ರವಾಹದ ಹೆಚ್ಚುವರಿ ನೀರು ಮೊನಾಗುಣೆ ಕಣಿವೆಯ ಮೂಲಕ ಹರಿದು ಹೋಗಲು ಸಾಮಾನ್ಯ ಆಳದ ಕಾಲುವೆ ತೋಡಿದರೆ ಸಾಕು. ಪ್ರವಾಹದ ನೀರನ್ನು ಜಲಾಶಯದಲ್ಲಿ ಸಂಗ್ರಹಿಸಿ, ಬೇಸಿಗೆಯಲ್ಲಿ ಬಳಸಬಹುದು, ವಿದ್ಯುತ್ ಉತ್ಪಾದಿಸಬಹುದು. ಈ ಸಲಹೆಯನ್ನು ಖ್ಯಾತ ಎಂಜಿನಿಯರ್ ದಿಲ್ದಾರ್ ಹುಸೇನ್ ತುಂಬ ಪ್ರಶಂಸಿಸಿರುತ್ತಾರೆ. ಇದು ಅಂಗೀಕಾರಾರ್ಹವಾಗದಿದ್ದರೆ, ಮೂರು ಪ್ರತ್ಯೇಕ ಅಣೆಕಟ್ಟು ಕಟ್ಟುವ ಸಲಹೆ ಅವರು ನೀಡಿದರು. ಈಗ ಆಧುನಿಕ ಯಂತ್ರೋಪಕರಣಗಳನ್ನು ಬಳಸಿಕೊಂಡು ಮಹಾನದಿಗೆ ಅಡ್ಡಲಾಗಿ ದೊಡ್ಡ ಅಣೆಕಟ್ಟನ್ನು ಕಟ್ಟಲಾಗಿದೆ.

ಸಿಂಧೂನದಿ ಹಿಮಾಲಯದಲ್ಲಿ ಹುಟ್ಟಿ ಸಿಂಧ್ ಪ್ರಾಂತ್ಯದ ಮೂಲಕ ಹರಿದು ಅರಬ್ಬಿ ಸಮುದ್ರದಲ್ಲಿ ಲೀನವಾಗುತ್ತದೆ. ಸ್ವಾತಂತ್ರ್ಯಪೂರ್ವ ಸಿಂಧ್, ಬೊಂಬಾಯಿ ಪ್ರಾಂತ್ಯದ ಒಂದು ಜಿಲ್ಲೆಯಾಗಿತ್ತು. ವಿಭಜನೆಯ ನಂತರ ಪಾಕಿಸ್ತಾನದ ಭಾಗವಾಯಿತು.

ಸಿಂಧೂ ನದಿಗೆ 'ಲಾಯ್ಡ್ ಬ್ಯಾರೀಜ್' ಎಂಬ ಹೆಸರಿನ ತಡೆಗಟ್ಟೆ ಕಟ್ಟಲಾಗಿದೆ. ಈ ತಡೆಗಟ್ಟೆ ಅರ್ಧ ಮೈಲಿ ಉದ್ದವಾಗಿ, 66 ಕಮಾನುಗಳಿಂದ ಕೂಡಿದೆ. ಪ್ರತಿಯೊಂದು ಕಮಾನಿನಲ್ಲೂ 60 ಅಡಿ ಅಗಲವಾದ ರಂಧ್ರವಿದೆ. ಪ್ರತಿ ರಂಧ್ರಕ್ಕೂ 50 ಟನ್ ತೂಗುವ ಭಾರಿ ಕವಾಟಗಳು. ತಡೆಗಟ್ಟೆಯಿಂದ ಏಳು ದೊಡ್ಡ ನಾಲೆಗಳು ಹೊರಡುತ್ತವೆ. ಈ ನಾಲೆಗಳು ಅಸಂಖ್ಯಾತ ಶಾಖೋಪಶಾಖೆಗಳಾಗಿ ಕವಲೊಡೆದು 65 ಲಕ್ಷ ಎಕರೆ ಭೂಮಿಗೆ ನೀರುಣಿಸುತ್ತವೆ. ನಾಲೆಗಳ ಒಟ್ಟು ಉದ್ದ 6,473 ಮೈಲಿ. ತಡೆಗಟ್ಟೆ ಕಟ್ಟಲು 1923ರಲ್ಲಿ ರೂ. 19 ಕೋಟಿ, 96 ಲಕ್ಷ ಮಂಜೂರಾಯಿತು. 1941ರಲ್ಲಿ ಇದು ರೂ. 26 ಕೋಟಿಗೆ ಏರಿತು. ಕೆಲಸ ಪೂರ್ಣಗೊಳ್ಳಲು 14 ವರ್ಷಗಳಾದುವು. ಬೃಹದಾಕಾರದ ಯೋಜನೆ ಬೃಹತ್ ಪ್ರಮಾಣದ ಭ್ರಷ್ಟಾಚಾರಕ್ಕೆ ಎಡೆಗೊಟ್ಟಿದೆ ಎಂದು ಜನಾಭಿಪ್ರಾಯ ಬೊಬ್ಬೆ ಇಟ್ಟಿತು. ಕೆಲಸ ನಡೆಯುತ್ತಿದ್ದಾಗಲೇ ವಿದೇಶೀ ಎಂಜಿನಿಯರುಗಳಿಂದ ಪರಿಶೀಲನೆ ನಡೆಸಲು ಸರ್ಕಾರ ತಿಳಿಸಿತು. ಆದರೆ ಜನ, ವಿದೇಶೀಯರಿಂದ ವಿಚಾರಣೆ ನಡೆಸುವುದನ್ನು ಒಪ್ಪಲಿಲ್ಲ. ನಿರ್ಮಾಣಕಾರ್ಯದಲ್ಲಿ ತೊಡಗಿದ್ದವರು ವಿದೇಶೀಯರೇ. ಜನಾಭಿಪ್ರಾಯಕ್ಕೆ ಸರ್ಕಾರ ಮಣಿದು ವಿಶ್ವೇಶ್ವರಯ್ಯ ಮತ್ತು ಹೈದರಾಬಾದಿನ ಮುಖ್ಯ ಎಂಜಿನಿಯರ್ ನವಾಬ್ ಆಲಿ ನವಾಜ್‌ಜಂಗ್ ಇವರಿಬ್ಬರನ್ನೂ ಯೋಜನೆ ಸರಿಯಾಗಿದೆಯೋ, ಕಾರ್ಯನಿರ್ವಹಣೆ ತೃಪ್ತಿಕರವಾಗಿ ಸಾಗುತ್ತಿದೆಯೋ ಎಂದು ಪರಿಶೀಲಿಸಲು ನೇಮಿಸಿತು. 120 ಡಿಗ್ರಿ ಉರಿಬಿಸಿಲನ್ನೂ ಲೆಕ್ಕಿಸದೆ ಇಬ್ಬರು ಎಂಜಿನಿಯರುಗಳೂ ಸಿಂಧ್‌ಗೆ ಹೋದರು. ನಾಲ್ಕು ತಿಂಗಳ ಕಾಲ ಕಟ್ಟೆ ಮತ್ತು ನಾಲೆಯ ಪ್ರದೇಶದಲ್ಲಿ ಸಂಚರಿಸಿ, ಅಗತ್ಯ ವಿಷಯ ಸಂಗ್ರಹಿಸಿ ತಮ್ಮ ವರದಿಯನ್ನು ಬೊಂಬಾಯಿ ಸರ್ಕಾರಕ್ಕೆ ಸೆಪ್ಟೆಂಬರ್ 18, 1929ರಂದು ಸಲ್ಲಿಸಿದರು. ಅವರ ವರದಿಯಂತೆ ಜನ ಭಾವಿಸಿದ್ದಷ್ಟು ಪ್ರಮಾಣದಲ್ಲಿ ಭ್ರಷ್ಟಾಚಾರ ನಡೆದಿರಲಿಲ್ಲ. ಮರಾಮತ್ ಇಲಾಖೆಯ ಎಂಜಿನಿಯರುಗಳ ಅಧೀನದಲ್ಲಿ ಸಾಗುತ್ತಿರುವ ಕೆಲಸ ಬಹುಮಟ್ಟಿಗೆ ತೃಪ್ತಿಕರವಾಗಿದೆ. ಕೆಲಸ ತುಂಬ ಜಟಿಲ. ಕೆಲವು ವಿಭಾಗಗಳು ಪರಸ್ಪರ ಸಹಕರಿಸಿ ಕೆಲಸ ಮಾಡುತ್ತಿಲ್ಲ. ಕೆಲಸ ಮಂದಗತಿಯಲ್ಲಿ ಸಾಗುತ್ತಿರಲು ಇದು ಮುಖ್ಯ ಕಾರಣ. ಅಂದಾಜು ಅಧಿಕವಾದರೆ ಮಂಜೂರಾತಿ ನೀಡಲು ಸರ್ಕಾರ ಹಿಂಜರಿದೀತು ಎಂಬ ಭೀತಿಯಿಂದ ಕಡಮೆ ಅಂದಾಜು ಮಾಡಲಾಗಿದೆ. ಯಂತ್ರಗಳ ಬಳಕೆಯಿಂದ ಕೆಲಸ ತ್ವರಿತಗತಿಯಲ್ಲಿ ಸಾಗುವಂತೆ ಮಾಡಬಹುದು. ಅಗಾಧವೂ, ಕ್ಲಿಷ್ಟವೂ ಆದ ಬೃಹತ್ ಪ್ರಮಾಣದ ಯೋಜನೆ ತೃಪ್ತಿಕರವಾಗಿ ಸಾಗುತ್ತಿದೆ. ಇವು ವರದಿಯಲ್ಲಿ ಅಡಗಿರುವ ಮುಖ್ಯಾಂಶಗಳು. ತಾವು ನಿರೀಕ್ಷಿಸಿದ್ದುದಕ್ಕಿಂತ ವರದಿ ಉತ್ತಮವಾಗಿದೆ ಎಂದು ಬೊಂಬಾಯಿ ಗವರ್ನರ್ ಸೈಕ್ಸ್ ಶ್ಲಾಘಿಸಿರುತ್ತಾರೆ.

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸಮೀಪದಲ್ಲಿ ಕಟ್ಟಿರುವ ತುಂಗಭದ್ರಾ ಜಲಾಶಯ ಈ ರಾಜ್ಯದಲ್ಲೇ ಅತಿ ದೊಡ್ಡದು. ಕಟ್ಟೆಯ ಉದ್ದ ಎರಡು ಮೈಲಿ. ಭಾರತ ಸ್ವತಂತ್ರವಾಗಿ, ಭಾಷಾನುಗುಣ ರಾಜ್ಯಗಳು ಪುನರ್ರಚಿತವಾದಾಗ ಈ ದೊಡ್ಡ ಜಲಾಶಯ ಕನ್ನಡ ರಾಜ್ಯದ ಆಸ್ತಿಯಾಯಿತು. ಸ್ವಾತಂತ್ರ್ಯಪೂರ್ವ ಬಳ್ಳಾರಿ

ಜಿಲ್ಲೆ ಮದರಾಸು ಪ್ರಾಂತ್ಯದ ಭಾಗವಾಗಿತ್ತು. ತುಂಗಭದ್ರೆಯು ಮದರಾಸು ಮತ್ತು ಹೈದರಾಬಾದ್ ರಾಜ್ಯಗಳ ನಡುವೆ ಎಲ್ಲೆಕಟ್ಟೆಯಲ್ಲಿ ಹರಿಯುತ್ತ ಉಭಯ ರಾಜ್ಯಗಳ ವಿಭಜನೆಯ ಎಲ್ಲೆಯಾಗಿತ್ತು. ವ್ಯರ್ಥವಾಗಿ ಹರಿದುಹೋಗುತ್ತಿದ್ದ ನದಿಯ ನೀರನ್ನು ಉಪಯುಕ್ತವಾಗಿ ಬಳಸಿಕೊಳ್ಳಲು 1892ರಿಂದಲೇ ಪ್ರಯತ್ನ ನಡೆಯುತ್ತಲೇ ಇತ್ತು. ಮೈಸೂರು ಸಂಸ್ಥಾನದಲ್ಲಿ ಹುಟ್ಟಿ, ಮದರಾಸು, ಹೈದರಾಬಾದ್ ರಾಜ್ಯಗಳಲ್ಲಿ ಹರಿದು ಕೃಷ್ಣಾನದಿಯಲ್ಲಿ ಸೇರಿಕೊಳ್ಳುವ ನದಿಯ ನೀರನ್ನು ಬಳಸಿಕೊಳ್ಳುವ ಹಕ್ಕು ಮೂರು ರಾಜ್ಯಗಳಿಗೂ ಉಂಟು. ಕಟ್ಟೆ ಕಟ್ಟುವ ಮೊದಲು ಪ್ರತಿಯೊಂದು ಸಂಸ್ಥಾನವೂ ಬಳಸಿಕೊಳ್ಳಬಹುದಾದ ನೀರಿನ ಪ್ರಮಾಣ ನಿರ್ಧರಿತವಾಗಬೇಕು. 1944ರಲ್ಲಿ ಮದರಾಸು ಮತ್ತು ಹೈದರಾಬಾದ್ ಬಳಸಿಕೊಳ್ಳಬಹುದಾದ ತಾತ್ಕಾಲಿಕ ಒಪ್ಪಂದವಾಯಿತು. ಮೈಸೂರು ಸರ್ಕಾರ ತುಂಗಭದ್ರೆಯ ಒಂದು ಶಾಖೆಯಾದ ಭದ್ರಾನದಿಗೆ ಅಡ್ಡಲಾಗಿ ಲಕ್ಕವಳ್ಳಿ ಬಳಿ ಮತ್ತು ಸಕ್ರೆಬೈಲ್ ಬಳಿ ತುಂಗೆಗೆ ಅಡ್ಡಲಾಗಿ ಕಟ್ಟೆಗಳನ್ನು ಕಟ್ಟಲು ಅವಕಾಶ ಮಾಡಿ ಕೊಡಲಾಯಿತು. ಹೊಸಪೇಟೆಯ ಬಳಿ ತುಂಗಭದ್ರೆಗೆ ಮದರಾಸು ಮತ್ತು ಹೈದರಾಬಾದ್ ಸರ್ಕಾರಗಳು ಸಹಕರಿಸಿ ಕಟ್ಟೆ ಕಟ್ಟತಕ್ಕದ್ದು. ಬಲಭಾಗದ ಕಟ್ಟೆಯನ್ನು ಮದರಾಸು ಎಡಭಾಗದ ಕಟ್ಟೆಯನ್ನು ಹೈದರಾಬಾದು ಕಟ್ಟತಕ್ಕದ್ದೆಂದು ತೀರ್ಮಾನಿಸಲಾಯಿತು. ಕಟ್ಟೋಣ ಪ್ರಾರಂಭವಾಗುವುದಕ್ಕೆ ಮೊದಲೇ ಭಾರತ ಸ್ವತಂತ್ರವಾಯಿತು. ಮತ್ತೆ ಹೊಸ ಒಪ್ಪಂದ ಮಾಡಿಕೊಳ್ಳಬೇಕಾದ ಪರಿಸ್ಥಿತಿ ತಲೆದೋರಿತು. 1947ರಲ್ಲಿ ಭಕ್ತವತ್ಸಲಂ ಮದರಾಸಿನ ಮುಖ್ಯಮಂತ್ರಿ ಆದರು. ಇದೇ ಕಾಲಕ್ಕೆ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಹೈದರಾಬಾದಿನ ಪ್ರಧಾನಿ. ಕಟ್ಟೆಯ ವಿನ್ಯಾಸವೂ ಸ್ವೀಕೃತವಾಯಿತು. ಕಟ್ಟೆ ಕಟ್ಟಲು ಸಿಮೆಂಟ್ ಅಥವಾ ಸುರ್ಕಿ ಗಾರೆ, ಎರಡರಲ್ಲಿ ಯಾವುದನ್ನು ಬಳಸಬೇಕು ಎನ್ನುವುದರಲ್ಲಿ ಭಿನ್ನಾಭಿಪ್ರಾಯ ತಲೆದೋರಿತು. ಇದನ್ನು ಪಂಚಾಯತಿಯವರಿಗೆ ಬಿಡಲು ಒಪ್ಪಲಾಯಿತು. ವಿಶ್ವೇಶ್ವರಯ್ಯನವರು ಪಂಚಾಯತಿಯ ಅಧ್ಯಕ್ಷರಾಗಿರಬೇಕೆಂಬ ಸಲಹೆ ಸರ್ವಾನುಮತದಿಂದ ಅಂಗೀಕೃತವಾಯಿತು. ಸುರ್ಕಿ ತಯಾರಿಸಲು ತುಂಬ ಶ್ರಮಿಸಬೇಕಾಗುತ್ತೆ. ಸಾವಿರಾರು ಜನ ದುಡಿಯಬೇಕಾಗುತ್ತೆ, ಕೆಲಸ ತಡವಾಗುತ್ತೆ. ಆದಕಾರಣ ಸಿಮೆಂಟ್ ಬಳಸುವುದೇ ಸೂಕ್ತ. ಸುರ್ಕಿಗೆ ಅಗತ್ಯವಾದ ಸುಣ್ಣಕಲ್ಲು, ಇಟ್ಟಿಗೆ, ಸೌದೆ ಮದರಾಸಿನ ಭಾಗದಲ್ಲಿ ಲಭ್ಯವಿಲ್ಲ. ಹೈದರಾಬಾದಿನ ವಿಭಾಗದಲ್ಲಿ ಸುರ್ಕಿಗೆ ಅಗತ್ಯವಾದ ಎಲ್ಲ ಪದಾರ್ಥ ಹೇರಳವಾಗಿ ಲಭ್ಯ. ಬೇಕಾದರೆ ಕಚ್ಚಾ ಮಾಲನ್ನು ದೋಣಿಯ ಮೂಲಕ ಮದರಾಸಿನ ತುಂಗಭದ್ರೆಯ ತೀರಕ್ಕೆ ಸಾಗಿಸಿ ಒದಗಿಸುವುದಾಗಿ ಹೈದರಾಬಾದು ಸುರ್ಕಿ ಬಳಕೆಗೆ ಪುಷ್ಟಿ ಕೊಟ್ಟಿತು. ಮದರಾಸು, ಹೈದರಾಬಾದ್ ಮತ್ತು ವಿಶ್ವೇಶ್ವರಯ್ಯನವರ ನಡುವೆ ವಿಪುಲ ಪತ್ರವ್ಯವಹಾರ ನಡೆಯಿತು. ಸುರ್ಕಿ ಗಾರೆಗೆ ವಿಶ್ವೇಶ್ವರಯ್ಯನವರ ಒಲವು. ಹತ್ತಾರು ಸಾವಿರ ಕಾರ್ಮಿಕರಿಗೆ ಹಲವು ವರ್ಷ ಕಾಲ ಉದ್ಯೋಗ ಒದಗಿಸಿದಂತಾಗುತ್ತದೆ. ಸುರ್ಕಿಯೂ ಸಿಮೆಂಟ್ ಅಷ್ಟೇ ಉತ್ತಮವಾದುದು. ಇದು ವಿಶ್ವೇಶ್ವರಯ್ಯನವರ ಅಭಿಮತ. ಕಡೆಗೆ ಒಂದು ಪಾಲು ಸುರ್ಕಿ, ನಾಲ್ಕು ಪಾಲು ಸಿಮೆಂಟ್ ಬಳಸುವ ಸಲಹೆಗೆ ಒಪ್ಪಿಗೆ ದೊರೆಯಿತು.

ಭಾರತದ ಹೆಬ್ಬಾಗಿಲು ಎಂದು ಪ್ರಸಿದ್ಧವಾದ ಬೊಂಬಾಯಿ ಒಂದು ದ್ವೀಪ. ವಾಸ್ತವವಾಗಿ ಏಳು ಸಣ್ಣ ದ್ವೀಪಗಳಿಂದ ಕೂಡಿದ, ಅತಿ ಜನಭರಿತ ನಗರ. ಒಂದು ಕಡೆ ಆಳವಾದ ಸಮುದ್ರ. ಮಿಕ್ಕದ್ದು ಕೆಸರಿನ ಜೌಗುಪ್ರದೇಶ. ಸುತ್ತಲೂ ಬೆಟ್ಟಗುಡ್ಡಗಳಿಂದ ಆವೃತ. ಹೀಗಾಗಿ ದಿನದಿನಕ್ಕೂ ಜನಸಾಂದ್ರತೆ ಹೆಚ್ಚುತ್ತಿರುವ ನಗರ ಬೆಳೆಯಲು ವ್ಯವಧಾನವಿಲ್ಲ. ಗಗನಚುಂಬಿ ಕಟ್ಟಡಗಳು ಏಳಲು ಇದು ಮುಖ್ಯ ಕಾರಣ. ಇವೆಲ್ಲವನ್ನೂ ಗಮನಿಸಿ, ನಿರುಪಯೋಗಿ ಜೌಗುಪ್ರದೇಶವನ್ನು ಕಲ್ಲುಮಣ್ಣುಗಳಿಂದ ತುಂಬಿ, ಕಟ್ಟಡ ನಿರ್ಮಿಸಲು 1911ರಲ್ಲಿ ಪ್ರಾರಂಭವಾಯಿತು. ಈ ಪ್ರಯೋಗದಿಂದ 90,000 ಚದರ ಗಜ ಪ್ರದೇಶ ದಕ್ಕಿತು. ಆದ ವೆಚ್ಚ ರೂ. 5 ಲಕ್ಷ. ಈ ಪ್ರದೇಶವನ್ನು ರೂ. 24 ಲಕ್ಷಕ್ಕೆ ಗುತ್ತಿಗೆಗೆ ಕೊಡಲಾಯಿತು. ಬಂದ ಲಾಭ ಆಸೆ ಹುಟ್ಟಿಸಿತು. ಬಾಯಲ್ಲಿ ನೀರೂರಿತು. ಆಧುನಿಕ ಯಂತ್ರತಂತ್ರಗಳ ನೆರವಿನಿಂದ, ಸಮುದ್ರದ ಹಿಂಬದಿಯ ಜೌಗುಪ್ರದೇಶದಿಂದ 973 ಎಕರೆ ಭೂಮಿ ಬಿಡಿಸಿಕೊಳ್ಳುವ ಯೋಜನೆ 1911ರಲ್ಲಿ ಸಿದ್ಧವಾಯಿತು. ಇದು ಒಂದು ಯೋಜನೆ. ಅಂದಾಜು ವೆಚ್ಚ ರೂ. ೨೮೪.೫ ಲಕ್ಷ. ಎರಡನೆಯ ಯೋಜನೆ ರೂ. ೩೮೮ ಲಕ್ಷದ ವೆಚ್ಚದಿಂದ 1,272 ಎಕರೆ ಭೂಮಿ ಸಮುದ್ರದಿಂದ ಕಸಿದುಕೊಳ್ಳುವುದು. ಜೌಗುಪ್ರದೇಶದ ಸುತ್ತಲೂ ಗೋಡೆ ಕಟ್ಟಿ, ಸಮೀಪದ ಆಳವಿಲ್ಲದ ಸಮುದ್ರದಡಿಯಿಂದ ರಾಡಿಮಣ್ಣನ್ನು ಯಂತ್ರಗಳನ್ನು ಬಳಸಿ ಇಲ್ಲಿಗೆ 'ಪಂಪ್' ಮಾಡುವುದು. ಬಿಸಿಲಿನ ತಾಪಕ್ಕೆ ಕ್ರಮೇಣ ಕೆಸರಿನ ತೇವಾಂಶ ಆವಿಯಾಗಿ, ಮಣ್ಣು ಮಾತ್ರ ಉಳಿದು ಗಟ್ಟಿಯಾಗುವುದು. ಇದು ಯೋಜನೆಯ ಮುಖ್ಯಾಂಶ. ಘೋರ ಯುದ್ಧದ ದೆಸೆಯಿಂದ, ವಿದೇಶದಿಂದ ಯಂತ್ರಸಾಮಗ್ರಿ ತರಿಸಿಕೊಂಡು ಕೆಲಸ ಪ್ರಾರಂಭಿಸಲು 1919ರ ವರೆಗೂ ಸಾಧ್ಯವಾಗಲಿಲ್ಲ. ಸುಪ್ರಸಿದ್ಧ ತಾತಾ ಕಂಪನಿ ಕಾರ್ಯಭಾರ ಹೊರಲು ಸಿದ್ಧವೆಂದು ತಿಳಿಸಿತು. ಭಾರಿ ವೆಚ್ಚದ ಯೋಜನೆ ಭಾರತೀಯ ಕಂಪನಿಗೆ ಒಪ್ಪಿಸಲು ಬಯಸದೆ, ಇಂಗ್ಲೆಂಡಿನಿಂದ ಸರ್ ಜಾರ್ಜ್ ಬುಕಾನನ್ ಎಂಬ ತಜ್ಞನನ್ನು ಬರಮಾಡಿಕೊಂಡಿತು. ಈತನ ನೇತೃತ್ವದಲ್ಲಿ ಬೊಂಬಾಯಿ ಸರ್ಕಾರದ ಅಭಿವೃದ್ಧಿ ವಿಭಾಗ ಕೆಲಸ ಪ್ರಾರಂಭಿಸಿತು. 1145 ಎಕರೆ ಭೂಮಿ ಸಮುದ್ರದಿಂದ ದಕ್ಕಿಸಿಕೊಳ್ಳುವುದೇ ಈ ಯೋಜನೆ. ಏಳು ವರ್ಷಗಳು ಉರುಳಿದರೂ ಕೆಲಸ ಬೇಗನೆ ಮುಗಿಯುವ ಸಾಧ್ಯತೆ ಕಾಣಲಿಲ್ಲ. ಸರ್ ಬುಕಾನನ್ ಕೇಳಿದಷ್ಟು ಹಣ ಮಂಜೂರಾಗುತ್ತಿತ್ತು. ಸಮುದ್ರಕ್ಕೆ ಉಪ್ಪು ಚೆಲ್ಲಿದಂತೆ ಹಣ ಹರಿದುಹೋಗುತ್ತಿದೆ ಎಂಬ ಆಕ್ಷೇಪ ಬಲವಾಗತೊಡಗಿತು. ಬೊಂಬಾಯಿ ಕ್ರಾನಿಕಲ್ ಪತ್ರಿಕೆಯ ಆಂಗ್ಲ ಸಂಪಾದಕ, ಭಾರತದ ಬಂಧು ಬೆಂಜಮಿನ್ ಹಾರ್ನಿಮನ್ ಮತ್ತು ಬೊಂಬಾಯಿ ಪೌರ ಸಭೆಯ ಕೆ. ಎಫ್. ನಾರಿಮನ್ ಪ್ರತಿಭಟನೆಯ ಮುಂದಾಳುಗಳಾದರು. ಮುಂದೆ ಇದೇ ಹಾರ್ನಿಮನ್ ಅವರನ್ನು ಭಾರತದಿಂದ ಗಡೀಪಾರು ಮಾಡಲಾಯಿತು. ಅದು ಬೇರೆ ಕಥೆ. ಜನಾಭಿಪ್ರಾಯಕ್ಕೆ ಮಣಿದು ಸರ್ಕಾರ ವಿಶೇಷ ವಿಚಾರಣಾ ಸಮಿತಿಯನ್ನು ನೇಮಿಸಿತು. ಈಗಿನ ಮಂದಗತಿಯಲ್ಲಿ ಕೆಲಸ ಮುಗಿಯಲು ರೂ. 11 ಕೋಟಿ ಮತ್ತು ವರ್ಷ 20 ಬೇಕಾದೀತು ಎಂದಿತು ಸಮಿತಿ. ಗಾಬರಿಗೊಂಡ ಜನರ ಕೋರಿಕೆಯಂತೆ ಸರ್ಕಾರ ಮತ್ತೊಂದು ಸಮಿತಿಯನ್ನು ನೇಮಿಸಿತು. ಅಲಹಾಬಾದಿನ ಮುಖ್ಯ

ನ್ಯಾಯಾಧೀಶ ಸರ್ ಗ್ರಿಂವುಡ್‌ಮಿಯರ್ಸ್ ಸಮಿತಿಯ ಅಧ್ಯಕ್ಷರು. ಐವರ ಸಮಿತಿಯಲ್ಲಿ ವಿಶ್ವೇಶ್ವರಯ್ಯನವರು ಎಂಜಿನಿಯರಿಂಗ್ ತಜ್ಞರಲ್ಲಿ ಒಬ್ಬರೇ ಒಬ್ಬರು. ಈ ಸಮಿತಿ ಆಗಸ್ಟ್ 3, 1926 ಮೊದಲ ಸಾರಿ ಬೊಂಬಾಯಿಯಲ್ಲಿ ನೆರೆದು 38 ಸಾಕ್ಷಿಗಳ ವಿಚಾರಣೆ ನಡೆಸಿತು. ಅನಂತರ ಲಂಡನ್ನಿಗೆ ಪ್ರಯಾಣ ಬೆಳೆಸಿತು. ಅಲ್ಲಿ ಅಧ್ಯಕ್ಷರ ಆರೋಗ್ಯ ಕೆಟ್ಟಿತು. ವಿಶ್ವೇಶ್ವರಯ್ಯನವರು ಅಧ್ಯಕ್ಷತೆ ವಹಿಸಿ ಕಾರ್ಯ ನಿರ್ವಹಿಸಿದರು. ಇವರ ಸೂಕ್ಷ್ಮ ಪ್ರಶ್ನೆಗಳು ತಜ್ಞ ಬುಕಾನನ್ ಅವರನ್ನು ತತ್ತರಿಸುವಂತೆ ಮಾಡಿತು. ಇವರ ನಿರ್ವಿಕಾರ ಧೋರಣೆ ಎಲ್ಲರ ಪ್ರೀತಿ ಗೌರವಕ್ಕೆ ಪಾತ್ರವಾಯಿತು. ಸರ್ ಬುಕಾನನ್ ಸಿದ್ಧಪಡಿಸಿದ ಅಂದಾಜು ವೆಚ್ಚ ರೂ. 325 ಲಕ್ಷ. ಆದರೆ ಬೊಂಬಾಯಿ ಸರ್ಕಾರದ ಅಭಿವೃದ್ಧಿ ವಿಭಾಗದ ಅಂದಾಜು ರೂ. 1,102 ಲಕ್ಷ. ಅಜಗಜಾಂತರ ಭಿನ್ನತೆ. ಇಲಾಖೆಯ ಅಂದಾಜು ಹೆಚ್ಚು ವಾಸ್ತವಿಕ. ಸಮಿತಿಯ ವರದಿಯನ್ನು ಬ್ರಿಟಿಷ್ ಸರ್ಕಾರ ಡಿಸೆಂಬರ್ 1, 1926ರಲ್ಲಿ ಪ್ರಕಟಿಸಿತು. ಸರ್ ಬುಕಾನನ್ ಮತ್ತು ಕಂಪನಿ ಮಾಡಿದ ಮೋಸ, ಅಕೃತ್ಯಗಳನ್ನು ಬಯಲಿಗೆ ಎಳೆಯುವುದರಲ್ಲಿ ವಿಶ್ವೇಶ್ವರಯ್ಯನವರ ಪಾತ್ರ ಅಸಾಧಾರಣವಾಗಿತ್ತು. ಕಡೆಯಲ್ಲಿ ಈ ಸಮಿತಿ ವಿಶ್ವೇಶ್ವರಯ್ಯನವರ ಸೂಚನೆಯಂತೆ ಹಲವು ರಚನಾತ್ಮಕ ಸಲಹೆಗಳನ್ನು ನೀಡಿತು. ಅದರಂತೆ, ನಡೆದುಕೊಳ್ಳಲಾಯಿತು. ಇದರಿಂದ ವೆಚ್ಚ ಕುಗ್ಗಿ, ಕೆಲಸ ಬೇಗ ಮುಗಿಯಿತು. 'ಬ್ಯಾಕ್‌ಬೇ ರಿಕ್ಲಮೇಷನ್' ಎಂದು ಈ ಪ್ರಕರಣ ಪ್ರಸಿದ್ಧವಾಗಿದೆ.

ಸರ್ದಾರ್ ವಲ್ಲಭಾಯಿ ಪಟೇಲರ ಸಹೋದರ, ವಿಠ್ಠಲಭಾಯಿ ಪಟೇಲರು ಬೊಂಬಾಯಿ ಕಾರ್ಪೋರೇಷನ್ನಿನ ಅಧ್ಯಕ್ಷರಾಗಿದ್ದರು. ಆದಾಯ–ವ್ಯಯ ಸರಿದೂಗಿಸಿ ಆಡಳಿತದ ದಕ್ಷತೆ ಹೆಚ್ಚಿಸಲು ಇವರು ಎಪ್ರಿಲ್ 1924ರಲ್ಲಿ ವಿಶ್ವೇಶ್ವರಯ್ಯನವರನ್ನು ಏಕೈಕ ಸಲಹೆಗಾರರಾಗಿ ನೇಮಿಸಿದರು. ವಾರ್ಷಿಕ ವರದಿಗಳನ್ನೂ ಆಡಳಿತ ಕ್ರಮವನ್ನೂ ಪರಿಶೀಲಿಸಿ ಇವರು ಆರು ವಾರಗಳಲ್ಲಿ ತಾತ್ಕಾಲಿಕ ವರದಿ ಒಪ್ಪಿಸಿದರು. ತದನಂತರ ಕೂಲಂಕಷ ವಿಚಾರ ಮಾಡಿ ಜನವರಿ 1925ರಲ್ಲಿ ಮತ್ತೊಂದು ಪೂರ್ಣ ವರದಿ ಒಪ್ಪಿಸಿದರು. ವೆಚ್ಚವನ್ನು 25 ಲಕ್ಷ ರೂಪಾಯಿಗಳಿಂದ ಕುಗ್ಗಿಸುವ ಸಾಧ್ಯತೆ ತೋರಿಕೊಟ್ಟರು. ಆಡಳಿತದ ದಕ್ಷತೆ ಹೆಚ್ಚಿಸಲು ಇವರಿತ್ತ ಸಲಹೆಗಳು ಸರ್ವಮಾನ್ಯವಾಯಿತು.

ಬೊಂಬಾಯಿ ಕಾರ್ಪೋರೇಷನ್ನಿಗೆ ವಿಶ್ವೇಶ್ವರಯ್ಯನವರು ನೀಡಿದ ವರದಿ ಸರ್ವಮಾನ್ಯವಾಗಿ, ಹಲವಾರು ಪುರಸಭೆಗಳಿಂದ ಇವರಿಗೆ ವಿನಂತಿಗಳು ಬಂದುವು. ಎಲ್ಲವನ್ನೂ ಮನ್ನಿಸುವುದು ಸಾಧ್ಯವಿರಲಿಲ್ಲ. ಆದರೂ ಕರಾಚಿ ಪುರಸಭೆಯ ಪ್ರಾರ್ಥನೆ ಸ್ವೀಕರಿಸಿ ಉತ್ಕೃಷ್ಟ ಸಲಹೆಗಳ ವರದಿ 1926ರಲ್ಲಿ ಒಪ್ಪಿಸಿದರು. ಕೆಲಸದ ಒತ್ತಡದಿಂದ ಮದರಾಸು ಮತ್ತು ಅಹಮದಾಬಾದ್ ಪೌರಸಭೆಗಳ ಪ್ರಾರ್ಥನೆ ಸ್ವೀಕರಿಸಲು ವಿಶ್ವೇಶ್ವರಯ್ಯನವರಿಗೆ ಸಾಧ್ಯವಾಗಲಿಲ್ಲ.

ಕೇಂದ್ರ ಶಾಶನಸಭೆಯ ಕೋರಿಕೆಯಂತೆ ಭಾರತದ ಆರ್ಥಿಕ ಸ್ಥಿತಿಗತಿ ವಿಚಾರಣಾ ಸಮಿತಿಯ ಅಧ್ಯಕ್ಷರಾಗಿ 1924ರಲ್ಲಿ ವಿಶ್ವೇಶ್ವರಯ್ಯನವರು ಕಾರ್ಯ ನಿರ್ವಹಿಸಿ ವರದಿ ಸಲ್ಲಿಸಿದರು. ಎಂಜಿನಿಯರಿಂಗ್ ತಜ್ಞ ಎನಿಸಿಕೊಂಡಿದ್ದ ಇವರನ್ನು ಆರ್ಥಿಕ ವಿಚಾರಣಾ ಸಮಿತಿಯ ಅಧ್ಯಕ್ಷರಾಗಿ ಇಂಡಿಯಾ ಸರ್ಕಾರ ನೇಮಿಸಿದ್ದು ಇವರ ವಿಶಾಲ ಜ್ಞಾನಕ್ಕೆ ಮನ್ನಣೆ ದೊರಕಿದಂತಾಯಿತು. ಇದೇ ರೀತಿಯಲ್ಲಿ ವಿಶ್ವೇಶ್ವರಯ್ಯನವರು ನವದಿಲ್ಲಿಯ ನಿರ್ಮಾಣವೆಚ್ಚ ವಿಚಾರಣಾ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು.

ರಾಜಕೀಯದಲ್ಲಿ ಕ್ರಿಯಾತ್ಮಕ ಆಸಕ್ತಿ ವಹಿಸುವುದರಿಂದ ರಚನಾತ್ಮಕ ಕಾರ್ಯಕ್ಕೆ ಅಧಿಕ ಗಮನ ಕೊಡಲು ಸಾಧ್ಯವಾಗದೆಂದು ವಿಶ್ವೇಶ್ವರಯ್ಯನವರು ಹೆಚ್ಚು ಆಸಕ್ತಿ ವಹಿಸುತ್ತಿರಲಿಲ್ಲ. ಆದರೂ ದೇಶದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು. ಅಧಿಕಾರ ನಿಮಿತ್ತ ದೇಶೀಯ ಸಂಸ್ಥಾನಗಳ ಭವಿಷ್ಯ ನಿರ್ಧರಿಸಲು ಬ್ರಿಟಿಷ್ ಪ್ರಭುತ್ವ 1927ರಲ್ಲಿ ನೇಮಿಸಿದ ದಿವಾನರುಗಳ ಸಭೆಯಲ್ಲಿ ಭಾಗವಹಿಸಿದ್ದರು. ಗಾಂಧಿಯವರ ಅಸಹಕಾರ ಚಳವಳಿ ಇವರಿಗೆ ಸೂಕ್ತವೆನಿಸಿರಲಿಲ್ಲ. ಬ್ರಿಟಿಷ್ ಪ್ರಭುತ್ವದ ಉದಾರ ನೀತಿಯಲ್ಲಿ ಇವರ ದೃಷ್ಟಿ ಸಂಪೂರ್ಣವಾಗಿ ಅಳಿದಿರಲಿಲ್ಲ. 1921ರಲ್ಲಿ ಗಾಂಧೀಜಿ ಅಸಹಕಾರ ಚಳವಳಿ ಹೂಡಿದರು. ದೇಶದ ಶಾಂತಿ ವಾತಾವರಣ ಕದಡಿತ್ತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಶಾಂತಿ ವಾತಾವರಣ ಕುದುರಿಸಲು ಸರ್ವಪಕ್ಷಗಳ ಸಮ್ಮೇಳನ ಬೊಂಬಾಯಿಯಲ್ಲಿ ನೆರೆಯಿತು. ಮೊದಲ ದಿನ ಸರ್ ಶಂಕರನ್ ನಾಯರ್ ಅಧ್ಯಕ್ಷತೆ ವಹಿಸಿದ್ದರು. ಕಾರಣಾಂತರದಿಂದ ಮಾರನೆಯ ದಿನ ಅವರು ಅಧ್ಯಕ್ಷತೆ ವಹಿಸಲು ನಿರಾಕರಿಸಿದರು. ಆಗ ಸಭೆಯಲ್ಲಿ ಉಪಸ್ಥಿತರಿದ್ದ ವಿಶ್ವೇಶ್ವರಯ್ಯನವರು ಸರ್ವಾನುಮತದಿಂದ ಆಯ್ಕೆಯಾಗಿ ಅಧ್ಯಕ್ಷರಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರು. 1929ರಲ್ಲಿ ತಿರುವಾಂಕೂರಿನಲ್ಲಿ ನಡೆದ ದಕ್ಷಿಣ ಭಾರತ ಸಂಸ್ಥಾನಗಳ ಪ್ರಜೆಗಳ ಸಮ್ಮೇಳನದ ಅಧ್ಯಕ್ಷತೆ ಇವರೇ ವಹಿಸಿದ್ದರು. ಹೀಗೆ ವಿಶ್ವೇಶ್ವರಯ್ಯನವರು ಪ್ರಭು ಮತ್ತು ಪ್ರಜೆ ಉಭಯತ್ರರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದರು.

ಬೆಂಗಳೂರಿನ ಸುಲ್ತಾನ್‌ಪೇಟೆ ಹಿಂದೂ–ಮುಸಲ್ಮಾನರಿಂದ ಕೂಡಿದ ಜನಭರಿತ ಪ್ರದೇಶ. ಇಲ್ಲೊಂದು ಶಾಲೆ. ಹಿಂದೂ ಶಾಲೆ ಎಂದೇ ಹೆಸರು. ಶಾಲೆಯ ಎದುರು ಪುರಸಭೆಯ ಅಧ್ಯಕ್ಷರೂ, ಪ್ರಜಾಪ್ರತಿನಿಧಿ ಸಭೆಯ ಸದಸ್ಯರೂ ಆದ ಪ್ರತಿಷ್ಠಿತ ವ್ಯಕ್ತಿ ಅಬ್ಬಾಸ್ ಖಾನರ ಹಳೆಯ ಮನೆ. ಈ ಶಾಲೆಯ ಆವರಣದಲ್ಲಿ ಗಣಪತಿ ಮತ್ತು ನವಗ್ರಹಗಳ ಸುಂದರ ವಿಗ್ರಹಗಳು ಮೂಲೆಗುಂಪಾಗಿ ಬಿದ್ದಿದ್ದುವು. 1928ರಲ್ಲಿ ಶಾಲೆಯ ವಿದ್ಯಾರ್ಥಿಗಳು ಗಣಪತಿಗಾಗಿ ಸಣ್ಣ ಗೂಡು ಕಟ್ಟಿ ವಿಗ್ರಹ ಅಲ್ಲಿ ಸ್ಥಾಪಿಸಿದರು. ಮುಂದೆ ಇದು ದೇವಾಲಯವಾದೀತು ಎಂದು ಆಕ್ಷೇಪಿಸಿದರು ಅಬ್ಬಾಸ್ ಖಾನ್. ಸರ್ಕಾರ ಮಧ್ಯೆ ಪ್ರವೇಶಿಸಿ ವಿಗ್ರಹವನ್ನು ಅಲ್ಲಿಂದ ತೆಗೆಸಿತು. ಇದು ಹಿಂದೂ–ಮುಸ್ಲಿಂ ಭಿನ್ನತೆಗೆ ಎಡೆಗೊಟ್ಟಿತು. ಸಾರ್ವಜನಿಕ ನಾಯಕರ ಪ್ರವೇಶದಿಂದ ಪರಿಸ್ಥಿತಿ ವಿಷಮಿಸಿ

ಹೊಡೆದಾಟ ನಡೆಯಿತು. ಗುಂಡು ಹಾರಿತು. ಗಲಭೆಯ ಕಾರಣ, ಇಂಥ ಗಲಭೆಗಳು ಸಂಭವಿಸದಂತೆ ಕೈಗೊಳ್ಳಬೇಕಾದ ಕ್ರಮ ಇವನ್ನು ಸೂಚಿಸಲು ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ವಿಚಾರಣಾ ಸಮಿತಿಯೊಂದನ್ನು ಸರ್ಕಾರ ನೇಮಿಸಿತು. ಸಮಿತಿ ಒಪ್ಪಿಸಿದ ವರದಿಯಲ್ಲಿ ಪ್ರಜಾಪ್ರಭುತ್ವವೇ ಇದಕ್ಕೆ ಮದ್ದು ಎಂಬ ಅಭಿಪ್ರಾಯ ವಿಶ್ವೇಶ್ವರಯ್ಯನವರು ವ್ಯಕ್ತಪಡಿಸಿದರು.

ಬೆಂಗಳೂರಿನ ತಾತಾ ವಿಜ್ಞಾನ ಮಂದಿರ, ತಾತಾ ಅವರ ಕಬ್ಬಿಣ ಮತ್ತು ಉಕ್ಕಿನ ಕಂಪನಿಯ ಸಮಿತಿಯ ಸದಸ್ಯರಾಗಿದ್ದರು. ಅಂತೆಯೇ ಹಲವಾರು ಸಂಘ ಸಂಸ್ಥೆಗಳ ಮೂಲಕ ವಿಶ್ವೇಶ್ವರಯ್ಯನವರು ಅಪಾರ ಸೇವೆ ನಾಡಿಗೆ ಸಲ್ಲಿಸಿರುತ್ತಾರೆ.

# 21. ಆದರ್ಶ ವ್ಯಕ್ತಿ

ಪುನರ್ಜನ್ಮದಲ್ಲಿ ನಂಬಿಕೆಯುಳ್ಳವರ ಪ್ರಾರ್ಥನೆ ಮೋಕ್ಷ ಸಾಧನೆ. ಮತ್ತೊಂದು ಜನ್ಮ ತಾಳದಿರುವ ಬಯಕೆ.

ಮತ್ತೊಮ್ಮೆ ಮಾನವನಾಗಿ ಹುಟ್ಟಲು ಬಯಸುವಿರಾ ಎಂಬ ಪ್ರಶ್ನೆಗೆ ಅವರ ಉತ್ತರ ಅಪೂರ್ವ. "ಬಾಲ್ಯದಲ್ಲಿ ನಾನು ಬಯಸುತ್ತಿದ್ದ ಬಯಕೆಗಳೆಲ್ಲ ಈಗ ಪೂರ್ಣವಾಗಿವೆ. ಬಯಸದೆಯೇ ಈ ಭೂಮಿಯಲ್ಲಿ ನಾನು ಹುಟ್ಟಿದೆ. ಜೀವನ ನನಗೆ ಸುಖಪ್ರದ ವಾಗಿಯೇ ಇದೆ." "ಮತ್ತೆ ಬಾಳಬಯಸುವಿರಾ?" ಎಂದು ಕೇಳಿದರೆ, "ಸಂತೋಷದಿಂದ ಆಗಲಿ ಎಂದು, ಫ್ರೆಂಚ್ ದಾರ್ಶನಿಕ ರಿನೊ ಹೇಳುವಂತೆ ನಾನೂ ಹೇಳುತ್ತೇನೆ" ಎಂದಿರುತ್ತಾರೆ ವಿಶ್ವೇಶ್ವರಯ್ಯ.

ಜೀವನ ಅವರಿಗೆ ಆಚಂದ್ರಾರ್ಕ ಕೀರ್ತಿ ಗಳಿಸಿ ಕೊಟ್ಟಿತು. ಅನಪೇಕ್ಷಿತವಾಗಿ ಅವರಿಗೆ ದೊರೆತ ಬಿರುದುಬಾವಲಿಗಳು ಪುರಸ್ಕಾರಗಳು ಇದಕ್ಕೆ ಸಾಕ್ಷಿ. ವಿದ್ಯಾರ್ಥಿದೆಸೆ ಯಲ್ಲಿ ಹಲವಾರು ಪದಕಗಳು. ಬ್ರಿಟಿಷ್ ಪ್ರಭುತ್ವದಿಂದ ಸಿ.ಪಿ.ಇ. ಮತ್ತು ಕೆ.ಸಿ.ಐ.ಇ. ಬಿರುದು. ಕಲ್ಕತ್ತ, ಪಾಟ್ನ, ಅಲಹಾಬಾದ್, ಜಾಧವಪುರ, ಬೊಂಬಾಯಿ, ವಾರಣಾಸಿ, ಆಂಧ್ರ, ಮೈಸೂರು ವಿಶ್ವವಿದ್ಯಾಲಯಗಳಿಂದ ಗೌರವ ಪದವಿ. ಹಲವಾರು ಸಂಘ, ಸಂಸ್ಥೆಗಳಿಂದ ಸನ್ಮಾನ, ಗೌರವ ಪದಾಧಿಕಾರ. ಕಡೆಗೆ ಸ್ವತಂತ್ರ ಭಾರತ ಸಲ್ಲಿಸಬಹು ದಾದ ಅತ್ಯುನ್ನತ ಪ್ರಶಸ್ತಿ 'ಭಾರತ ರತ್ನ'. ತನ್ನ ಬಯಕೆಗಳೆಲ್ಲ ಪೂರ್ಣವಾದುವು ಎಂದು ಹೇಳಿಕೊಳ್ಳಲು ಆಧಾರ.

ಶತಮಾನಕ್ಕೂ ಹೆಚ್ಚು ಕಾಲ ಸಾರ್ಥಕ ಜೀವನ ನಡೆಸಿದರು. ಇವರ ಜನ್ಮಶತಮಾ ನೋತ್ಸವ ಸೆಪ್ಟೆಂಬರ್ 15, 1960ರಂದು ದೇಶ ಆಚರಿಸಿತ್ತು. ಬೆಂಗಳೂರಿನ ಲಾಲ್‌ಬಾಗಿನಲ್ಲಿ ಅಂದು ವಿಶೇಷ ಸನ್ಮಾನ ಸಮಾರಂಭ ಆಚರಿಸಲ್ಪಟ್ಟಿತು. ಅಳಿಯ ಫಿರೋಜ್ ಗಾಂಧಿ ದೈವಾಧೀನರಾಗಿ ಇನ್ನೂ ಒಂದು ವಾರ ಆಗದಿದ್ದರೂ ಕರ್ತವ್ಯ ಪ್ರಜ್ಞೆಯ ಪ್ರಧಾನಿ ಜವಾಹರಲಾಲ್ ನೆಹರು ಕರ್ತವ್ಯಪರಾಯಣ ವಿಶ್ವೇಶ್ವರಯ್ಯ ನವರಿಗೆ ತಮ್ಮ ಗೌರವ ಕಾಣಿಕೆ ಸಲ್ಲಿಸಲು ವಿಶೇಷ ವಿಮಾನದಲ್ಲಿ ಹಾರಿ ಬಂದರು. ವೃದ್ಧ ಪಿತಾಮಹ ವಿಶ್ವೇಶ್ವರಯ್ಯನವರು ಸ್ವತಃ ಉಪಸ್ಥಿತರಿದ್ದರು. "ಭವ್ಯಭಾರತ ಕನಸು ಕಾಣುತ್ತಿದ್ದ ವಿಶ್ವೇಶ್ವರಯ್ಯನವರು ಕೇವಲ ಕನಸುಗಾರರಾಗಿರಲಿಲ್ಲ. ಚಿಂತಕರೂ ಕಾರ್ಯತತ್ಪರರೂ ಆಗಿದ್ದರು. ತಮ್ಮ ಅಥವಾ ಕೌಟುಂಬಿಕ ಜೀವನದಲ್ಲಿ ಎಂದೂ ಅವರು

ಮಗ್ನರಾಗಿರಲಿಲ್ಲ. ಭೂತಕಾಲಕ್ಕಿಂತ ಭವಿಷ್ಯತ್ಕಾಲಕ್ಕೆ ಹೆಚ್ಚು ಗಮನ ಹರಿಸುತ್ತಿದ್ದರು, ಜನರ ಹಿತಾಸಕ್ತಿಯಲ್ಲಿ, ಭಾರತದ ಭವಿಷ್ಯದಲ್ಲಿ ಅವರ ಚಿಂತನ ಕೇಂದ್ರೀಕೃತವಾಗಿರುತ್ತಿತ್ತು. ಅವರದು ಆದರ್ಶ ಜೀವನ" ಈ ವಾಕ್ಯಗಳಲ್ಲಿ ಅಯ್ಯನವರಿಗೆ ಪ್ರಧಾನಿ ತಮ್ಮ ಗೌರವ ಸಮರ್ಪಿಸಿದರು.

ಕಿಕ್ಕಿರಿದ ಅಂದಿನ ಸಭೆಯ ಅಧ್ಯಕ್ಷತೆ ರಾಜಪ್ರಮುಖ ಜಯಚಾಮರಾಜರು ವಹಿಸಿದ್ದರು. ಈ ಸಂದರ್ಭದಲ್ಲಿ ಅವರಾಡಿದ ಮಾತುಗಳು ಸ್ಮರಣೆಗೆ ಯೋಗ್ಯವಾಗಿವೆ. "ತಮ್ಮ ಜೀವಿತ ಕಾಲದಲ್ಲಿಯೇ ಅಪಾರ ಕೀರ್ತಿ, ಗೌರವ ಮತ್ತು ಜನಪ್ರಿಯತೆ ಗಳಿಸುವ ಬಹು ಸ್ವಲ್ಪ ಜನರಲ್ಲಿ ವಿಶ್ವೇಶ್ವರಯ್ಯನವರೂ ಒಬ್ಬರು. ರಾಷ್ಟ್ರೋನ್ನತಿಯ ಚಿಂತನೆ ಮತ್ತು ಕಾರ್ಯಪ್ರಗತಿಯಲ್ಲಿ, ತಾಂತ್ರಿಕ ವಿಭಾಗದಲ್ಲಿ ಅವರಿಂದ ಪ್ರಯೋಜನ ಪಡೆಯದ ಕ್ಷೇತ್ರಗಳು ತುಂಬ ವಿರಳ. ಎಂಜಿನಿಯರಿಂಗ್ ವಿಭಾಗದ ಎಲ್ಲ ಭಾಗಗಳು, ಅದರಲ್ಲೂ ವಿಶೇಷವಾಗಿ ನೀರಾವರಿ, ಜಲಾಶಯ, ಕಟ್ಟೆ, ಕುಡಿಯುವ ನೀರಿನ ಯೋಜನೆ, ವಿದ್ಯುಜ್ಜನಕ, ಸೇತುವೆ ನಿರ್ಮಾಣ, ವಿಶ್ವವಿದ್ಯಾಲಯದ ಶಿಕ್ಷಣ, ಔದ್ಯೋಗಿಕ ಶಿಕ್ಷಣ ನಗರ ನಿರ್ಮಾಣ, ಕೈಗಾರಿಕೆ ಮತ್ತು ಬ್ಯಾಂಕಿಂಗ್, ವಾಣಿಜ್ಯೋದ್ಯಮ, ವಸ್ತು ನಿರ್ಮಾಣ ಹೀಗೆ ಪ್ರತಿಯೊಂದು ಕ್ಷೇತ್ರದಲ್ಲೂ ಅವರ ಕೈವಾಡ ಕಾಣಬಹುದು. ಇವೆಲ್ಲವೂ ರೂಪುತಾಳಿ ಅಸ್ತಿತ್ವಕ್ಕೆ ಬರಲು ಅವರ ಚಿಂತನೆಯೇ ಮುಖ್ಯ ಕಾರಣ. ಅವರ ದೂರಾಲೋಚನೆ, ಕಾರ್ಯಕ್ಷಮತೆ, ದಕ್ಷತೆ, ವಿಶೇಷ ಪರಿಜ್ಞಾನ, ಅನುಭವ, ಬುದ್ಧಿವಂತಿಕೆ, ಧೀಮಂತಿಕೆ ಇವುಗಳ ಪರಿಣಾಮವಾಗಿ ರೂಪುಗೊಂಡಿರುವ ನಿರ್ಮಾಣಗಳು ಅವರ ಅಸಾಧಾರಣ ಕೌಶಲ್ಯ, ಸಾಮರ್ಥ್ಯ, ದಕ್ಷತೆ, ದೇಶಭಕ್ತಿಯ ಚಿರಸ್ಮಾರಕಗಳಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ. ಅದರಲ್ಲೂ ನಮ್ಮ ಮೈಸೂರು ರಾಜ್ಯಕ್ಕೆ ಸಲ್ಲಿಸಿರುವ ಸೇವೆ ಚಿರಸ್ಮರಣೀಯ. ಕಾರ್ಯತತ್ಪರತೆ, ಸಾಹಸಮಯ ಬದುಕು, ಧೈರ್ಯ, ಸ್ಥೈರ್ಯ, ಬುದ್ಧಿಶಕ್ತಿ, ಎದೆಗಾರಿಕೆ ಇವುಗಳ ಸಮುಚ್ಚಯವೇ ವಿಶ್ವೇಶ್ವರಯ್ಯ. ಆದಕಾರಣ ದೈವ ಕೃಪೆ ಅವರ ಮೇಲೆ ಅಪಾರ."

ವಿಶ್ವೇಶ್ವರಯ್ಯನವರು ಹುಟ್ಟಿನಿಂದ ಬಡವರು, ಮನೆತನದಿಂದ ಸಭ್ಯರು, ಬೆಳವಣಿಗೆಯಿಂದ ಸಂಯಮಿ ಸ್ವಭಾವದಿಂದ ಸಜ್ಜನರು. ಅಜಾತಶತ್ರು, ಪರೋಪಕಾರಿ. ವೃತ್ತಿಯಿಂದ ಎಂಜಿನಿಯರ್, ಸಂದರ್ಭದಿಂದ ದಿವಾನ್, ಮನೋಧರ್ಮದಿಂದ ವಿಜ್ಞಾನಿ, ಶ್ರದ್ಧೆಯಿಂದ ಉದ್ಯಮಿ. ಅವರು ಕೈಗೊಂಡಿದ್ದುದು ಕಠೋರ ವ್ರತ. ಅದನ್ನು ತಪ್ಪದೆ ನಡೆಸುವ ಧೈರ್ಯ, ಸ್ಥೈರ್ಯ, ಸಾಮರ್ಥ್ಯ ಅವರಲ್ಲಿದ್ದುವು. ದುಡಿದರೆ ಉದ್ಧಾರ, ದುಡಿಯದಿದ್ದರೆ ವಿನಾಶ, ಈ ಸಂದೇಶ ಮುಟ್ಟಿಸುವ ಉದ್ದೇಶದಿಂದ ಸ್ವತಃ ದುಡಿದರು. ದುಡಿಮೆಯ ಹಿರಿಮೆ ತೋರಿಕೊಟ್ಟರು. ನಾಡಿನ ಏಳ್ಗೆಗೆ ದುಡಿಯಬೇಕೆಂದು ತಮ್ಮ ಆರೋಗ್ಯ ಕಾಪಾಡಿಕೊಂಡು ಬಂದರು. ದುಡಿದು ದೊಡ್ಡವರಾದರು.

ಆರೋಗ್ಯವಂತರಾಗಿರಲು ಪ್ರತಿದಿನ ಮೂರು–ನಾಲ್ಕು ಮೈಲಿ ನಡೆಯುವರು.

ನಗರದ ಕಲುಷಿತ ವಾತಾವರಣದಿಂದ ಹತ್ತಾರು ಮೈಲಿ ದೂರ ಮೋಟಾರಿನಲ್ಲಿ ಗಮಿಸುವರು. ಅಲ್ಲಿ ಮೋಟಾರಿನಿಂದ ಇಳಿದು ಸರಸರನೆ ಹೆಜ್ಜೆ ಹಾಕುವರು. ಅನತಿ ದೂರದಲ್ಲಿ ಅವರ ಹಿಂದೆ ಒಬ್ಬ ಆಳು ಮತ್ತು ಮೋಟಾರು ಹಿಂಬಾಲಿಸುವುದು, ಆಯಾಸವಾದಾಗ ಕೂಡುವ ಮತ್ತು ಹಿಂತಿರುಗುವ ಉದ್ದೇಶದಿಂದ. ನಿವೃತ್ತ ದಿವಾನ್ ಸರ್ ಮಿರ್ಜಾ ಜೊತೆಗೂಡುತ್ತಿದ್ದರು.

ಎಲ್ಲದರಲ್ಲೂ ಸುವ್ಯವಸ್ಥೆ. ತಮ್ಮ ಮೇಜಿನ ಮೇಲೆ, ಕೆಂಪು, ಹಸಿರು, ನೀಲಿ, ಕಪ್ಪು ಬಣ್ಣದ ಸೀಸದ ಕಡ್ಡಿಗಳನ್ನು ಮೊನಚಾಗಿ ಹೆರೆದು ಇಟ್ಟಿರುವರು. ರಬ್ಬರ್, ಗೋಂದು, ಕತ್ತರಿ, ಚಾಕು, ಗುಂಡುಸೂಜಿ ವ್ಯವಸ್ಥಿತವಾಗಿರುವುವು. ರಬ್ಬರ್ ಜೋಡಿಸಿದ ಪೆನ್ಸಿಲ್ ಅವರಿಗೆ ಪ್ರಿಯ. ಇತರರು ಇವನ್ನು ಮುಟ್ಟಲಾಗದು. ಟೈಪು ಆಗಬೇಕಾದ ಪತ್ರದ ಕರಡು ಪ್ರತಿ ಮೊನಚಾದ ಸೀಸದ ಕಡ್ಡಿಯಿಂದ ಸಣ್ಣ ಅಕ್ಷರಗಳಲ್ಲಿ ಕೊರೆಯುವರು. ಸಮಂಜಸ ಪದಕ್ಕಾಗಿ ಕರಡು ಪ್ರತಿಯ ಪದಗಳನ್ನು ರಬ್ಬರಿನಿಂದ ಅಳಿಸಿ, ಅಳಿಸಿ ಐದಾರು ಸಾರಿ ತಿದ್ದಿ ಸರಿಪಡಿಸುವರು. ಡಿ. ವಿ. ಗುಂಡಪ್ಪನವರು ಒಮ್ಮೆ ಕೊಟ್ಟ ರಬ್ಬರ್ ರಹಿತ ಪೆನ್ಸಿಲ್ ಬೇಡವೆಂದು ಎಸೆದುಬಿಟ್ಟರು. ಹೊರಕ್ಕೆ ಹೋಗುವಾಗ ಕಿಸೆಯಲ್ಲಿ ತುಂಡು ಪೆನ್ಸಿಲ್, ಚೂರು ಕಾಗದ ಲಕೋಟೆಯಲ್ಲಿ ಹಾಕಿಕೊಳ್ಳುವರು. ಅಗತ್ಯ ವಿಷಯಗಳನ್ನು ಕೂಡಲೇ ಟಿಪ್ಪಣಿ ಮಾಡಿಕೊಂಡು ಮನೆಗೆ ಬಂದು, ನೋಟ್ ಪುಸ್ತಕದಲ್ಲಿ ಬರೆದಿಡುವರು.

ವಿಶ್ವೇಶ್ವರಯ್ಯನವರು ನಿರೋಗಿಯಾಗಿ ಶತಾಯುಷಿಯಾಗಿ ಜೀವಿಸಿರಲು ಆಹಾರ, ವಿಹಾರ, ನಿದ್ರೆ, ವ್ಯಾಯಾಮ, ಸಂಯಮ ಇವು ಮುಖ್ಯ ಕಾರಣಗಳು. ಮಿತಾಹಾರಿ, ತೂಗಿದಂತೆ ಊಟ. ಒಂದು ಮಿಳ್ಳೆ ಹೆಚ್ಚೂ ಆಗಲಾಗದು, ಕಡಮೆಯೂ ಆಗಬಾರದು. ರಾತ್ರಿ 10ಕ್ಕೆ ಮಲಗುವರು, ಬೆಳಿಗ್ಗೆ 6ಕ್ಕೆ ಏಳುವರು. ಬೆಳಿಗ್ಗೆ ಲಘು ಉಪಾಹಾರ, ಲಘು ಕಾಫಿ. ಊಟಕ್ಕೆ ಎರಡು ಬ್ರೆಡ್ ತುಣುಕು, ಅಥವಾ ಎರಡು ಸಣ್ಣ ಚಪಾತಿ, ಕೆಲವು ಚಮಚೆ ಅನ್ನ, ಸಾರು, ಸ್ವಲ್ಪ ಮೊಸರು, ಒಂದು ಬೆಂದ ಸೇಬಿನ ಹಣ್ಣು, ನಂಜನಗೂಡು ರಸಬಾಳೆ, ಮಧ್ಯಾಹ್ನ ಬಿಸ್ಕತ್ತು, ಕಾಫಿ. ನಡುವೆ ಏನನ್ನೂ ಸೇವಿಸರು.

ವಿಶ್ವೇಶ್ವರಯ್ಯನವರು ಅರ್ಧ ಶತಮಾನಕ್ಕೂ ಹೆಚ್ಚು ಕಾಲ ದೊಡ್ಡದೊಡ್ಡ ಅಧಿಕಾರ ಸ್ಥಾನಗಳಲ್ಲಿದ್ದರು. ಸಣ್ಣ ಉದ್ಯೋಗಗಳಿಗೆ ಬೇಕಾದವರನ್ನು ನೇಮಿಸಿಕೊಳ್ಳಬಹುದಾಗಿತ್ತು. ಬಂಧುಬಳಗದವರಿಗೆ ಸರ್ಕಾರಿ ನೌಕರಿ ಕಲ್ಪಿಸಿ ಕೊಡುವುದು ನಡೆದುಬಂದ ದಾರಿ. ಇವರು ಅದಕ್ಕೆ ಹೊರತಾಗಿದ್ದರು. ಬಂಧು ಎಂದು ಹೇಳಿಕೊಳ್ಳುವುದು ಅನರ್ಹತೆಯಾಗುತ್ತಿತ್ತು. ದಿವಾನ್ ಪದವಿ ಸ್ವೀಕರಿಸುವ ಮುನ್ನ ಭೋಜನಕೂಟ ಏರ್ಪಡಿಸಿ ಬಂಧುಬಳಗ ಬರಮಾಡಿಕೊಂಡರು. ಭೋಜನವಾದ ಮೇಲೆ, ಆಹ್ವಾನಿತರು ವೀಳ್ಯ ಸವಿಯುತ್ತಿದ್ದಾಗ, ಕೆಲಸ ಕೊಡಿಸಿರೆಂದು ಯಾರೂ ತನ್ನನ್ನು ಕೇಳಲಾಗದು, ಈ ರೀತಿಯ ವಚನ ಕೊಟ್ಟರೆ ಮಾತ್ರ ದಿವಾನ್ ಸ್ಥಾನ ಸ್ವೀಕರಿಸುವುದಾಗಿ ತಿಳಿಸಿದರು.

ಸೋದರಮಾವ ಎಚ್ ರಾಮಯ್ಯನವರಿಗೆ ಈ ರೀತಿಯ ಪತ್ರ ಬರೆದು ತಿಳಿಸಿದರು. ಅಷ್ಟು ನಿರ್ದಾಕ್ಷಿಣ್ಯ ನಿಷ್ಠುರ ಜೀವನ. ಸೋದರ ಸಂಬಂಧಿಗಳಿಗೆ ಅರ್ಹತೆ ಇದ್ದರೂ ಮೈಸೂರು ಸಂಸ್ಥಾನದಲ್ಲಿ ಕೆಲಸ ಕೊಡಿಸದೆ ಹೊರ ಪ್ರಾಂತ್ಯಗಳಿಗೆ ದೂಡಿದರು. ಬಡತನದ ಬಂಧುಗಳಿಗೆ ಪ್ರತಿ ಮಾಸವೂ ತನ್ನ ವೇತನದಿಂದ ನಿರ್ದಿಷ್ಟ 'ಮನಿ ಆರ್ಡರ್' ಕಳುಹಿಸಿ ಕೊಡುತ್ತಿದ್ದರು. ನಿವೃತ್ತರಾದ ಮೇಲೂ ತನಗೆ ಅಗತ್ಯವಾದ ಸ್ವಲ್ಪ ಭಾಗ ಇಟ್ಟುಕೊಂಡು ಮಿಕ್ಕುದೆಲ್ಲವನ್ನೂ ಬಂಧುಗಳಿಗೆ ಹಂಚಿಬಿಡುತ್ತಿದ್ದರು. ಉಯಿಲುಪತ್ರದಲ್ಲಿ ದೀರ್ಘ ಕಾಲ ತಮ್ಮ ಸೇವಕರಾಗಿದ್ದವರಿಗೆ ಸ್ವಲ್ಪ ಹಣ ಕೊಡುವಂತೆ ಬರೆದಿಟ್ಟರು. ಬಂಧುಗಳನ್ನು ತಮ್ಮ ಮನೆಯಲ್ಲಿ ಕೂಡಿ ಬಾಳಲು ಅವಕಾಶ ಕೊಡುತ್ತಿರಲಿಲ್ಲ. ಪತ್ನೀವಿಯೋಗದಿಂದ ವಿಧುರರಾಗಿ, ಏಕಾಂಗಿಯಾಗಿಯೇ ಕಾಲಕಳೆದರು. ಮನೆಯಲ್ಲಿ ಒಬ್ಬ ಅಡುಗೆಯವ, ಒಬ್ಬ ನೌಕರ. ಅಂತ್ಯಕಾಲಕ್ಕೆ ಕೆಲವು ವರ್ಷಗಳ ಮೊದಲು ಹಿತೈಷಿಗಳ ಒತ್ತಾಯಕ್ಕೆ ಮಣಿದು ಸೋದರನ ಮಗ ಎಂ. ಆರ್. ಕೃಷ್ಣಮೂರ್ತಿ ಮತ್ತು ಅವರ ಕುಟುಂಬ ಮನೆಯಲ್ಲಿ ತನ್ನೊಡನೆ ಬಂದು ಉಳಿಯಲು ಎಡೆಗೊಟ್ಟರು. ಸಜ್ಜನರ ಸಹವಾಸ ಮಾತ್ರ ಮಾಡುತ್ತಿದ್ದರು. ಯಾರಿಗೂ ಶಿಫಾರಸ್ ಪತ್ರ ಕೊಡರು. ಸರ್ಕಾರಿ ನೌಕರರನ್ನು ತುಂಬ ಗೌರವದಿಂದ ಕಾಣುವರು. ಒಮ್ಮೆ ಒಬ್ಬ ಅಧಿಕಾರಿ ನಾನು ಇವರ ಸೇವಕನಾಗಿದ್ದೆ ಎಂದು ಹೇಳಿಕೊಂಡ, ಇನ್ನೊಬ್ಬರಲ್ಲಿ. "ಇಲ್ಲ, ಅವರು ನನ್ನ ಸೇವಕರಾಗಿರಲಿಲ್ಲ, ಸಹಾಯಕರಾಗಿದ್ದರು" ಎಂದರು. ಆತ್ಮಸ್ತುತಿ ಇವರಿಗೆ ಅಪ್ರಿಯ. "ಯೋಜಕ ನಾನು, ಸಾಧಕರು ಅಧಿಕಾರಿಗಳು. ಇದರ ಯಶಸ್ಸಿಗೆ, ಕೀರ್ತಿಗೆ ಪಾತ್ರರು ಅವರು ಮತ್ತು ಸರ್ಕಾರ. ನನ್ನನ್ನು ಅತಿಯಾಗಿ ಸ್ತುತಿಸಬೇಡಿ" ಎಂದರು. "ಮೈಸೂರಿನ ಜನ, ನಾನು ಮಾಡದಿರುವ ಅಕಾರ್ಯಗಳಿಗಾಗಿ ನನ್ನನ್ನು ದೂಷಿಸದಿರಲಿ. ನಾನು ಮಾಡದಿರುವ ಅಪರಾಧಗಳಿಗಾಗಿ ನನ್ನನ್ನು ಅಪರಾಧಿಯಾಗಿ ಮಾಡದಿರಲಿ, ಇಷ್ಟಾದರೆ ಸಾಕು. ನನ್ನ ತೃಪ್ತಿ ಕಂಠಪೂರ್ತಿಯಾದೀತು." ಈ ರೀತಿಯಾಗಿ ನಂಜರಾಜ ಅಯ್ಯಂಗಾರ್ಯರಿಗೆ ಪತ್ರ ಬರೆದಿರುತ್ತಾರೆ.

ವಿಶ್ವೇಶ್ವರಯ್ಯನವರದು ನಿಷ್ಕಳಂಕ ಪರಿಶುದ್ಧ ಜೀವನ. ಅವರ ದೀರ್ಘಾವಧಿಯ ಸಾರ್ವಜನಿಕ ಜೀವನದಲ್ಲಿ ಯಾವ ದೋಷವೂ ಸಿಗದು. ಸರ್ಕಾರದ ಕೆಲಸಕ್ಕೆ ಸರ್ಕಾರದ ವಾಹನ. ಸ್ವಂತ ಕೆಲಸಕ್ಕೆ ಸ್ವಂತ ವಾಹನ. ಕಚೇರಿಯಲ್ಲಿ ಕುಳಿತು ತೊಂದರೆಯಿಲ್ಲದೆ ಕಾಗದಪತ್ರಗಳನ್ನು ವಿಲೇವಾರಿ ಮಾಡಲು ಸಾಧ್ಯವಾಗದಿದ್ದಾಗ ದಫ್ತರಗಳನ್ನು ತೆಗೆದುಕೊಂಡು ಬೆಂಗಳೂರಿನ ಸಮೀಪದ ಕುಂಬಳಗೋಡು, ಹೆಸರುಘಟ್ಟ ಇಲ್ಲಿನ ಪ್ರವಾಸಿ ಮಂದಿರಕ್ಕೆ ಹೋಗಿ ನಿರುಪಾಧಿತ ವಾತಾವರಣದಲ್ಲಿ ಕೆಲಸ ಮಾಡುವರು. ಕೆಲವೊಮ್ಮೆ ಮುದ್ದೇನಹಳ್ಳಿಗೂ ಹೋಗುವುದುಂಟು. ಆಗ ಮಹಾರಾಜರ ಅನುಮತಿ ಪಡೆದು ದೊಡ್ಡ ಸರ್ಕಾರಿ ಮೋಟಾರಿನಲ್ಲಿ ಸಹೋದರ ಎಂ. ರಾಮಚಂದ್ರ ರಾವ್ ಮತ್ತು ಅವರ ಮಕ್ಕಳೊಂದಿಗೆ ಹೋಗುವರು. ಮೋಟಾರಿನಲ್ಲಿ ಹೋಗಲಿರುವ ಬಂಧುಗಳ ಹೆಸರನ್ನು ಮಹಾರಾಜರಿಗೆ ಪೂರ್ವಭಾವಿ ಬರೆದು ಕಳುಹಿಸುವರು. ಜೊತೆಗೆ ಗುಮಾಸ್ತ, ಪೋಲೀಸ್, ಅಂಗರಕ್ಷಕ ಯಾರೂ ಇಲ್ಲ. ಹಳ್ಳಿಯಲ್ಲಿ ವಿದ್ಯುತ್ ಮತ್ತು

ದೂರವಾಣಿ ಸೌಲಭ್ಯವಿಲ್ಲ. ಸರಿಯಾದ ರಸ್ತೆ ಇಲ್ಲ. ತಮ್ಮ ಗ್ರಾಮ ಎಂಬ ಅಭಿಮಾನ ಅಷ್ಟೆ. ಒಂದು ರಾತ್ರಿ ಹಳ್ಳಿಯಲ್ಲಿ ಉಳಿದು ಮಾರನೆಯ ಸಂಜೆ ಬೆಂಗಳೂರಿಗೆ ಹಿಂತಿರುಗುವ ವಾಡಿಕೆ. 'ಬಾಲಬ್ರೂಯಿ' ಬಂಗಲೆಗೆ ಸರ್ಕಾರದ ವಾಹನದಲ್ಲಿ ಹಿಂತಿರುಗು ವರು. ಚಾಮರಾಜ ಪೇಟೆಯ ಸಹೋದರರ ಮನೆಗೆ ಅವರೆಲ್ಲರನ್ನೂ ಸ್ವಂತ ಮೋಟಾರಿನಲ್ಲಿ ಕಳುಹಿಸುವರು. ಒಮ್ಮೆ ತಾಯಿ ಅಕ್ಕಚ್ಚಮ್ಮ ಸರ್ಕಾರದ ಮೋಟಾರಿನಲ್ಲಿ ಹಳ್ಳಿಯಿಂದ ದಿವಾನರ ಬಂಗಲೆಗೆ ಬಂದರು. ದೇಹಾಲಸ್ಯದಿಂದ ಮೋಟಾರಿನಿಂದ ಇಳಿಯಲು ಕಷ್ಟವಾಗಿತ್ತು. ಪರಿಸ್ಥಿತಿ ಗಮನಿಸಿ ತಾಯಿಯನ್ನು ಅದೇ ಮೋಟಾರಿನಲ್ಲಿ ಚಾಮರಾಜಪೇಟೆಗೆ ಒಯ್ಯುವಂತೆ ತಿಳಿಸಿದರು, ಚಾಲಕನಿಗೆ. ಮಗನ ನಿಷ್ಠುರ ನಿಯಮ ಬಲ್ಲ ತಾಯಿ 'ಒಲ್ಲೆ' ಎಂದರು. ಸರ್ಕಾರಿ ವಾಹನದಿಂದ ಇಳಿದು, ಸ್ವಲ್ಪ ವಿಶ್ರಮಿಸಿ ಕೊಂಡು, ಮಗನ ಸ್ವಂತ ಮೋಟಾರಿನಲ್ಲಿ ಚಾಮರಾಜಪೇಟೆಗೆ ತೆರಳಿದರು. "ಅಮ್ಮ, ನನ್ನ ಮಗ ದಿವಾನನಾದನೆಂಬ ಹೆಮ್ಮೆ ನಿನಗೆ. ನಿನ್ನ ನಡತೆಯಿಂದ ಅದಕ್ಕಿಂತ ಹೆಚ್ಚು ಸಂತೋಷವಾಗಿದೆ ನನಗೆ" ಎಂದು ತಾಯಿಗೆ ತಿಳಿಸಿದರು.

ಸಣ್ಣ ವಿಷಯಗಳಲ್ಲೂ ಇದೇ ನಿಷ್ಠುರ ನಿಯಮ. ಪ್ರವಾಸಕ್ಕೆ ಹೊರಟಾಗ ಆಳು ಮತ್ತು ಬಾಣಸಿಗ ಪಾತ್ರೆ, ಸೌದೆ, ಅಕ್ಕಿ, ಬೇಳೆ ಮತ್ತು ಇತರ ಸರಂಜಾಮುಗಳೊಡನೆ ಎತ್ತಿನಗಾಡಿಯಲ್ಲಿ ಮುಂದಾಗಿ ಹೋಗಿ ದಿವಾನರು ಬರುವ ವೇಳೆಗೆ ಉಪಾಹಾರ, ಊಟ ಸಿದ್ಧಮಾಡಿ ಇಟ್ಟಿರುವರು. ಸಣ್ಣಕ್ಕಿ ಅನ್ನ. ಇವರನ್ನು ಕಾಣಲು ಬರುವ ಎಲ್ಲ ಅಧಿಕಾರಿಗಳಿಗೂ ಸಹಪಂಕ್ತಿ ಭೋಜನ. ಪಟೇಲರು ಸೌದೆ, ತರಕಾರಿ ಒದಗಿಸಿದರೆ ಅದಕ್ಕೆ ಹಣ ಕೊಡುವರು. ಎಲ್ಲ ಸರ್ಕಾರಿ ಅಧಿಕಾರಿಗಳಿಗೂ ಪಟೇಲ್ ಮತ್ತು ಶ್ಯಾನುಭಾಗರು ಉಚಿತ ಊಟದ ವ್ಯವಸ್ಥೆ ಮಾಡಿಕೊಡುವುದು ನಡೆದುಬಂದ ಪದ್ಧತಿ. ಅದನ್ನು ಇವರು ಒಪ್ಪರು. ಸರ್ಕಾರ ಪ್ರವಾಸ ವೆಚ್ಚ, ದಿನಭತ್ಯ ನೀಡುತ್ತದೆ. ಆದ ಕಾರಣ ಉಚಿತ ಸೇವೆ ಸ್ವೀಕರಿಸುತ್ತಿರಲಿಲ್ಲ.

ಆಗಿನ ಕಾಲಕ್ಕೆ ವಿದ್ಯುತ್ತಿನ ಸೌಲಭ್ಯ ನಗರಗಳಿಗೆ ಮಾತ್ರ ಲಭ್ಯವಿತ್ತು. ಆದಕಾರಣ ತಮ್ಮ ಜೊತೆಯಲ್ಲಿ ಎರಡು ಕಟ್ಟು ಮೇಣದ ಬತ್ತಿ ಒಯ್ಯುವರು. ಒಂದು ಸರ್ಕಾರದ ವೆಚ್ಚದಲ್ಲಿ ಕೊಂಡ ಮೇಣದ ಬತ್ತಿ, ಇನ್ನೊಂದು ತನ್ನ ಸ್ವಂತದ್ದು. ಇದೇ ರೀತಿಯಲ್ಲಿ ಸರ್ಕಾರದ ಮೊಹರಿನ ಕಾಗದ ಮತ್ತು ತನ್ನ ಸ್ವಂತ ಅಂಕಿತ ಕಾಗದ. ಸರ್ಕಾರದ ಕೆಲಸಕ್ಕೆ ಸರ್ಕಾರದ ಮೇಣದ ಬತ್ತಿ, ಸರ್ಕಾರದ ಕಾಗದ. ಸ್ವಂತ ಕೆಲಸಕ್ಕೆ ಸ್ವಂತದ್ದು. ಸಂದೇಹ ಬಂದಾಗ ಕಾಗದವನ್ನು ಬೆಳಕಿಗೆ ಎತ್ತಿ ಹಿಡಿದು, ಸರ್ಕಾರದ ಒಳಚಿಹ್ನೆ ಇದ್ದಲ್ಲಿ ಸ್ವಂತಕ್ಕೆ ಅದನ್ನು ಬಳಸರು. ಅಷ್ಟು ನಿಷ್ಠುರ ನಡತೆ. ಇದು 'ನಂಬಿದರೆ ನಂಬಿ, ಇಲ್ಲವಾದರೆ ಬಿಡಿ' ಎಂಬ ಕಟ್ಟುಕಥೆಯಲ್ಲ. ನಿಜವಾಗಿ ನಡೆದುದು.

ಪ್ರವಾಸದಲ್ಲಿದ್ದಾಗ ಒಮ್ಮೆ ಚಾಕುವಿನಿಂದ ಪೆನ್ಸಿಲ್ ಹೆರೆಯುತ್ತಿದ್ದಾಗ ಬೆರಳಿಗೆ ಗಾಯಮಾಡಿಕೊಂಡರು. ಸರ್ಕಾರದ ಆಸ್ಪತ್ರೆಯ ವೈದ್ಯನಿಗೆ ಬರುವಂತೆ ಅಪ್ಪಣೆ

ಆಯಿತು. ಔಷಧ, ಪಟ್ಟಿ ಕಟ್ಟಲು ಬಟ್ಟೆ ತೆಗೆದುಕೊಂಡು ವೈದ್ಯ ಧಾವಿಸಿ ಬಂದು ಚಿಕಿತ್ಸೆ ಮಾಡಿ, ಹಿಂತಿರುಗಿದ. ಸ್ವಲ್ಪ ಹೊತ್ತಿನಲ್ಲೇ ದಿವಾನರ ಆಳು ರೂ. 25 ಚೆಕ್ ತೆಗೆದುಕೊಂಡು ವೈದ್ಯನಿಗೆ ಕೊಟ್ಟ. 'ಇದೇನು, ದಿವಾನರಿಗೆ ಸಲ್ಲಿಸಿದ ಸೇವೆಗೆ ಸರ್ಕಾರಿ ನೌಕರನಾದ ನಾನು ಹಣ ತೆಗೆದುಕೊಳ್ಳುವುದೆ" ಎಂದು ವೈದ್ಯ, ದಿವಾನರಲ್ಲಿಗೆ ಬಂದು ಚೆಕ್ ಹಿಂದಕ್ಕೆ ಪಡೆಯುವಂತೆ ಪ್ರಾರ್ಥಿಸಿದ. 'ತಮಗೆ ಸೇವೆ ಸಲ್ಲಿಸುವ ಅವಕಾಶ ದೊರೆತದ್ದು ನನ್ನ ಸೌಭಾಗ್ಯ. ನನ್ನ ಕರ್ತವ್ಯ ನಾನು ಮಾಡಿರುವೆ. ಇದಕ್ಕೆ ಪ್ರತಿಫಲ ಪಡೆಯುವುದು ಉಚಿತವಲ್ಲ' ಎಂದ. ವೈದ್ಯನ ಕರ್ತವ್ಯಪ್ರಜ್ಞೆಯಿಂದ ದಿವಾನರು ಸಂತುಷ್ಟರಾದರು. "ಸಲ್ಲಿಸಿದ ಸೇವೆಗೆ ಅದರ ಪ್ರಯೋಜನ ಪಡೆದವರು ಸ್ವಇಚ್ಛೆಯಿಂದ ಹಣ ಕೊಟ್ಟರೆ ಸ್ವೀಕರಿಸುವುದು ತಪ್ಪಾಗದು. ಆದರೆ ಹಣ ಕೊಟ್ಟರೆ ಮಾತ್ರ ಸೇವೆ ಸಲ್ಲಿಸುವುದಾಗಿ ಹೇಳಿ ಒತ್ತಾಯ ಪಡಿಸುವುದು ತಪ್ಪಾಗುತ್ತದೆ. ಕೊಡಲು ಶಕ್ತರಾದವರಿಂದ ಪಡೆದರೆ, ಕೊಡಲಾರದ ಬಡವರನ್ನು ಶೋಷಿಸುವುದು ತಪ್ಪೀತು. ನಿಮ್ಮ ಕರ್ತವ್ಯ ನೀವು ಮಾಡಿದ್ದೀರಿ. ನನ್ನ ಕರ್ತವ್ಯ ನಾನು ಮಾಡಲು ಅವಕಾಶ ಕೊಡಿ. ಸಂಭಾವನೆ ಸ್ವೀಕರಿಸಿ". ಈ ತೆರನಾಗಿ ಸಮಾಧಾನಪಡಿಸಿ ಚೆಕ್ ಸ್ವೀಕರಿಸುವಂತೆ ಒಪ್ಪಿಸಿದರು.

ನಿವೃತ್ತ ದಿವಾನ್ ವಿಶ್ವೇಶ್ವರಯ್ಯನವರು ಸಾಹುಕಾರ ಮಾಣಿಕ್ಯವೇಲು ಮೊದಲಿಯಾರಿಗೆ ಸೇರಿದ ಬೆಂಗಳೂರು 'ಹೈಗ್ರೌಂಡ್ಸ್'ನಲ್ಲಿನ 'ಅಪಲಾಂಡ್ಸ್' ಬಂಗಲೆಯಲ್ಲಿ ಬಾಡಿಗೆಗೆ ಇದ್ದರು. ಪ್ರತಿ ತಿಂಗಳ ಮೊದಲ ತಾರೀಖು ಬೆಳಿಗ್ಗೆ 7–30 ಘಂಟೆಗೆ ಸರಿಯಾಗಿ ಇವರ ಸೇವಕ ಶುಭ್ರ ಸಮವಸ್ತ್ರ ತೊಟ್ಟು ಮೊದಲಿಯಾರರ ಬಂಗಲೆಗೆ ಬಂದು ಬಾಡಿಗೆ ಚೆಕ್ ಜೊತೆಗೆ ಚೀಟಿ ಅಂಟಿಸಿದ ರಶೀದಿ ತಂದು, ರಶೀದಿ ಪಡೆದು ಹೋಗುತ್ತಿದ್ದ. ಬಾಡಿಗೆ ಮನೆ ಬಿಡಬೇಕಾಗಿ ಬಂತು. ಸ್ವಂತ ಮನೆ ಕಟ್ಟಿಕೊಳ್ಳಿ ಎಂದರು ಸರ್ ಮಿರ್ಜಾ. "ಇದುವರೆಗೂ ನನ್ನ ಜೀವಮಾನ ಬಾಡಿಗೆ ಮನೆಯಲ್ಲಿ ಕಳೆದದ್ದಾಯಿತು. ಇನ್ನೆಷ್ಟು ಕಾಲ ನಾನು ಬದುಕಿರುವೆ? ನನಗೇಕೆ ಸ್ವಂತ ಮನೆ" ಎಂದರು. ಕೆ. ಸಿ. ರೆಡ್ಡಿಯವರು ಮುಖ್ಯಮಂತ್ರಿಗಳಾಗಿದ್ದಾಗ ಕಬ್ಬನ್ ರಸ್ತೆಯ ಹಳೆಯ ಸಣ್ಣ ಬಂಗಲೆಯನ್ನು ದುರಸ್ತಿ ಮಾಡಿಸಿ ತಿಂಗಳಿಗೆ ರೂ. 250 ಬಾಡಿಗೆ ಗೊತ್ತು ಮಾಡಿ ಅವರಿಗೆ ಕೊಡಿಸಿದರು. ಸರ್ಕಾರದ ಈ ಕಟ್ಟಡಕ್ಕೆ 1952ರಲ್ಲಿ ಬಂದರು. ಹೀಗಿರುವಲ್ಲಿ ವೃದ್ಧಾಪ್ಯದಲ್ಲಿ ನೋಡಿಕೊಳ್ಳಲು ಸಮೀಪ ಬಂಧುಗಳು ಈ ಮನೆಯಲ್ಲಿ ಜೊತೆಗೂಡಿ ಇರುವುದು ಉತ್ತಮವೆಂದು ಅದ್ವಾನಿ ಮತ್ತು ಕೆಲವು ಮಿತ್ರರು ಅಯ್ಯನವರನ್ನು ಬಲವಂತಪಡಿಸಿದರು. ಸಹೋದರ ಎಂ. ರಾಮಚಂದ್ರರಾಯರ ಮಗ ಎಂ. ಆರ್. ಕೃಷ್ಣಮೂರ್ತಿ ಹೆಂಡತಿ ಮಕ್ಕಳೊಡನೆ ಈ ಬಂಗಲೆಯಲ್ಲಿರಲು ಅನುಮತಿ ಕೋರಿ ಪತ್ರ ಬರೆದರು. ಲಂಡನ್ನಿನಿಂದ ಆಗಬಹುದೆಂದು ತಂತಿ ಕಳುಹಿಸಿಕೊಟ್ಟರು. ಅಂತ್ಯಕಾಲದ ವರೆಗೂ ಇದೇ ಮನೆಯಲ್ಲಿ ಎಲ್ಲರೂ ಒಟ್ಟಿಗೇ ಉಳಿದರು. ಬಂಗಲೆಗೆ ಸಾಕಷ್ಟು ನೀರು ಪೂರೈಕೆಯಾಗುತ್ತಿರಲಿಲ್ಲ. ಒಂದು ದಿನ ಸ್ನಾನಕ್ಕೆ ನೀರು ಇರಲಿಲ್ಲ. ಇಡೀ ನಗರ ನೀರಿನ ಕೊರತೆಯಿಂದ ತೊಳಲುತ್ತಿತ್ತು. "ಎಲ್ಲರಂತೆಯೇ ನಾನೂ ಒಬ್ಬ

ಈ ಪುರ ನಿವಾಸಿ. ನನಗಾಗಿ ವಿಶೇಷ ಸೌಲಭ್ಯ ಒದಗಿಸಿ ಕೊಡುವಂತೆ ಅಧಿಕಾರಿಗಳಿಗೆ ತಿಳಿಸುವುದು ಬೇಡ" ಎಂದರು ಈ ನಿವೃತ್ತ ದಿವಾನ್ ಸಾಹೇಬರು.

1943ರಲ್ಲಿ ರೇಷನ್ ಪಡಿತರ ವ್ಯವಸ್ಥೆ ಜಾರಿಗೆ ಬಂತು. ಉತ್ತಮ ದರ್ಜೆಯ ಅಕ್ಕಿ ಪೇಟೆಯಲ್ಲಿ ದುರ್ಲಭ. ಅಧಿಕಾರಿಗಳು ಇವರಿಗೆ ಅಗತ್ಯವೆನಿಸಿದ ಸಣ್ಣ ಅಕ್ಕಿ ಕೊಡಲು ಸಿದ್ಧವಾಗಿದ್ದರು. "ಎಲ್ಲರಿಗೂ ಕೊಡುತ್ತಿರುವ ಅಕ್ಕಿಯನ್ನೇ ನನಗೂ ಕೊಡಿ" ಎಂದರು. ಅಂಗಡಿಯವನಿಗೆ ದೊರೆಯುವ ಲಾಭಾಂಶ ತಪ್ಪಿಸಬಾರದೆಂದು ರಂಗ ರಾಯರ ಅಂಗಡಿಯಿಂದಲೇ ರೇಷನ್ ಅಕ್ಕಿ ತರಿಸಿಕೊಳ್ಳುತ್ತಿದ್ದರು. ಅದನ್ನೇ ಬಳಸು ತ್ತಿದ್ದರು.

ಅಂತ್ಯಕಾಲದಲ್ಲಾದರೂ ಸ್ವಂತ ಮನೆಯಲ್ಲಿ ಉಳಿಯುವುದು ಸೂಕ್ತವೆಂದು ಮಿತ್ರ ಗಣ ಒತ್ತಾಯ ಮಾಡುತ್ತಿತ್ತು. ಸ್ನೇಹಿತರ ಒತ್ತಾಯಕ್ಕೆ ಮಣಿದು ತನಗಾಗಿ ಸಣ್ಣ ಬಂಗಲೆ ಕೊಳ್ಳುವಂತೆ ಮೈಸೂರು ಬ್ಯಾಂಕಿನ ಮ್ಯಾನೇಜರ್ ಬಿ. ವಿ. ನಾರಾಯಣ ರೆಡ್ಡಿ ಅವರಿಗೆ ತಿಳಿಸಿದರು. ದಂಡಿನ ಮ್ಯೂಸಿಯಂ ರಸ್ತೆಯಲ್ಲಿ ಒಂದು ಮನೆ ಗೊತ್ತುಮಾಡಿ ಅದರ ಬೆಲೆ ತಿಳಿಸಿದರು. ಮರುಪ್ರಶ್ನಿಸದೆ ಅವರು ಕೇಳಿದ ಮೊತ್ತಕ್ಕೆ ಚೆಕ್ ಬರೆದು ಕೊಟ್ಟರು. ಸೂಕ್ತ ಬೆಲೆಗೆ ಬಂಗಲೆ ಕೊಡಿಸಿದ ಶ್ರಮಕ್ಕಾಗಿ ರೆಡ್ಡಿಯವರಿಗೆ ಕಮಿಷನ್ ಲೆಕ್ಕ ಹಾಕಿ ಚೆಕ್ ಬರೆದು ಕೊಟ್ಟರು. ತಾನು ಸರ್ಕಾರಿ ನೌಕರ ಆದಕಾರಣ ದಳ್ಳಾಳಿಯ ರುಸುಂ ತೆಗೆದುಕೊಳ್ಳಲು ರೆಡ್ಡಿಯವರು ಒಪ್ಪಲಿಲ್ಲ. ಶ್ರಮಕ್ಕೆ ತಕ್ಕ ಪುರಸ್ಕಾರ ಕೊಡಬೇಕಾದದ್ದು ತನ್ನ ಕರ್ತವ್ಯ, ಇದು ತನ್ನ ಕರ್ತವ್ಯ ಎಂದು ವಿಶ್ವೇಶ್ವರಯ್ಯನವರು. ತಾನು ಹಣ ತೆಗೆದುಕೊಂಡರೂ ಅದು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಬೇಕಾಗುತ್ತದೆ. ಇದು ಸರ್ಕಾರದ ನಿಯಮ. ಹೀಗೆಂದು ಹಣ ತೆಗೆದುಕೊಳ್ಳದಂತೆ ನಿರಾಕರಿಸಲು ಬಹಳಷ್ಟು ರೆಡ್ಡಿಯವರು ಶ್ರಮಿಸಬೇಕಾಯಿತು. ಆದರೂ ವಿಶ್ವೇಶ್ವರಯ್ಯನವರು ಕಡೆಯ ಉಸಿರೆಳೆದುದು ಬಾಡಿಗೆಯ ಮನೆಯಲ್ಲೇ. ಇದೇ ರೀತಿಯಲ್ಲಿ ಎಂಜಿನಿಯ ರಿಂಗ್ ಕೆಲಸದಲ್ಲಿ ಸಹಾಯವೆಸಗಿದ ಬಿ. ಎಸ್. ನರಸಿಂಗ ರಾವ್ ಮತ್ತು ಎನ್. ಎನ್. ಐಯ್ಯಂಗಾರ್ ಅವರಿಗೂ ಪುರಸ್ಕಾರವಾಗಿ ಚೆಕ್ ಕೊಟ್ಟರು. ಇವರು ಇದನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಅನುದಾನವಾಗಿ ಕೊಟ್ಟುಬಿಟ್ಟರು. ಇದೇ ರೀತಿಯಲ್ಲಿ ತಮ್ಮ ಪುಸ್ತಕದ ಮುದ್ರಣದ ಕರಡುಪ್ರತಿ "ಪ್ರೂಫ್" ತಿದ್ದಿಕೊಟ್ಟ ಪಿ. ಕೋದಂಡರಾಯರಿಗೂ ಚೆಕ್ ಬರೆದು ಕೊಡಲು ಮರೆಯಲಿಲ್ಲ.

ವಿಶ್ವೇಶ್ವರಯ್ಯನವರು ವಿದೇಶಕ್ಕೆ ಹೋಗಬೇಕಾಗಿತ್ತು. ಸಾಕಷ್ಟು ಹಣ ಕೈಯಲ್ಲಿ ಇರಲಿಲ್ಲ. ಸ್ವಲ್ಪ ಹಣ ಬೇಕಾದೀತು ಬ್ಯಾಂಕಿಗೆ ಬರುತ್ತೇನೆಂದು ಆಗ ಮೈಸೂರು ಬ್ಯಾಂಕಿನ ಮ್ಯಾನೇಜರ್ ಆಗಿದ್ದ ಬಿ. ವಿ. ನಾರಾಯಣ ರೆಡ್ಡಿಯವರಿಗೆ 'ಟೆಲಿಫೋನ್' ಮಾಡಿ ತಿಳಿಸಿದರು. ಬೆಳಿಗ್ಗೆ 11–15 ಘಂಟೆಗೆ ಸರಿಯಾಗಿ ಬಂದರು. ರೆಡ್ಡಿಯವರು ಮಹಾದ್ವಾರದ ಬಳಿ ಕಾದಿದ್ದು ಇವರನ್ನು ಸ್ವಾಗತಿಸಿದರು. ರುಜು ಮಾಡಲು

ಸಾಲದ ಕಾಗದ ಪತ್ರ ಸಿದ್ಧವಾಗಿತ್ತು. ಸಾಲದ ಭದ್ರತೆಗಾಗಿ ಇಂಡಿಯಾ ಸರ್ಕಾರದ ಸಾಲದ ಪತ್ರಗಳನ್ನು ತಾವು ತಂದಿದ್ದ ಚೀಲದಿಂದ ತೆಗೆದು ಮೇಜಿನ ಮೇಲಿಟ್ಟರು. ಜಾಮೀನಿಗಾಗಿ 'ಬಾಂಡ್' ಪತ್ರ ತಾವು ಕೊಡಬೇಕಾದ ಅಗತ್ಯವಿಲ್ಲ. ವ್ಯಕ್ತಿಯ ಪ್ರಾಮಾಣಿಕತೆ, ನಾಣ್ಯತೆ ಬ್ಯಾಂಕ್ ಬಲ್ಲದು. ತಮ್ಮ ಹೆಸರೇ ಸಾಕು ಜಾಮೀನಿಗೆ ಎಂದರು ರೆಡ್ಡಿಯವರು. ಬಡ್ಡಿ ಶೇಕಡಾ ಮೂರುವರೆ. "ಇದೇನು ಇಷ್ಟು ಕಡಿಮೆ ದರ. ನನಗಾಗಿ ವಿಶೇಷ ರಿಯಾಯಿತಿ ತೋರುವುದು ಬೇಡ. ಎಲ್ಲರಿಗೂ ವಿಧಿಸುವ ಬಡ್ಡಿ ನನಗೂ ವಿಧಿಸಿ" ಎಂದರು. ತನ್ನ ದೀರ್ಘಾವಧಿಯ ಅನುಭವದಲ್ಲಿ ಹೆಚ್ಚು ಬಡ್ಡಿ ವಿಧಿಸುವಂತೆ ಕೇಳಿಕೊಂಡ ವ್ಯಕ್ತಿಯನ್ನು ಕಂಡಿಲ್ಲ ಎಂದಿರುತ್ತಾರೆ ನಾರಾಯಣ ರೆಡ್ಡಿಯವರು.

ರಾಣಿ ಅಮೃತ್ ಕೌರ್ ಅವರು ಕೆಲಕಾಲ ಮಹಾತ್ಮ ಗಾಂಧಿಯವರ ಆಪ್ತ ಕಾರ್ಯದರ್ಶಿಯಾಗಿದ್ದರು. ಸ್ವಾತಂತ್ರ್ಯಾನಂತರ ಕೇಂದ್ರ ಸಂಪುಟದಲ್ಲಿ ಆರೋಗ್ಯ ವಿಭಾಗದ ಸಚಿವೆ ಆದರು. ದಿಲ್ಲಿಯಲ್ಲಿದ್ದಾಗ ಇವರನ್ನು ಕಾಣಲು ವಿಶ್ವೇಶ್ವರಯ್ಯನವರು ಇವರ ಬಂಗಲೆಗೆ ಹೋದರು. ಶ್ರೀಮತಿಯವರ ಭೋಜನ ಮುಗಿಯುವ ವರೆಗೆ ಕಾದು ಕುಳಿತಿದ್ದರು. ಶ್ರೀಮತಿ ಕೌರ್, ಅವರ ಸಹೋದರ ಮಹಾರಾಜ ಸಿಂಗ್ ಅವರೊಡನೆ ಹೊರಬಂದರು. ಮಹಾರಾಜ ಸಿಂಗ್ ಬೊಂಬಾಯಿ ಪ್ರಾಂತದ ರಾಜ್ಯಪಾಲರಾಗಲಿರುವ ಸಂತಸದ ಸುದ್ದಿ ತಿಳಿಸಿದರು. "ನೀವು ರಾಜ್ಯಪಾಲರಾಗುವುದು ಸಂತೋಷ. ಆದರೆ ಅದಕ್ಕಾಗಿ ನಾನು ನಿಮ್ಮನ್ನು ಈಗಲೇ ವಂದಿಸಲಾರೆ. ನಿಮ್ಮ ಕಾರ್ಯನಿರ್ವಹಣೆ ಗಮನಿಸಿ ನೋಡುವೆ. ದಕ್ಷತೆ, ದೃಢತೆ ಮತ್ತು ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸಿದಾಗ, ನೀವು ವಂದನಾರ್ಹರಾಗುವಿರಿ. ಆಗ ನಿಮಗೆ ವಂದನೆ ಸಮರ್ಪಿಸುವೆ" ಎಂದರು.

ವಿಶ್ವೇಶ್ವರಯ್ಯನವರ ವಯಸ್ಸು ನೂರು ಆಗಿತ್ತು. ಶಕ್ತಿಹೀನರಾಗಿ ಹಾಸಿಗೆ ಹಿಡಿದಿದ್ದರು. ಕಣ್ಣು ಕಾಣಿಸುತ್ತಿತ್ತು. ಕಿವಿ ಸ್ವಲ್ಪ ಮಂದ. ರಕ್ಷಣ ಇಲಾಖೆಯ ನಿವೃತ್ತ ಕಾರ್ಯದರ್ಶಿ ಎಂ. ಕೆ. ವೆಲ್ಲೋಡಿ ಅವರು ವಿಶ್ವೇಶ್ವರಯ್ಯನವರ ಕ್ಷೇಮ ಸಮಾಚಾರ ವಿಚಾರಿಸಲು ಬಂದರು. ಅಯ್ಯನವರು ಮೆಲುದನಿಯಲ್ಲಿ ಭಾರತದ ಭವಿಷ್ಯ, ಪಾಂಚವಾರ್ಷಿಕ ಯೋಜನೆ ಇವುಗಳನ್ನು ಕುರಿತು ಮಾತನಾಡುತ್ತ ಸಂತಾನ ನಿರೋಧದ ಮಾತೆತ್ತಿದರು. ಜಪಾನಿನಲ್ಲಿರುವಂತೆ ಸಂತಾನ ಹರಣ ಶಸ್ತ್ರಚಿಕಿತ್ಸೆ ಕಡ್ಡಾಯ ಮಾಡುವಂತೆ ತನ್ನ ಅಭಿಮತ ಪ್ರಧಾನಿ ನೆಹರು ಅವರಿಗೆ ತಿಳಿಯ ಹೇಳಿದರು. ಶತಾಯುಷಿಗೆ ದೇಶದ ಭವಿಷ್ಯದ ಚಿಂತೆ !

•

ಸಾಹಿತ್ಯ ಅಕಾಡಮಿಯ ಪ್ರಶಸ್ತಿ ವಿಜೇತ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು 1977–78ರಲ್ಲಿ ಅಮೇರಿಕಾಗೆ ಪ್ರವಾಸಿಯಾಗಿ ಪತ್ನೀಸಮೇತ ಹೋಗಿದ್ದರು. ಆಗ 'ಹಂಗ್ರಿ ಹಾರ್ಸ್' ಎಂಬ ವಿಚಿತ್ರ ಹೆಸರಿನ ಅಣೆಕಟ್ಟು ನೋಡಲು ದಯಮಾಡಿಸಿದ್ದರು. ಅವರು ಅಣೆಕಟ್ಟಿನ ಕಚೇರಿಗೆ ಹೋದಾಗ 75 ವಯಸ್ಸು ಮೀರಿದ್ದ ಸೆಕ್ಯೂರಿಟಿ ಅಧಿಕಾರಿ

ಕೇಳಿದ, "ನಿಮ್ಮ ಛೀಫ್ ಇಂಜಿನಿಯರ್ ವಿಶ್ವೇಶ್ವರಾಯನವರು ಇನ್ನೂ ಇದ್ದಾರೆಯೇ" ಎಂದು. ಅದಕ್ಕೆ ಗೊರೂರರು, "ಇಲ್ಲ, ಈಚೆಗೆ 102ನೆಯ ವಯಸ್ಸಿನಲ್ಲಿ ತೀರಿ ಕೊಂಡರು" ಎಂದು. ಈ ಮಾತು ಕೇಳಿ ಆ ಅಧಿಕಾರಿ ಎಂದ, "ಗ್ರಾಂಡ್ ಓಲ್ಡ್ ಮ್ಯಾನ್, ಇಂಜಿನಿಯರಿಂಗ್ ಜಯಂಟ್, ಇಲ್ಲಿಗೆ ಬಂದಿದ್ದರು. ಆಗ ಅಮೇರಿಕದ ಛೀಫ್ ಇಂಜಿನಿಯರುಗಳೆಲ್ಲ ಇಲ್ಲಿ ಸೇರಿದ್ದರು. ಅವರು ಅನೇಕ ಗಂಟೆಗಳ ಕಾಲ ಎಲ್ಲವನ್ನೂ ಪರಿಶೀಲಿಸಿ, ಅತ್ಯುತ್ತಮ ಸಲಹೆಗಳನ್ನು ಕೊಟ್ಟರು". ವಿಶ್ವೇಶ್ವರಯ್ಯನವರ ಎಂಜಿನಿಯ ರಿಂಗ್ ಸಾಮರ್ಥ್ಯ ಸಪ್ತಸಾಗರಗಳನ್ನೂ ದಾಟಿ ಅಮೇರಿಕದಲ್ಲೂ ಪ್ರಸಿದ್ಧವಾಗಿತ್ತು.

ನಮ್ಮ ದೇಶದಲ್ಲಿ ತತ್ವಬೋಧನೆಗೂ, ಆಚರಣೆಗೂ ಅಜಗಜಾಂತರ ವ್ಯತ್ಯಾಸ. "ತತ್ವಂ ಬ್ರವೀಮಿ ಪರತತ್ವ ಹಿತಂ ಬ್ರವೀಮಿ । ನಾನ್ಯಂ ಬ್ರವೀಮಿ ಪರಲೋಕ ಹಿತಂ ಬ್ರವೀಮಿ ।" ಎಂದು ಧರ್ಮ, ಸದ್ಗತಿ, ಮೋಕ್ಷ ಇವುಗಳನ್ನು ಕುರಿತು ಹೇಳುವವರ ಸಂಖ್ಯೆಗೆ ಕೊರತೆ ಇಲ್ಲ. ಹೇಳುವವರು ಹೇಳುವಂತೆ ನಡೆದುಕೊಳ್ಳುವುದಿಲ್ಲ. ಆದರೆ ವಿಶ್ವೇಶ್ವರಯ್ಯನವರು ಈ ನಿಯಮಕ್ಕೆ ಲೋಪ ತಂದವರು. ವಿಶ್ವೇಶ್ವರಯ್ಯನವರ ಜೀವದ ಧ್ಯೇಯವನ್ನು ಖ್ಯಾತ ಸಾಹಿತಿ, ರಾಜಕಾರಣಿ ಡಿ. ವಿ. ಗುಂಡಪ್ಪನವರು ಈ ರೀತಿ ಯಲ್ಲಿ ನುಡಿದಿರುತ್ತಾರೆ. "ತನ್ನ ದಿನನಿತ್ಯದ ಕರ್ಮಗಳು ವಿಧಿಬದ್ಧವಾದುದರಿಂದ ತನ್ನ ಹೊಣೆ ಮತ್ತು ಕರ್ತವ್ಯಗಳಿಗೆ ತಾನು ಜವಾಬ್ದಾರನಲ್ಲವೆಂದು ಉಪೇಕ್ಷೆಯಿಂದ ನಡೆದುಕೊಳ್ಳುವುದು ಮತ್ತು ತನ್ನ ಕರ್ತವ್ಯವನ್ನು ಕಡೆಗಣಿಸುವುದು ಜನರಿಗೆ ಸ್ವಾಭಾವಿಕ ವಾಗುತ್ತದೆ. ಈ ನಿಸ್ಸಹಾಯಕ ಭಾವನೆ ತೊಲಗಬೇಕೆಂದು ಅವರು ಸದಾ ಹವಣಿಸು ತ್ತಿದ್ದರು." ವಿಶ್ವೇಶ್ವರಯ್ಯನವರು ವಿಧಿ, ಕರ್ಮ, ಲಲಾಟಲಿಪಿ ಈ ಸೋಲುಭಾವನೆಯ ವಿರುದ್ಧ ಹೋರಾಡಿದರು. ಮಾತು ಕೃತಿಗಳಿಂದ ತಮ್ಮ ಬದುಕನ್ನೇ ಆದರ್ಶವಾಗಿ ಮಾಡಿ ವಿಭೂತಿ ಪುರುಷ ಎನಿಸಿಕೊಂಡರು.

'ಜಾತಸ್ಯ ಮರಣಂ ಧ್ರುವಂ'. ಈ ನಿಯಮ ಜೀವಜಂತುಗಳಿಗೂ ಸಸ್ಯಗಳಿಗೂ ಅನ್ವಯಿಸುತ್ತದೆ. ಕಾಲಕ್ರಮೇಣ ದೇಹಯಂತ್ರ ಕ್ಷೀಣಿಸುತ್ತ ಬರುತ್ತದೆ. ಯಾವ ಮಾನವನೂ ಈ ನಿಯಮದಿಂದ ಬಂಧಿತನಾಗದೆ ಇರಲಾರ. ವಿಶ್ವೇಶ್ವರಯ್ಯನವರೂ ಇದಕ್ಕೆ ಹೊರತಾಗಿರಲಿಲ್ಲ. ಅವರ 98ನೆಯ ವಯಸ್ಸಿನಲ್ಲಿ ಸುಪ್ರಸಿದ್ಧ ನೇತ್ರತಜ್ಞ ಡಾಕ್ಟರ್ ಎಂ. ಸಿ. ಮೋದಿ ಅವರ ಕಣ್ಣು ಪರೀಕ್ಷಿಸಿದರು. ಆ ವಯಸ್ಸಿನಲ್ಲೂ ಅಯ್ಯನವರು ಕನ್ನಡಕ ಬಳಸದೆ ಓದುತ್ತಿದ್ದರು. ಕಣ್ಣಿನ ಪರೀಕ್ಷೆಯಿಂದ ಹ್ರಸ್ವದೃಷ್ಟಿ ಮತ್ತು ಪೊರೆ ಬೆಳೆಯುತ್ತಿದ್ದುದು ಕಂಡುಬಂತು. ಇಷ್ಟು ದೀರ್ಘಕಾಲ ನಿರೋಗಿಯಾಗಿ ಬಾಳುತ್ತಿದ್ದ ಅವರ ದೇಹ ಕ್ಷೀಣಿಸತೊಡಗಿತು. ಗುಟುಕು ನೀರು ಸೇವಿಸುವುದೂ ಶ್ರಮ ವೆನಿಸುತ್ತಿತ್ತು. 49 ವರ್ಷ ಕಾಲ ಇವರ ವೈದ್ಯರಾಗಿದ್ದ ಡಾಕ್ಟರ್ ನಂಜಪ್ಪನವರು ಚಿಕಿತ್ಸೆ ನೀಡುತ್ತಿದ್ದರು. ಅವರು ರೋಗಪೀಡಿತರಾಗಿ ನರಳುತ್ತಿರಲಿಲ್ಲ. ದೇಹ ಸವೆದಿತ್ತು. ಗಂಧದ ಕೊರಡಿನಂತೆ ದೇಶಸೇವೆಯಲ್ಲಿ ಚಿಂತಿಸಿ, ಶ್ರಮಿಸಿ ದೇಹ ಕ್ಷೀಣ ಸಿತ್ತು. ತಮ್ಮ ಆದರ್ಶ ಜೀವನದಿಂದ, ದೇಶಸೇವೆಯಿಂದ ಇಡೀ ದೇಶವೇ ತಮಗೆ

ಕೃತಜ್ಞರಾಗಿರುವಂತೆ ಮಾಡಿಕೊಂಡಿದ್ದರು. ಮಾಡಬೇಕಾದ್ದು ಇನ್ನೇನೂ ಉಳಿದಿರಲಿಲ್ಲ. ಕಡೆಯ ಉಯಿಲನ್ನೂ ಬರೆದಿಟ್ಟುದಾಗಿತ್ತು. ತಮ್ಮ ಅಂತ್ಯಕ್ರಿಯೆಗಾಗಿ ಸ್ವಲ್ಪ ಹಣವನ್ನು ಪ್ರತ್ಯೇಕವಾಗಿ ತೆಗೆದಿರಿಸಿದ್ದರು! ದೀರ್ಘಕಾಲ ಸಾರ್ಥಕ ಬಾಳ್ವೆ ಬಾಳಿ ತಮ್ಮ 102ನೆಯ ವಯಸ್ಸಿನಲ್ಲಿ ಇಹಲೋಕ ತ್ಯಜಿಸಿದರು. ಅವರ ಅಂತ್ಯ ಇಚ್ಛೆಯಂತೆ ಮೃತ ಶರೀರವನ್ನು ಮುದ್ದೇನಹಳ್ಳಿಗೆ ಒಯ್ದು, ಸಕಲ ಸರ್ಕಾರದ ಗೌರವದೊಡನೆ ಅಗ್ನಿದೇವನಿಗೆ ಅರ್ಪಿಸಲಾಯಿತು. ಅವರು ದಿವಂಗತರಾದುದು ಏಪ್ರಿಲ್ 12, 1962 ಬೆಳಗ್ಗೆ 6–15 ಘಂಟೆಗೆ.

---

**Printed at Saraswati Art Printers, 8247/2, New Anaj Mandi, Delhi-110006**